ಮೊದಲನೆಯ ಮುದ್ರಣ : ೧೯೪೮



ಬೆಲೆ : ೨-೪-೦

ಪ್ರಕಾಶಕರು : ಕೆ. ಚಿದಂಬರಂ, ಕಾವ್ಯಾಲಯ, ಮೈಸೂರು

ಮುದ್ರಣಕಾರರು :

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್,
ಮೈಸೂರು

# ಮುನ್ನುಡಿ

" ಲೋಕೋ ನಿಯಮ್ಯತ ಇವಾತ್ಮದಶಾಂತರೇಷು."—ಕಾಳಿದಾಸ

ಈ ಪುಸ್ತಕದಲ್ಲಿರುವ ಹನ್ನೆರಡು ಸಣ್ಣ ಕಥೆಗಳೂ " ಪ್ರಬುದ್ಧ ಕರ್ಣಾಟಕ " ಕ್ಕಾಗಿ ಬರೆದು ಅದರಲ್ಲಿ ಆಗಿಂದಾಗ್ಗೆ ಪ್ರಕಟಿಸಿದವುಗಳು. ಅವು ಯಾವ ಯಾವ ವರ್ಷದಲ್ಲಿ ಯಾರ ಯಾರ ಹೆಸರಿನಲ್ಲಿ ಬಂದು ವೆಂಬುದನ್ನು ಆಯಾ ಕಥೆಯ ಕೊನೆಯಲ್ಲಿ ಸೂಚಿಸಿದೆ.

ಇವುಗಳನ್ನು ಕೂಡಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂಬ ಉದ್ದೇಶವಿರಲಿಲ್ಲ. ಆದರೆ ಈಗ ಹೀಗೆ ಬರಲು ಎರಡು ಸಂದರ್ಭಗಳು ಕಾರಣವಾದುವು. ಮೊದಲನೆಯದು, ನನ್ನ ಮಿತ್ರರಾದ ಶ್ರೀಮಾನ್ ಕೂಡಲಿ ಚಿದಂಬರಂ ಅವರ ವಿಶ್ವಾಸದ ಒತ್ತಾಯ. ಎರಡನೆಯದು ಈಚೆಗೆ ನನ್ನ ಜೀವನದಲ್ಲಿ ಒದಗಿದ ಒಂದು ಸಾಂಸಾರಿಕ ಘಟನೆ. ಅದನ್ನು ಮುಖಪತ್ರದ ಮೇಲಣ ಚಿತ್ರದಲ್ಲಿಯೂ ಒಳಗಿನ ಕುದಿ ನೆನಪಿನಲ್ಲಿಯೂ ಕಾಣಬಹುದು. ಆ ಬಗ್ಗೆ ವಿವರಣ ರೂಪವಾಗಿ ಇಲ್ಲಿ ಎರಡು ಮಾತು ಹೇಳುವುದು ಆವಶ್ಯಕ.

ಸ್ವಭಾನು ಸಂವತ್ಸರದ ಮಾಘ ಶುದ್ಧ ಸಪ್ತಮಿ. ಅಂದು ಬೆಳಗ್ಗೆ ಸ್ನಾನ ಆಹ್ನಿಕಗಳನ್ನು ತೀರಿಸಿಕೊಂಡು, ಮನೆಯಲ್ಲಿ ಇರಲಾರದೆ, ಹೊರ ಹೊರಟು ಕುಕ್ಕರ ಹಳ್ಳಿಯ ಕೆರೆಯ ಏರಿಯಮೇಲೆ ಹೋಗುತ್ತಿದ್ದೆ. ಅಂದಿಗೆ ನನ್ನ ಮಗಳು ಕಮಲು " ಸ್ವಾಮಿ "ಯ ಪಾದವನ್ನು ಸೇರಿ ಮೂರು ತಿಂಗಳ ಮೇಲಾಗಿದ್ದರೂ ಬೆಂದೊಡಲಿನ ಕುದಿಗಾವು ಇನ್ನೂ ಆರಿರಲಿಲ್ಲ. ದೇವರು ನನಗೆ ಈ ಸಂಕಟವನ್ನು ಏಕೆ ಕೊಟ್ಟ ? ನಾನು ಮಾಡಿದ ಅಂಥ ಪಾಪವೇನು ? ನನ್ನ ಪಾಲಿಗೆ ಬಂದ ಎರಡು ಅಕ್ಷರ ಮೂರು ಕಾಸು ಹೊರತು ನಾನು ಸಂತೋಷ ಪಡತಕ್ಕದ್ದು ಮತ್ತೇನಿದೆ ? ನಾನು ಕಾಣದಿದ್ದ ಕಷ್ಟವಾವುದು ? ಬಾಳೆಲ್ಲಾ ಹೀಗೆ ಮೇಲಿಂದ ಮೇಲೆ ತಪಿಸುತ್ತಿರುವುದೇ ಆಗಿದೆಯಲ್ಲ ! ದೇವರಿಗೆ ಏಕೆ ಕರುಣೆಯಿಲ್ಲ ? ಮನಸ್ಸಿಗೆ ಪುಣ್ಯಪಾಪಾದಿಗಳ ಯಾವ ತಂಟೆ ತಾಪತ್ರಯಗಳನ್ನೂ ಹತ್ತಿಸಿ

ಕೊಳ್ಳದೆ ಸ್ವಚ್ಛಂದವಾಗಿದ್ದುಕೊಂಡು ನಿರಾತಂಕವಾಗಿ ನಲಿಯುತ್ತಿರುವವರು ಇಲ್ಲವೇ? ಧರ್ಮಕರ್ಮಗಳೆಂದು ಹೆದರಿಕೊಂಡು ನಡೆಯುವವರು ಸಂಕಟ ಪಡುವುದೇ ಆಗಿರಬೇಕೇ? ಇದರ ತತ್ತ್ವವೇನು?—ಎಂದು ಮುಂತಾದ ಪ್ರಶ್ನೆಗಳು ಸಂತತವಾಗಿ ಬಾಧಿಸುತ್ತಿದ್ದುವು. ಇವು ಹೀಗೆ ಮನಸ್ಸನ್ನು ಕಡೆಯುತ್ತಿರುವಾಗ ಬಲಕ್ಕೆ ತಿರುಗಲು ಕೆಳಗೆ ನೀರಿನ ಅಂಚಿನಲ್ಲಿ ಒಂದು ನೋಟ ಕಣ್ಣಿಗೆ ಬಿತ್ತು.

ಒಬ್ಬ ಬೈರಾಗಿ ಸ್ನಾನ ಮಾಡಿ ಜಟಾ ಕೋಪೀನ ಧಾರಿಯಾಗಿ, ಶೀರ್ಣದೇಹಿಯಾದರೂ ಸ್ಥಾಣುವಿನಂತೆ, ಪದ್ಮಾಸನದಲ್ಲಿ ಕುಳಿತು ಧ್ಯಾನಮಾಡುತ್ತಿದ್ದಾನೆ. ಮುಂದೆ ಸ್ವಲ್ಪ ಮುಂಚೆ ಹಾಕಿದ್ದ ಸಾಂಬ್ರಾಣಿಯ ಧೂಪವು ಇನ್ನೂ ಸ್ವಲ್ಪ ಹೊಗೆಯಾಡುತ್ತಿದೆ. ಅದರ ಸುವಾಸನೆಯು ಸುತ್ತಲೂ ಸೂಕ್ಷ್ಮವಾಗಿ ಹರಡಿಕೊಂಡಿದೆ. ಅವನು ಕುಳಿತಿದ್ದದ್ದು ಕಾಡುಗಲ್ಲಿನ ಮೇಲೆ ಬಲಕ್ಕೆ ಕಡಿದಾದ, ಕಲ್ಲು ಕಲ್ಲಾದ, ಕೊರಕಲು ಕೊರಕಲಾದ ಏರಿ, ಎಡಕ್ಕೆ ಬಹು ದೂರದವರೆಗೆ ಒಂದೇ ಮಟ್ಟಕ್ಕೆ ಹರಡಿಕೊಂಡು ಎಳ ಬಿಸಿಲಿನಲ್ಲಿ ಹೊಳೆಯುತ್ತಿರುವ ಅಲೆಅಲೆಯಾದ ತಿಳಿನೀರು; ಅಲ್ಲಿಂದಾಚೆಗೆ ಹಸುರು ಹುಲ್ಲು ಬೆಳೆದಿರುವ ಬೋರೆ; ಅದರ ಮೇಲುಗಡೆಗೆ ಪೂರ್ವಪಶ್ಚಿಮವಾಗಿ ಉದ್ದಕ್ಕೂ ಹೋಗುತ್ತಿರುವ ರಾಜ ಮಾರ್ಗ; ಅದಕ್ಕೆ ಸೇರಿದಂತೆ ನಿಂತಿರುವ ಒಂದು ಭವ್ಯಭವನ; ಅದರ ಮೇಲೆ ಶೂನ್ಯವಾದ ಅನಂತವಾದ ನೀಲಾಕಾಶ. ಇವುಗಳ ನಡುವೆ ' ನಿವಾತ ನಿಷ್ಕಂಪ ಪ್ರದೀಪ' ದಂತೆ ಧ್ಯಾನಮಗ್ನನಾಗಿ ಕುಳಿತಿರುವ ನಿಶ್ಚಲ ಮೂರ್ತಿ. (ಅವನ ಪದತಲದಲ್ಲಿರುವ ಕಮಲವು ಕಲ್ಪಿತ, ಭಗವಂತನ ಸಾನ್ನಿಧ್ಯವನ್ನು ಸೇರಿದ್ದ ಕಿರು ಜೀವದ ಪ್ರತೀಕ.) ಅವನು ತನ್ನ ಆ ಧ್ಯಾನಮೌನದಿಂದ, ಸಣ್ಣಗೆ ಹಾಯುತ್ತಿದ್ದ ಧೂಪದ ಹೊಗೆಯನ್ನು ಮುಂದಿಟ್ಟುಕೊಂಡು, ನನ್ನ ಸಮಸ್ಯೆಗೆ ಒಂದು ವಿಧವಾದ ಉತ್ತರವನ್ನು ಚೋದಿಸಿದಂತಾಯಿತು.

ಭಗವಂತನ ಸೃಷ್ಟಿ ಚಿತ್ರವಿಚಿತ್ರವಾಗಿದೆ. ಅದರಲ್ಲಿ ಒಂದೊಂದು ವಸ್ತುವಿನ ಸ್ವರೂಪ ಒಂದೊಂದು ಬಗೆಯದು. ಅದು ಏಕೆ ಹಾಗಿದೆಯೋ, ಹಾಗಿರಬೇಕೋ, ಅವನಿಗೇ ಗೊತ್ತು! ಜಟಕಾ ಗಾಡಿಯ ಕುದುರೆ ಲಂಗು

ಲಗಾಮುಗಳನ್ನು ಕಟ್ಟಿಸಿಕೊಂಡು ದುಡಿದೇ ದುಡಿಯುತ್ತದೆ; ಪಟ್ಟದ ಕುದುರೆ ವಸ್ತ್ರಾಭರಣ ಭೂಷಿತವಾಗಿ ರಾಜವೈಭವದಿಂದ ಪೂಜೆ ಮಾಡಿಸಿ ಕೊಳ್ಳುತ್ತದೆ. ಆಡು ಬಡಜಂತುವಾಗಿದ್ದು ಬೆಳಗೆದ್ದರೆ ಅಸಹಾಯ ವಾಗಿ ಕಟುಕನ ಕೈಯಲ್ಲಿ ಕಡಿಸಿಕೊಳ್ಳುತ್ತದೆ. ಆನೆ ಬೃಹದಾಕಾರ ತಳೆದು ಅರಮನೆ ಗುರುಮನೆಗಳ ಮುಂದೆ ಘನಗಂಭೀರವಾಗಿ ಬಾಳು ತ್ತದೆ. ಮೊಲ್ಲೆ ಮಲ್ಲಿಗೆ ಸಂಪಗೆ ಜಾಜಿ ಹೂವುಗಳು ಮೃದುಮೃದು ವಾಗಿ, ಬಣ್ಣಬಣ್ಣವಾಗಿ, ಸುವಾಸನೆಯನ್ನು ಬೀರಿ ಪೂಜಾವಸ್ತುವಾಗು ತ್ತವೆ; ತೆಂಗು ಹೊಂಗೆ ಮುಂತಾದ ಹೂಗಳು ಒರಟಾಗಿ, ಕಟುವಾಗಿ, ತಾವಾಗಿ ಉದುರಿ ತಿಪ್ಪೆಯಂತೆ ಬಿದ್ದಿದ್ದರೂ ಕೇಳುವವರಿಲ್ಲದೆ, ದಾರಿ ಹೋಕರು ಅವನ್ನು ಕಚಪಚನೆ ತುಳಿದು ಹಾಕುತ್ತಾರೆ. ಅದರ ಜನ್ಮ ಹಾಗೇ, ಇದರ ಜನ್ಮ ಹೀಗೇ. ಹೂವು ದೇವರ ತಲೆಯ ಮೇಲೆ ಕೂತು ಬಾಡಿ ನಿರ್ಮಾಲ್ಯವಾಗಬೇಕು; ಸಾಂಬ್ರಾಣಿ ಅವನ ಮುಂದೆ ಬೆಂಕಿಗೆ ಬಿದ್ದು ಕುದಿದು ಹೊಗೆಯಾಡಿ ಅದೃಶ್ಯವಾಗಬೇಕು; ಆಗಲೇ ಅದಕ್ಕೆ ಮುಗಿವು, ಮುಕ್ತಿ; ಆಗಲೇ, ಪ್ರಾಯಶಃ, ಅದರ ಜನ್ಮ ಸಾರ್ಥಕ, ಸೃಷ್ಟಿ ಸಫಲ. ಅದನ್ನು ಹೂವಿನಂತೆ ನೋಯಿಸದ ಹಾಗೆ ಮುಡಿದರೆ ಅದರಿಂದ ವಾಸನೆ ಹೊರಟೀತೇ? ಹರಡೀತೇ? ಕುಟ್ಟಿದರೆ, ಕೇರಿದರೆ ಬಂದೀತೇ? ಬೆಂಕಿಗೇ ಹಾಕಬೇಕು, ಆಗ ಅದು ತನ್ನ ಸುವಾಸನೆ ಯನ್ನು ಕೊಟ್ಟು ಅದೃಶ್ಯವಾಗಬೇಕು ಈ ಅಗ್ನಿಸಂಸ್ಕಾರ ಅದಕ್ಕೆ ಉಪ ಕಾರವೋ ಅಪಕಾರವೋ, ಸುಖವೋ ಕಷ್ಟವೋ, ಹೇಳಬಲ್ಲವರಾರು? ಸಾಂಬ್ರಾಣಿಯು ಒರಟು ಪದಾರ್ಥ—ಅತ್ತಲಾಗಿ ಕಲ್ಲಲ್ಲ, ಇತ್ತಲಾಗಿ ಮಣ್ಣಲ್ಲ. ಅದರಲ್ಲಿ ಅಂದವಿಲ್ಲ, ಚಂದವಿಲ್ಲ; ಬಣ್ಣವಿಲ್ಲ, ಬೆಡಗಿಲ್ಲ; ಹೂವು ಸುಂದರವಾಗಿದ್ದು, ರಸರಸವಾಗಿ ಮಕರಂದದಿಂದೊಡಗೂಡಿ, ಮುಟ್ಟಿದರೆ, ಮುಡಿದರೆ, ನಲುಗಿ, ಬಾಡಿ ನಿರ್ಮಾಲ್ಯವಾಗುತ್ತದೆ. ಇದು ಅದರಲ್ಲಿ ಒಂದು ಗುಣವೇ? ಇದಕ್ಕಾಗಿ ಹೂವಿಗೆ ಶ್ಲಾಘನೆ ಸಲ್ಲಬೇಕೇ? ಸಾಂಬ್ರಾಣಿ ಶುಷ್ಕವಾಗಿ ಕಟುಕಲಾಗಿದ್ದು ಬೆಂಕಿಯ ಮೇಲೆ ಹಾಕಿ ಸುಟ್ಟ ಹೊರತು ವಾಸನೆ ತೋರದು; ಇದು ಅದರಲ್ಲಿ ಒಂದು ದೋಷವೇ? ಇದಕ್ಕಾಗಿ ಸಾಂಬ್ರಾಣಿಗೆ ದೂಷಣೆ ಸಲ್ಲಬೇಕೇ? ಶಿಕ್ಷೆ

ಯಾಗಬೇಕೇ? ಶಿಕ್ಷೆರಕ್ಷೆಗಳು, ಕಷ್ಟಸುಖಗಳು, ಯಾರು ಯಾರಿಗೆ ಲಭಿಸುತ್ತವೆಯೋ, ಏಕೆ ಲಭಿಸುತ್ತವೆಯೋ, ಹೇಗೆ ಲಭಿಸುತ್ತ ವೆಯೋ, ಅವು ಯಾರ ಕೈಯಲ್ಲಿವೆಯೋ! ಯಾವುದು ಸರಿಯೋ ಯಾವುದು ತಪ್ಪೋ, ಯಾವುದು ಗುಣವೋ ಯಾವುದು ದೋಷವೋ, ಅವಕ್ಕೆ ಯಾರು ಜವಾಬುದಾರರೋ, ಏನು ಫಲವೋ! ಭಗವದ್ಗೀತೆಯು

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |
ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ|| —೩-೨೭.

ಎಂದು ಹೇಳುತ್ತದೆ. ಕರ್ತೃ ಯಾರಾದರೂ ಆಗಲಿ, ದಾತೃ ಯಾರಾದರೂ ಆಗಲಿ, ಭೋಕ್ತೃವಂತೂ ಜೀವ. ಹೀಗೆಂದು ಜೀವವು ಜಗನ್ನಿಯಾಮಕನ ಕೈಯಲ್ಲಿ ಜಗಳವಾಡುವುದು ಸಾಧ್ಯವೇ? ಮುಷ್ಕರ ಹೂಡಿ ಗೆಲ್ಲುವುದು ಸಾಧ್ಯವೇ?—ಅವನು ತನ್ನ ಸಂಕಲ್ಪವನ್ನು ನೆರವೇರಿಸಿಕೊಳ್ಳಲಿ! ಲೀಲೆ ನಡಸಲಿ! ಅಸಹಾಯನಾದ ನರಜಂತು ಇನ್ನೇನೆನ್ನಬಲ್ಲ?

ಈ ಜೀವ ಕುದಿಕುದಿದು ಪಡೆದ ಒಂದು ಸಂಸ್ಕಾರದ ಕುರುಹೇ ಆ ಚಿತ್ರ; ಅದರ ನೆನಪೇ ಈ ಪುಸ್ತಕ.

ಈ ಚಿತ್ರವನ್ನು ನನ್ನ ಪ್ರಾರ್ಥನೆಯಂತೆ, ಆ ಸ್ಥಳದಲ್ಲಿಯೇ ಕುಳಿತು ಗುರುತುಮಾಡಿಕೊಂಡು ಹೋಗಿ, ಚಿತ್ರಿಸಿಕೊಟ್ಟ ಶ್ರೀಮಾನ್ ಎಂ. ಎಸ್. ಪುರುಷೋತ್ತಮರಾಯರಿಗೂ, ಈ ಪುಸ್ತಕವನ್ನು ಶ್ರದ್ಧೆವಹಿಸಿ ಪ್ರಕಟಿಸಿದ ಶ್ರೀಮಾನ್ ಕೂಡಲಿ ಚಿದಂಬರಂ ಅವರಿಗೂ ನಾನು ಕೃತಜ್ಞನಾಗಿದ್ದೇನೆ.

ಮೈಸೂರು
೧೫-೪-೧೯೪೮ } "ಶ್ರೀಪತಿ"

# ಕೃ ತ ಜ್ಞ ತೆ

'ಪ್ರಬುದ್ಧ ಕರ್ಣಾಟಕ' ದಲ್ಲಿ ಪ್ರಕಟವಾಗಿರುವ ಕಥೆಗಳನ್ನೆಲ್ಲ ಒಟ್ಟುಗೂಡಿಸಿ ಒಂದೆರಡು ಸಂಪುಟಗಳಲ್ಲಿ ಪ್ರಕಟಿಸುವುದು ಸೂಕ್ತವೆಂಬ ಒಂದು ಸಲಹೆ ಕೆಲವು ವರ್ಷಗಳ ಹಿಂದೆ ಬಂತು. ಆ ಸಲಹೆಯ ರೀತಿಯನ್ನನುಸರಿಸಿ ಕಥೆಗಳನ್ನು ಸಂಗ್ರಹಿಸಿ ಪ್ರಕಟಿಸಲು ಹಲವು ಕಾರಣಗಳಿಂದ ಸಾಧ್ಯವಾಗಲಿಲ್ಲ. ಆದರೆ ಆ ಪತ್ರಿಕೆಯಲ್ಲಿ ಅಚ್ಚಾದ ಕಥೆಗಳನ್ನು ಅದೇ ಕಥೆಗಾರರ ಇತರ ಕಥೆಗಳೊಡನೆ ಕೂಡಿಸಿ ಪ್ರಕಟಿಸುವ ಪ್ರಯತ್ನದ ಫಲವಾಗಿ, ಕಳೆದ ಒಂದೆರಡು ವರ್ಷಗಳಲ್ಲಿ 'ಇದ್ದರೂ ಇರಬಹುದು' ಮತ್ತು 'ರುದ್ರವೀಣೆ' ಎಂಬ ಎರಡು ಕಥಾಸಂಗ್ರಹಗಳು ಕಾರ್ಯಾಲಯದಿಂದ ಹೊರಬಿದ್ದಿವೆ. ಅವಕ್ಕೂ ಮೊದಲೆ, ಮೂರು ನಾಲ್ಕು ವರ್ಷಗಳ ಹಿಂದೆಯೆ, 'ಶ್ರೀಪತಿಯವರ ಕಥಾಸಂಕಲನವನ್ನು ತರಬೇಕೆಂಬ ಅಪೇಕ್ಷೆಯಿತ್ತು. 'ಶ್ರೀಪತಿ' ಯವರ ವಿಶ್ವಾಸದಿಂದ ಆ ಇಷ್ಟ ಈಗ ನೆರವೇರುತ್ತಿದೆ. ಇದಕ್ಕಾಗಿ ನಾನು ಶ್ರೀಯುತರಿಗೆ ಕೃತಜ್ಞನಾಗಿದ್ದೇನೆ. ಅಲ್ಲದೆ ಕಥೆಗಾರರು ಸ್ವಂತ ಶ್ರಮವನ್ನು ಲೆಕ್ಕಿಸದೆ, ಕಥೆಗಳ ಕರಡುಗಳನ್ನು ನನ್ನ ಸಮಯಕ್ಕೆ ಅನುಕೂಲವಾಗಿ, ಸಂತೋಷದಿಂದ ಅತಿ ಶೀಘ್ರವಾಗಿ ತಿದ್ದಿಕೊಟ್ಟು, ಈ ಪುಸ್ತಕದ ಪ್ರಕಟನೆಯಲ್ಲಿ ವಿಶೇಷವಾಗಿ ನೆರವಾಗಿದಾರೆ. ಈ ಎಲ್ಲ ಉಪಕಾರಗಳಿಗಾಗಿ ನಾನು 'ಶ್ರೀಪತಿ' ಯವರಿಗೆ ಋಣಿಯಾಗಿದ್ದೇನೆ.

ಈಗಿನ ಕನ್ನಡ ಸಾಹಿತ್ಯದಲ್ಲಿ ಹೆಸರಾದ ಅನೇಕ ಸಾಹಿತ್ಯ ಕೃತಿಗಳು, ಮೊದಲು 'ಪ್ರಬುದ್ಧ ಕರ್ಣಾಟಕ' ದಲ್ಲಿ ಬೆಳಕು ಕಂಡು, ಜನರಿಗೆ ಪ್ರಿಯವಾಗಿ, ಆಯಾ ಸಾಹಿತ್ಯರೂಪಗಳಲ್ಲಿ ಒಂದು ಬಗೆಯ ಮಾದರಿಯಾದವು. ಈ ಸಂಗ್ರಹದ ಕಥೆಗಳೂ ಸಹ ಅದೇ ಪತ್ರಿಕೆಯಲ್ಲಿ ಬಹುಕಾಲದ ಹಿಂದಿನಿಂದ ಆಗಾಗ್ಗೆ ಪ್ರಕಟವಾದುವು. ಈ ಕಥೆಗಳು ತಮ್ಮದೇ ಆದ ಒಂದು ವ್ಯಕ್ತಿತ್ವದಿಂದ ಕೂಡಿವೆಯೆಂಬುದನ್ನು ಓದುಗರು

ಮನಗಾಣದಿರಲಾರರು. ಜೀವನದ ಕಷ್ಟಕಾರ್ಪಣ್ಯಗಳು ಕಥೆಗಾರರ ಮನಸ್ಸನ್ನು ಕರಗಿಸಿವೆ. ಬಹುಶಃ ಇಲ್ಲಿನ ಕಥೆಗಳಲ್ಲೆಲ್ಲ ಒಂದಲ್ಲ ಒಂದು ರೀತಿಯ ಕ್ಲೇಶದಿಂದ ಕೂಡಿರುವ ಸನ್ನಿವೇಶಗಳನ್ನು ಕಾಣಬಹುದು. ಜೀವನದಲ್ಲಿ ಕ್ಲೇಶ ಇರಬೇಕೆ? ಅದು ಅಪರಿಹಾರ್ಯವೆ? ಅದರ ಉದ್ದೇಶವೇನು? ಎಂಬ ಪ್ರಶ್ನೆಗಳಿಗೆ ಸಮಾಧಾನವನ್ನು ಕಥೆಗಳಲ್ಲಿ ಅರಸಬಹುದು ಮುನ್ನುಡಿಯಲ್ಲಿಯೂ ಅದರ ವಿವರಣೆಯನ್ನು ನೋಡಬಹುದು. ಸಂಕಟದ ತೀಕ್ಷ್ಣತೆಯನ್ನು ಮರೆಸದಿದ್ದರೂ ಸೌಮ್ಯಗೊಳಿಸುವ ಒಂದು ಸಹಜ ಹಾಸ್ಯದ ಸೂತ್ರ ಈ ಕಥೆಗಳಲ್ಲಿದೆ. 'ಪ್ರಬುದ್ಧ ಕರ್ಣಾಟಕ' ದ ಓದುಗರಿಗೆ ಆ ಹಾಸ್ಯ ಬಹು ಕಾಲದಿಂದ ಪರಿಚಿತವಾದುದು. ಕನ್ನಡಿಗರು ಈ ಉತ್ತಮ ಕೃತಿಯನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇವೆ.

೨೨–೪–೧೯೪೮,
ಮೈಸೂರು.

**ಕೂಡಲಿ ಚಿದಂಬರಂ.**

# ವಿವರ

ಅಕಾಲಮೃತ್ಯುವಿಗೆ ತುತ್ತಾದ

ನನ್ನ ಮಗಳು **ಕಮಲುವಿನ**

ನೋವು ಸಾವುಗಳ ಕುದಿನೆನಪಾಗಿ

ಈ ಪುಸ್ತಕವನ್ನು ಪ್ರಕಟಿಸಿದ್ದೇನೆ.

ಎ. ಆರ್. ಕೃ.

ಚುಚ್ಚುವಾ ಕೆರಕಿಂತ
ಕಚ್ಚುವಾ ಶುನಿ ಲೇಸು
. . . . . . . ಸರ್ವಜ್ಞ.

---

ಹುಲಿಗೆ ತನ್ನ ಕಾಡೇನು ಪರರ ಕಾಡೇನು!

—ಗಾದೆ.

---

# ಶ್ರೀಪತಿಯ ಕಥೆಗಳು

## ನನ್ನ ಸ್ನೇಹಿತ

೧

ಕಿಟ್ಟಣ್ಣನು ಬಿ ಎ , ಪ್ಯಾಸು ಮಾಡಿಕೊಂಡು ಸೆಕ್ರೆಟೇರಿಯಟ್ ನಲ್ಲಿ ಕೆಲಸಕ್ಕೆ ಸೇರಿ, ಕೆಲವು ವರ್ಷಗಳಲ್ಲಿಯೇ ಸೇವಾಧರ್ಮಕ್ಕೆ ಬೇಕಾದ ಇತರ ಪರೀಕ್ಷೆಗಳಲ್ಲೆಲ್ಲಾ ತೇರ್ಗಡೆ ಹೊಂದಿ ನೂರಾರು ರೂಪಾಯಿ ಸಂಬಳ ತರುವಂತಾದನು. ಅವನು ಕೆಲಸ ಕಾರ್ಯಗಳಲ್ಲಿ ದಕ್ಷ—ಅವನ ಆಫೀಸರ ಬಲಭುಜ ಆದರೆ ಅವನು ಯಾರ ಹತ್ತಿರವೂ ವಿಶೇಷವಾಗಿ ಸೇರನು , ಹೆಚ್ಚು ಮಾತಾಡನು , ಅವರೊಡನೆ ತಿಂಡಿ ತೀರ್ಥಗಳಿಗೂ ಆಟಪಾಟಗಳಿಗೂ ಸೇರನು. ಆದ್ದರಿಂದ ಅವನನ್ನು ಕೆಲವರು 'ಮುಸಂಡಿ' ಎಂದೂ, ಕೆಲವರು 'ಪೀ ಜ್ಯೆ ಟು' (ಅರ್ಧ ಹುಚ್ಚು) ಎಂದೂ ಕರೆಯುವರು ಆದರೆ ಎದುರಿಗೆ ಅವನನ್ನು ಯಾರೂ ಧೈರ್ಯವಾಗಿ ಹಾಸ್ಯ ಮಾಡಲಾರರು. ಅವನ 'ವೇಣುಗಾನ' 'ನಂದನ ವನ' 'ಕವಿ ವಿಜಯ' ಮುಂತಾದ ಕವಿತೆಗಳು ಅವನಿಗೆ ಒಳ್ಳೆಯ ಕವಿಯೆಂದು ಗೌರವವನ್ನು ತಂದಿದ್ದುವು. ಆದರೆ ಆ ಗೌರವದಿಂದ ಹೊಟ್ಟೆ ತುಂಬುತ್ತಿರಲಿಲ್ಲ-- ಹೊಟ್ಟೆಗಾಗಿ ದಾಸ್ಯವೃತ್ತಿ. ತನ್ನ ಅಧಿಕಾರಿಯು ಸ್ಥಾನ ಮಾಹಾತ್ಮ್ಯೆಯಿಂದಲೂ ನೀಚ ಸ್ವಭಾವದಿಂದಲೂ ಅಷ್ಟೋತ್ತರ ಸಹಸ್ರನಾಮಗಳಿಗಾರಂಭಿಸಲು, ಅವನು ತನ್ನ ಮನಸ್ಸಿನಲ್ಲಿ 'ಹೊಟ್ಟೇ ನಿನ್ನಿಂದ ನಾ ಕೆಟ್ಟೆ!' ಎಂದುಕೊಳ್ಳುವನು, 'ಸೇವಾಂ ಶ್ವವೃತ್ತಿಂ ವಿದುಃ' ಎಂದುಕೊಳ್ಳುವನು. 'ನಾನೂ ಒಂದು ನಾಯಿ, ನೀನೂ ಒಂದು ನಾಯಿ, ನೀನು ಬೊಗುಳುತ್ತಾ ಎಂಜಲು ತಿನ್ನುತ್ತೀಯೆ, ನಾನು ಬೊಗುಳದೆ ಎಂಜಲು ತಿನ್ನುತ್ತೇನೆ—ಇಷ್ಟೆ; ಎಲ್ಲರೂ ನಾಯಿ

ಗಳೇ; ಸ್ವಿಫ್ಟ್ (Jonathan Swift) ಹೇಳಿರುವಂತೆ ಇದೊಂದು Democracy of Dogs (ನಾಯಿಗಳ ಪ್ರಭುತ್ವ) '-ಎಂದು ಹೇಳಿ ಕೊಳ್ಳುವನು. ಕಚೇರಿಯಲ್ಲಿ ಹೀಗೆ, ಮನೆಯಲ್ಲಿ ಅವನ ಸಂಸಾರಸ್ಥಿತಿ ಸುಖವನ್ನು ಕೊಡುವಂತಿರಲಿಲ್ಲ. ಮನೆಗೆ ಹೆಂಡತಿ ಬಂದು ನಾಲ್ಕೈದು ವರ್ಷಗಳಾಗಿದ್ದುವು. ಅವಳಿಗೆ ಓದುವುದಕ್ಕೂ ಬರೆಯುವುದಕ್ಕೂ ಬರು ವುದು. ಆದರೆ ಅದಕ್ಕೆ ಉಪಯೋಗ—ಗಂಡನ ಮೇಲೆ ಇಲ್ಲದ ದೂರನ್ನು ತಾಯಿತಂದೆಗಳಿಗೆ ಬರೆಯುವುದು, ತಾನು ಪ್ರಾಣ ಕಳೆದುಕೊಳ್ಳುತ್ತೇ ನೆಂದು ಗಂಡನ ಹೆಸರಿಗೇ ಕಾಗದ ಬರೆಯುವುದು, ವರ್ತಮಾನ ಪತ್ರಿಕೆ ಮನೆಗೆ ಬಂದರೆ ಅದರ ಪ್ರಕಟನೆಗಳಲ್ಲಿ ವಿಧವಿಧವಾದ ಆಭರಣ ಗಳ ವರ್ಣನೆಗಳನ್ನೂ ಕ್ರಯವನ್ನೂ ಓದಿ ಅವುಗಳನ್ನು ತೆಗೆದುಕೊಡ ಬೇಕೆಂದು ಗಂಡನನ್ನು ಪೀಡಿಸುವುದು. ಓದುಬರಹಗಳನ್ನು ಕಲಿತ ವರೆಲ್ಲರೂ ಸುಖವಾಗಿರಬಲ್ಲರೆಂಬ ನಿಯಮವಿಲ್ಲ. ಹಾಗೇ ಓದುಬರಹ ಬರದವರು ಅಸುಖಿಗಳಾಗಿರಬೇಕೆಂಬ ನಿಯಮವೂ ಇಲ್ಲ. ನಮ್ಮ ತಾಯಿಗೆ ' ಆಟ ಆ ಆಟ ' ಕೂಡ ಬರುತ್ತಿರಲಿಲ್ಲ. ನಾನು ಆಕೆಯ ಹೊಟ್ಟೆಯಲ್ಲಿ ಹುಟ್ಟಿ ಆಕೆಯನ್ನು ನೋಡದೆ ಇದ್ದಿದ್ದರೆ ಹೆಂಗಸರ ಹೃದ ಯವೂ ಪ್ರೀತಿಯೂ ಹೇಗಿರಬಹುದೆಂಬುದನ್ನು ಅರಿಯುತ್ತಿರಲಿಲ್ಲ. ಗೌರಿದೇವಿಯು ಗಣಪತಿಯನ್ನು ಕುರಿತು ' ನಿನಗೆ ಎಂಥ ಹೆಂಡತಿ ಬೇಕು ಮಗು ? ' ಎಂದು ಕೇಳಿದಾಗ ಅವನು ' ನಿನ್ನಂಥ ಹೆಂಡತಿ ಬೇಕು ' ಎಂದು ಹೇಳಿದನಂತೆ, (ಗೌರಿಯಂಥ ಹೆಂಗಸು ಮತ್ತೊಬ್ಬ ಳಿಲ್ಲದ್ದರಿಂದ ಅವನಿಗೆ ಇನ್ನೂ ಮದುವೆಯಿಲ್ಲವಂತೆ). ಹಾಗೆಯೇ ನನ್ನ ಹೆಂಡತಿಯು ಮನೆಗೆ ಬಂದ ಮೇಲೆ ಅವಳು ಹೇಗಿರಬೇಕೆಂದು ಯಾರಾದರೂ ನನ್ನನ್ನು ಕೇಳಿದರೆ ನಾನೂ ನನ್ನ ತಾಯಿ ಯಾವ ನಡತೆ ಗುಣಗಳಿಂದ ಸ್ತ್ರೀ ರತ್ನಳೆಂದು ಗಣ್ಯಳಾಗಿದ್ದಾಳೋ ಆ ನಡತೆಗಳನ್ನು ಳ್ಳವಳಾಗಿದ್ದರೆ ಸಾಕೆಂದು ಹೇಳುವೆನು. ಆದರೆ ಆಶೆ ಎಷ್ಟು ಪಟ್ಟರೆ ಅಷ್ಟೂ ನಿರಾಶೆಯೇ! ಪ್ರಕೃತದಲ್ಲಿ ಕಿಟ್ಟಣ್ಣನಿಗೂ ಹಾಗೆಯೇ ಆಯಿತು. ಮದುವೆಗೆ ಮುಂಚೆ " ನನ್ನ ಹೆಂಡತಿ ಮನೆಗೆ ಬಂದ ಮೇಲೆ ನಾನು ಅವಳನ್ನು ಹೀಗೆ ತಯಾರು ಮಾಡುತ್ತೇನೆ, ಹಾಗೆ ತಯಾರು ಮಾಡು

ತ್ತೇನೆ—ಅವಳಿಗೆ ಅದು ಕಲಿಸುತ್ತೇನೆ, ಇದು ಕಲಿಸುತ್ತೇನೆ" ಎಂದು ಹೇಳುತ್ತಿದ್ದನು. ಆದರೆ ಅದು ಒಂದೂ ನೆರವೇರಲಿಲ್ಲ. ಮನುಷ್ಯನು 'ತಯಾರು' ಮಾಡುವುದು ಸುಳ್ಳೆಂದು ಈಗ ಅವನು ತೀರ್ಮಾನ ಮಾಡಿದ್ದನು. ನಾವೇನಾದರೂ ಪ್ರತಿಯಾಗಿ ಹೇಳಿದರೆ "ಗೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು ನೀರ್‌ಕುಡಿಯಲಹುದೇ ಸರ್ವಜ್ಞ?" ಎಂದು ಕೇಳುವನು. ಅವನ ಸಂಸಾರದಲ್ಲಿ ಕಷ್ಟಪಟ್ಟು ಬಾವಿಯನ್ನು ತೆಗೆದು ಕಲ್ಲು ಮಣ್ಣುಗಳನ್ನು ರಾಶಿ ಹಾಕಿಯಾಯಿತೇ ಹೊರತು ಬಾವಿ ಯಲ್ಲಿ ನೀರು ಮಾತ್ರ ಬೀಳಲಿಲ್ಲ ಅವನು ರಸಿಕ, ಎಲ್ಲದರಲ್ಲಿಯೂ ರಸವನ್ನು ಕೇಳುವನು, ಅವನಿಗೆ ರುಚಿಯಾಗಿ ಊಟ ತಿಂಡಿಯಾಗ ಬೇಕು, ಸ್ವಲ್ಪವಾಗಿದ್ದರೂ ರುಚಿಯಾಗಿರಬೇಕು—ಅದು ಅವನ ಭಾಗಕ್ಕೆ ದೊರೆಯಲಿಲ್ಲ. ಅವನ ಹೆಂಡತಿಗೆ ಅಡಿಗೆ ಮಾಡುವುದಕ್ಕೆ ಬಾರದೆಂದಲ್ಲ --ಏನೋ ವಾಲುಮಾರಿಕೆ, ಅನಡ್ತೆ. ಅವಳಿಗೆ ಬೇಕಾದ ಬಂಧುಗಳು ಬಂದರೆ ಇದ್ದದ್ದು ಇಲ್ಲದ್ದು ಎಲ್ಲವನ್ನೂ ಹವಣಿಸಿಕೊಂಡು ನಳಪಾಕವ ನ್ನಿಳಿಸುವಳು. ಗಂಡನಿಗೂ ಹೆಂಡತಿಗೂ ಏನು ಋಣಾನುಬಂಧವಿರ ಲಿಲ್ಲವೋ!—ಅವನಿಗೆ ತುಂಬ ಹಸಿವಾಗಿದ್ದ ದಿನ ಅಡಿಗೆ ಕೆಟ್ಟಿರುವುದು ಸಿದ್ಧ! ಅವನಿಗೆ ಬಡತನವಿದ್ದರೂ ಚಿಂತೆಯಿಲ್ಲ, ಪ್ರೇಮ ಬೇಕು.— ಅದು ಅವನ ಭಾಗಕ್ಕೆ ದೊರೆಯಲಿಲ್ಲ. ಹೋತನ ಮೊಲೆಯಲ್ಲಿ ಹಾಲು ಕರೆದಂತಾಯಿತು. ತುಂಬ ಆಯಾಸ ಪಟ್ಟೋ, ಆಫೀಸರ ಕೈಯಲ್ಲಿ ಬೈಸಿಕೊಂಡು ಬೇಜಾರಾಗಿಯೋ ಮನೆಗೆ ಬಂದರೆ ಹೆಂಡತಿಯ ಕೈಯಲ್ಲಿ ಜಗಳವು ಸಿದ್ಧ! 'ಏನು ಕಡಿದು ಬಂದದ್ದಕ್ಕೋ ಇಷ್ಟು ಆಯಾಸ! ಯಾರೂ ಹೋಗದಿದ್ದ ಆಫೀಸಿಗೆ ಇವರೇ ಹೋಗುತ್ತಾರೇನೋ ಕಾಣೆ! ಅಲ್ಲಿ ಏನು ಒಲೆಯ ಮುಂದೆ ಬೆಯ್ಯಬೇಕೆ? ನೀರು ಸೇದಬೇಕೆ? ಹಾಯಾಗಿ ಕೈಬೀಸಿಕೊಂಡು ಕೂತಿದ್ದು ಬರುವುದಕ್ಕೆ ಇಷ್ಟು!' ಎಂದೋ, ಇಲ್ಲದಿದ್ದರೆ, 'ನನ್ನ ಸೀರೆಯ ಬಣ್ಣ ಹೋಯಿತು, ನನಗೆ ಸಿಲ್ಕು ಜಾಕೆಟ್ ಹೊಲಿಸಿ ಕೊಡಲಿಲ್ಲ, ಸರಿಗೆ ಮಾಡಿಸಿ ಕೊಡುತ್ತೇನೆಂದು ಹೇಳಿ ಆಗಲೇ ವರ್ಷವಾಯಿತು" ಎಂದೋ ಸಿಡಿಲು ಮಳೆಗಳಿಗೆ ಆರಂಭ ವಾಗುವುದು. ಸಾಕ್ರೆಟೀಸನ ಕಥೆ. ಕಿಟ್ಟಣ್ಣನೂ ತನ್ನ ಹೊಟ್ಟೆ ಬಟ್ಟೆ

ನನ್ನು ಕೀಟಲೆ ಮಾಡುತ್ತಿದ್ದಳು. ಅವನು 'ನನಗೇನು ಪದ್ಯ ಬರೆಯುವುದಕ್ಕೆ ಬರುವುದಿಲ್ಲವೋ? ನಾನೂ ಬರೆದು ಹೇಳಿಬಿಡುತ್ತೇನೆ' ಎನ್ನುವನು. ಇಬ್ಬರೂ ನಗುವರು. ಕಿಟ್ಟಣ್ಣನ ಮದುವೆಯಲ್ಲಿ ಅವಳು "ಈತನೀಗ ನಮ್ಮ ಬೀಗನು" ಎಂಬ ಹಾಡನ್ನು ಕಟ್ಟಿ ಹೇಳಿದಳಂತೆ. ಅದನ್ನು ಮದುವೆಗೆ ಬಂದವರೆಲ್ಲಾ ಹೇಳಿಸಿ ಕೇಳುವವರೇ! ಅದು ಕಿಟ್ಟಣ್ಣನಿಗೆ ಬಾಯಿಪಾಠವಾಗಿತ್ತು. ಪುಟ್ಟುವು ಅವಳ ತಾಯಿತಂದೆಗಳಿಗೆ ಒಬ್ಬಳೇ ಮಗಳು; ಹಾಗೆಯೇ ಕಿಟ್ಟಣ್ಣನೂ ಅವರ ತಾಯಿತಂದೆಗಳಿಗೆ ಒಬ್ಬನೇ ಮಗ ಮೊದಲಿನಿಂದಲೂ ಇಬ್ಬರೂ ಒಟ್ಟಿಗೆ ಆಡಿದವರು: ಅವರು ಗಂಡಹೆಂಡಿರಾಗಬೇಕೆಂದು ಪುಟ್ಟು ಹುಟ್ಟಿದಾಗಲೇ ನಿಷ್ಕರ್ಷೆಯಾಗಿತ್ತು, ವರನಾಮ್ಯವು ಬಹುಚೆನ್ನಾಗಿದೆ ಎಂದು ಎಲ್ಲರೂ ಹೇಳುವರು. ಬುದ್ಧಿ ತಿಳಿಯುವವರೆಗೂ ಅವಳು ಅವನನ್ನು 'ಗಂಡಾ' ಎಂದೂ ಅವನು ಅವಳನ್ನು 'ಹೆಂಡತೀ' ಎಂದೂ ಕರೆಯುತ್ತಿದ್ದರು. ಇದನ್ನು ಕೇಳಿ ಎಲ್ಲರೂ ನಗುವರು ಅವರೂ ನಗುವರು. ಹೀಗೆ ಅವಳಿಗೆ ಹನ್ನೆರಡು ವರ್ಷ ತುಂಬುತ್ತ ಬಂತು. ಈಗ ಅವಳನ್ನು ಅರಿಸಿನ ಕುಂಕುಮಕ್ಕೆ ಕರೆಯದವರಿಲ್ಲ, ಅವಳ ಮಾತೋ ಹಸುವಿನ ಬೆಣ್ಣೆ! ಅಂಥ ನಡೆನುಡಿಗಳನ್ನು ನಾಲ್ಕು ಮಕ್ಕಳ ತಾಯಿಯರಾದ ಮನೆಯ ಯಜಮಾನತಿಯರೂ ಅರಿಯರು. 'ಹ್ಯಾಗಿದ್ದರೂ ಕಿಟ್ಟಣ್ಣ ಇದ್ದಾನಲ್ಲಾ, ಮುಂಚಾಗಿ ಮಾಡಿಕೊಂಡರೂ ಅವನೇ ಹಿಂಚಾಗಿ ಮಾಡಿಕೊಂಡರೂ ಅವನೇ' ಎಂದು ಇಷ್ಟು ದಿನವೂ ಮದುವೆಯ ಪ್ರಯತ್ನವನ್ನು ಮಾಡದೇ ಹಾಗೆಯೇ ಬಿಟ್ಟಿದ್ದಾಯಿತು. ಇನ್ನಾದರೂ ಮದುವೆಯಾಗಬೇಕು ಆದರೆ, "ಜಾತಕವೇನು ನೋಡಿಸಬೇಕಾದ್ದಿಲ್ಲ,—'ಮನೋಜಯಂ ತು ಮಾಂಡವ್ಯಃ'" ಎಂದು ಹೇಳುತ್ತಿದ್ದ ರಾಮಭಟ್ಟರು (ಕಿಟ್ಟಣ್ಣನ ತಂದೆ)—ಏನು ತೋರಿತೋ ಏನೋ! —ಜಾತಕ ನೋಡಿಸಬೇಕೆಂದು ಈಗ ಹಟ ಹಿಡಿದರು. ಹೆಣ್ಣು ಹುಡುಗಿಯ ಜಾತಕ ಮದುವೆಗೆ ತಾನೇ! ವರ ಸಿದ್ಧನಾಗಿರುವಾಗ ಜಾತಕವನ್ನು ಕೇಳುವವರು ಯಾರು?—ಎಂದು ಪುಟ್ಟುವಿನ ಜಾತಕವನ್ನು ಬರೆಸದೆ ಬಿಟ್ಟಿದ್ದರು. ಈಗ ಗುರುತು ಹಾಕಿಟ್ಟಿದ್ದ ಜನನ ಕಾಲವನ್ನು ಇಟ್ಟುಕೊಂಡು

ಪಂಚಾಂಗ ನೋಡಿ ಹೊಸದಾಗಿ ರಾಮುಭಟ್ಟರೇ ಜಾತಕ ಬರೆದರು. ಬರೆದು ನೋಡಲಾಗಿ ಅದರಲ್ಲಿ ಮಾಂಗಲ್ಯಭಾವವು ಚೆನ್ನಾಗಿಲ್ಲವೆಂದು ತೀರ್ಮಾನವಾಯಿತು. ರಾಮುಭಟ್ಟರು ಸ್ವಂತವಾಗಿ ಜ್ಯೋತಿಷವನ್ನು ಬಲ್ಲವರು, ಅವರು ಮದುವೆಯಾಗಕೂಡದೆಂದು ಬಿಟ್ಟರು. ಈ ವರ್ತಮಾನವು ತಿಳಿದದ್ದೇ ತಡ, ಬೆಂಗಳೂರಿನಲ್ಲಿ ಎಫ್. ಎ. ಕ್ಲಾಸಿನಲ್ಲಿ ಓದುತ್ತಿದ್ದ ಕಿಟ್ಟಣ್ಣನನ್ನು ಮರುಳು ಮಾಡಿ ಒಬ್ಬ ದೊಡ್ಡ ಮನುಷ್ಯರು ಹದಿಮೂರು ವರ್ಷದ ತಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿದರು ಕಿಟ್ಟಣ್ಣನಿಗೆ ಈ ಸಂಬಂಧವು ಸುತರಾಂ ಇಷ್ಟವಿರಲಿಲ್ಲ. ಆದರೂ ತಂದೆಯ ಕಟ್ಟಾಜ್ಞೆಗೆ ಗೌರವ ಕೊಟ್ಟು ಒಪ್ಪಬೇಕಾಯಿತು ಮದುವೆಯಾಯಿತು. ಮದುವೆಗೆ ಪುಟ್ಟುವೂ ಹೋಗಿದ್ದಳು. ಮದುವೆಯಲ್ಲಿ ಅವಳೇ ಕಳಶಕನ್ನಡಿಯ ಮುತ್ತೈದೆ ಅವಳು ಮುಂದು ಮಿಕ್ಕವರು ಹಿಂದು; ಉರುಟಣೆಗೆ ಅರಿಸಿನ ಕುಂಕುಮಗಳನ್ನು ಅವಳೇ ವಧೂವರರ ಕೈಗೆ ಕೊಡುವಳು. ಹೂವಿನ ಚೆಂಡನ್ನು ಕಟ್ಟಿ ಕೊಡುವಳು, ಗುಬ್ಬಿಗಳನ್ನು ಮಾಡಿಕೊಡುವಳು, ಹೆಣ್ಣಿಗೆ ಅಲಂಕಾರ ಮಾಡುವಳು ಆದರೆ ಮದುವೆಯ ಹೆಣ್ಣು ಒರಟು, ಮುಂಗೋಪಿ. ಪುಟ್ಟುವು ಮಾತ್ರ ಅವಳನ್ನು ಸರಿಹೋಗಿಸಿಕೊಂಡು ಹೋಗುವಳು. 'ನಿಮ್ಮ ಯಜಮಾನರ ಕೈಯಲ್ಲಿ ಮಾತನಾಡುವುದಕ್ಕಿಲ್ಲವಲ್ಲ ಎಂದು ಅಸಮಾಧಾನವೇ ಲಕ್ಷಮ್ಮ? ಅವರು ಬಂಗಾರದಂಥವರು, ದೇವರಂಥವರು ಅವರೊಡನೆ ಮಾತನಾಡುವುದೇ ತಡ, ಕಲ್ಲೂ ಬೆಣ್ಣೆಯಾಗುವುದು . . .' ಎಂದು ಮುಂತಾಗಿ ಹೇಳುವನು ಲಕ್ಷಮ್ಮನು 'ಹೋಗೆ!' ಎಂದು ಗದರಿಸುವಳು. ಒಂದು ದಿನ ಹೀಗೆ ಹೇಳುತ್ತಾ ಜಡೆಹಾಕುತ್ತಿರಲು ಪುಟ್ಟುವಿನ ಕಣ್ಣುಗಳಿಂದ ನೀರು ಸುರಿಯುತ್ತಿತ್ತು ಅಷ್ಟುಹೊತ್ತಿಗೆ ಮನೆಯ ಯಜಮಾನಿಯು ಬಂದಳು ಅವಳನ್ನು ಕಂಡು ಪುಟ್ಟುವು ಚಟ್ಟನೆ ಜಡೆ ಹಾಕುವುದನ್ನು ಬಿಟ್ಟು ಎದ್ದು ಹೋಗಿ ಕಣ್ಣು ಒರೆಸಿಕೊಂಡು ಬಂದಳು. ಯಜಮಾನಿಯು 'ಅದೇಕೇ ನನ್ನ ಕಂಡು ಹಾಗೆ ಓಡಿ ಹೋದೆ, ಪುಟ್ಟು?' ಎಂದು ಕೇಳಿದಳು. ಪುಟ್ಟುವು 'ಮೇಲೆ ನೋಡುತ್ತಿದ್ದೆ ನಮ್ಮ, ಕಣ್ಣಿಗೆ ಇಲ್ಲಣವೋ ಏನೋ ಬಿತ್ತು. ಕಣ್ಣು ತೊಳೆದುಕೊಂಡು

ಬರೋಣವೆಂದು ಎದ್ದು ಹೋದೆ ' ಎಂದಳು. ನಾಗೋಲಿಯಾದ ಮೇಲೆ ಗಂಡನ್ನು ಅವರ ಬಿಡಾರಕ್ಕೆ ಕಳುಹಿಸಿಕೊಟ್ಟರು. ಬೀಗರ ಔತನಗಳೆಲ್ಲಾ ಮುಗಿದುವು. ಆ ದಿವಸ ರತ್ನಾವಳಿ ಕಂಪೆನಿಯವರ ನಾಟಕ. ಎಲ್ಲರೂ ಅದನ್ನು ನೋಡುವುದಕ್ಕೆ ಹೋಗಲು ಸಿದ್ಧರಾದರು. ಹಸಿವಾಗಿದ್ದವರೂ ನನಗೆ ಹಸಿವಿಲ್ಲ ತನಗೆ ಹಸಿವಿಲ್ಲ ಎಂದರು—ನಾಟಕಕ್ಕೆ ಹೋಗುವ ಆತುರ. ಅಜ್ಜಮ್ಮಂದಿರಿಗೂ ನಾಟಕ ನೋಡಬೇಕೆಂಬ ಆಸೆ. ಆಗ ' ಮನೆಯಲ್ಲಿ ಯಾರಿರುತ್ತೀರಿ ? '—ಎಂದು ಎಲ್ಲರೂ ಒಬ್ಬರನ್ನೊಬ್ಬರು ಕೇಳಿದರು. ' ಕಿಟ್ಟಣ್ಣ ಬೇರೆ ಬರುವ ಹಾಗಿಲ್ಲವಷ್ಟೆ— ಇನ್ನೂ ತಿಂಗಳ ಕಂಬೋಲಿಯೇ ಆಗಿಲ್ಲ. ಅವನೊಬ್ಬನನ್ನೇ ಬಿಟ್ಟು ಹೋಗುವುದೇ ? ' ಎಂದು ಗುಡುಗುಟ್ಟುತ್ತಿದ್ದರು ಕೊನೆಗೆ ಪುಟ್ಟುವು ಮುಂದೆ ಬಂದು ' ಅಮ್ಮಾ, ನೀವೆಲ್ಲಾ ಬೇಕಾದರೆ ಹೋಗಿಬನ್ನಿ, ನಾನೂ ಕಿಟ್ಟಣ್ಣನೂ ಮನೆಯಲ್ಲಿರುತ್ತೇವೆ ನನಗೆ ನಿದ್ದೆಕೆಟ್ಟರೆ ಆಗುವುದಿಲ್ಲ. ಅವತ್ತು ಕಣ್ಣಿಗೆ ಕಸ ಬಿದ್ದದ್ದೇ ಬಿದ್ದದ್ದು, ನನ್ನ ಕಣ್ಣು ಹುಷಾರೇ ಇಲ್ಲ, ಇನ್ನೂ ಕಣ್ಣಿನ ಕೆಂಪು ಹರಿದೇ ಇಲ್ಲ ' ಎಂದಳು ' ಹಾಗಾದರೆ ನೀನೇ ಮನೆಯಲ್ಲಿರು ' ಎಂದು ಅವಳ ತಾಯಿ ಹೇಳಿ ' ಕಣ್ಣಿಗೆ ಒಂದು ತೊಟ್ಟು ಹರಳೆಣ್ಣೆಯನ್ನು ಬಿಟ್ಟುಕೊಂಡು ಮಲಗಿಕೋ ಪುಟ್ಟು ! ' ಎಂದು ಹೇಳಿದಳು ಎಲ್ಲರೂ ಗುಂಪುಕಟ್ಟಿಕೊಂಡು ಕೈಯಲ್ಲಿ ವೀಳೆಯದೆಲೆಯನ್ನು ಹಿಡಿದುಕೊಂಡು ಸುಣ್ಣವನ್ನು ಹತ್ತಿಸಿ ಹಾಕಿಕೊಳ್ಳುತ್ತಾ ಮಧ್ಯೆ ಮಧ್ಯೆ ಎಲೆಯಡಿಕೆಯ ಬಾಯಲ್ಲಿ ಅಸ್ಪಷ್ಟವಾಗಿ ಮಾತನಾಡುತ್ತ, ನಾಟಕಾರಂಭವಾಗುವುದಕ್ಕೆ ಎಷ್ಟೋ ಮುಂಚೆ ಹೋಗಿ ನಾಟಕಶಾಲೆಯಲ್ಲಿ ಕುಳಿತುಕೊಂಡುಬಿಟ್ಟರು

ಇತ್ತ ಮನೆಯೊಳಗೆ ತಟ್ಟೆಯಲ್ಲಿ ತಂದಿಟ್ಟಿದ್ದ ತಾಂಬೂಲಗಳು ಒಂದೆರಡು ಹಾಗೇ ಇದ್ದುವು. ಅದನ್ನು ನೋಡಿ ಕಿಟ್ಟಣ್ಣನು ' ನೀನು ಎಲೆಯಡಿಕೆಯನ್ನು ಹಾಕಿಕೊಂಡೆಯಾ ಪುಟ್ಟು ? ' ಎಂದು ಕೇಳಿದನು. ಅವಳು " ನೀನು ಯಾಕೆ ಹಾಕಿಕೊಳ್ಳಲಿಲ್ಲ ? ಇನ್ನು ಮೇಲೆ ಹಾಕಿಕೊಳ್ಳಬಹುದಲ್ಲ —ಅಡ್ಡಿ ತೀರಿತಲ್ಲ! "ಎಂದು ತಟ್ಟೆಯನ್ನು ಅವನ ಹತ್ತಿರಕ್ಕೆ ತಂದಿಟ್ಟು ಕೂತುಕೊಂಡಳು. ಒಬ್ಬರ ಮುಖವನ್ನು ಒಬ್ಬರು ನೋಡಿ

ದರು --ಇಬ್ಬರ ಮುಖವೂ ಪೆಚ್ಚಾಯಿತು. ಪುಟ್ಟುವಿನ ಕಣ್ಣಿನಲ್ಲಿ ನೀರು ತುಂಬಿತು. ಕಿಟ್ಟಣ್ಣನ ಕಣ್ಣಿನಲ್ಲಿಯೂ ನೀರು ಬಂತು—ಆದರೆ ಅವನು ಅದನ್ನು ತಡೆದುಕೊಂಡು "ಅದೇನು ಈಗಲೂ ಕಣ್ಣಿಗೆ ಕಸ ಬಿತ್ತೊ? ಅದಾವಾಗ ಕಸ ಬಿತ್ತು? ಏನಾಗಿದೆ ಕಣ್ಣು, ಎಲ್ಲಿ ನೋಡೋಣ"ಎಂದು ಅವಳ ಮುಖವನ್ನು ಎತ್ತಿ ನೋಡಿದನು. ಅವಳೂ ಕಣ್ಣು ಒರಸಿ ಕೊಂಡು 'ಇಲ್ಲ, ಏನೂ ಇಲ್ಲ' ಎಂದಳು. ಕೊನೆಗೆ ಎಲ್ಲವನ್ನು ಹೇಳ ಬೇಕಾಯಿತು, ನಿಜಸ್ಥಿತಿಯನ್ನು ಹೇಳಬೇಕಾಯಿತು. ಅವರಿಬ್ಬರೂ ಮಾತನಾಡಿ ಎಂಟು ಹತ್ತು ದಿನವಾಗಿತ್ತು ಆ ಸಾಲವೆಲ್ಲ ಇಂದು ತೀರಿತು ಸ್ವಲ್ಪ ಹೊತ್ತಾದ ಮೇಲೆ ಮನಸ್ಸಿಗೆ ಸಮಾಧಾನವಾಯಿತು. ಎಷ್ಟೋ ಹಾಸ್ಯ ಪರಿಹಾಸ್ಯಗಳಾದುವು. ಕೊನೆಗೆ ಅವಳು ಎರಡು ಮೂರು ದಿವಸಗಳ ಕೆಳಗೆ ಬರೆದಿಟ್ಟಿದ್ದ ಒಂದು ಕಾಗದವನ್ನು ತಂದು ತೋರಿಸಿ ದಳು. ಅದು 'ತೀರ್ಘರೂಪು ಕಿಟ್ಟಣ್ಣನವರ ಸ|| ಕ್ಕೆ" ಎಂದು ಆರಂಭ ವಾಗಿ ಮಿಕ್ಕ ಒಕ್ಕಣೆಯೆಲ್ಲವೂ ಗಂಡನಿಗೆ ಹೆಂಡತಿ ಬರೆದಹಾಗಿತ್ತು. ಕಿಟ್ಟಣ್ಣನು "ತೀರ್ಘರೂಪು" ಎಂಬುದನ್ನು ಹೊಡೆದು ಅದು ಸರಿಯಲ್ಲ ವೆಂದು ಸೀಸದ ಕಡ್ಡಿಯಿಂದ ಒಂದು ಗೀಟು ಎಳೆದನು. ಹುಡುಗಿಯು ಸ್ವಲ್ಪ ದೊಡ್ಡದಾಗಿ ಕಣ್ಣುಬಿಟ್ಟು 'ಹಾಗಾದರೆ ಹೇಗಿರಬೇಕು" ಎಂದು ಹತ್ತಿರ ಬಂದು ಕಾಗದವನ್ನು ನೋಡುತ್ತ ಕುಳಿತಳು. ಕಿಟ್ಟಣ್ಣನು ಮುಮ್ಮುಸಿದ್ದನು ಪುಟ್ಟು ಪುನಃ ಕೇಳಿದಳು. ಕಿಟ್ಟಣ್ಣನು 'ಏನೂ ಇಲ್ಲ, ಸರಿ ಸರಿ' ಎಂದನು. ಇನ್ನು ಏನೇನೋ ಮಾತುಗಳು ನಡೆ ದುವು. "ಕಿಟ್ಟಣ್ಣ, ನಿನ್ನಂಥವರನ್ನು ಪುಣ್ಯಾತ್ಮರು ಮದುವೆಮಾಡಿ ಕೊಳ್ಳುತ್ತಾರೆ ನೀನು ಮುಂದೆ ನೂರಾರು ರೂಪಾಯಿ ಸಂಬಳ ತಂದು ಮಹಡೀಮನೆ ಕಟ್ಟಿ ಪಟ್ಟಣವಾಸದಲ್ಲಿರುತ್ತೀಯೆ—ನಾನು ಬಡ ವರ ಮನೆ ಸೇರಿ ಹಳ್ಳಿಯಲ್ಲಿದ್ದರೂ ನನ್ನ ಮರೆಯಬೇಡ ಕಿಟ್ಟಣ್ಣ!" —ಎಂದಳು. ಅವನಿಗೆ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಕೊಂಡು "ಪುಟ್ಟು, ನಿನಗೆ ಅಣ್ಣತಮ್ಮಂದಿರಿಲ್ಲ. ನನಗೆ ಅಕ್ಕತಂಗಿಯ ರಿಲ್ಲ; ಇನ್ನು ಮೇಲೆ ನಾನು ನಿನಗೆ ಅಣ್ಣ, ನೀನು ನನಗೆ ತಂಗಿ" ಎಂದು ತಲೆ ಬಗ್ಗಿಸಿಕೊಂಡನು. ಕೂತವರು ಕೂತಹಾಗೆ ಕೂತಿದ್ದರು.

ಅಷ್ಟು ಹೊತ್ತಿಗೆ ನಾಟಕವನ್ನು ನೋಡುವುದಕ್ಕೆ ಹೋಗಿದ್ದವರು ಗುಜ ಗುಜನೆ ಮಾತನಾಡಿಕೊಂಡು ಬರುತ್ತಿದ್ದರು ಅದನ್ನು ಕೇಳಿ ಪುಟ್ಟುವು ಎದ್ದು ಬಾಗಿಲು ತೆಗೆದಳು. 'ಏನೇ, ಇನ್ನೂ ಮಲಗಿಕೊಂಡೇ ಇಲ್ಲವೇನೇ ಪುಟ್ಟು ?' ಎಂದು ಅವಳ ತಾಯಿ ಕೇಳಿದಳು. ಅವಳು 'ಮಲಗಿ ಕೊಂಡಿದ್ದೆನಮ್ಮ; ಕಿಟ್ಟಣ್ಣ ನೀರು ಬೇಕು ಅಂದ, ಕೊಡುವುದಕ್ಕೆ ಎದ್ದಿದ್ದೆ. ನಾಟಕ ಹ್ಯಾಗಿತ್ತಮ್ಮ, ಚನ್ನಾಗಿತ್ತೇ?' ಎಂದು ಪ್ರತಿಯಾಗಿ ಕೇಳಿದಳು. "ಏನೋ ಇತ್ತು—ಏನು ನಾಟಕವೋಮ್ಮ!" ಎಂದು ತಾಯಿ ಉತ್ತರ ಕೊಟ್ಟಳು. ಎಲ್ಲರೂ 'ಪುಟ್ಟು ಎಂಥ ಜಾಣೆ ನಾವು ಬರುವ ಹೊತ್ತಿಗೆ ಕೈಕಾಲಿಗೆ ನೀರು ತಂದಿಟ್ಟು ಎಲ್ಲರಿಗೂ ಹಾಸಿಗೆ ಹಾಸಿ ಸಿದ್ಧಮಾಡಿದ್ದಾಳೆ, ಪುಟ್ಟು, ನಿನಗೂ ಬೇಗ ಮದುವೆಯಾಗಲಮ್ಮ, ಒಳ್ಳೇ ಗಂಡ ಬರಲಿ' ಎಂದು ಹೇಳಿ ಮಲಗಿಕೊಂಡರು ಪುಟ್ಟುವಿಗೆ ನಾಚಿಕೆಯಾಗಿ ಅವಳೂ ಹೋಗಿ ಮಲಗಿಕೊಂಡುಬಿಟ್ಟಳು.

ಪುಟ್ಟುವಿಗೂ ಬೇಗ ಮದುವೆಯೇನೋ ಆಯಿತು. ಒಬ್ಬ ಬಡ ವೈದಿಕ ಬ್ರಾಹ್ಮಣನ ಕೈಹಿಡಿದಳು. ಲಗ್ನಪತ್ರಿಕೆಯು ಕಿಟ್ಟಣ್ಣನಿಗೂ ಹೋಯಿತು. ಆದರೆ ವಿಳಾಸವು ತಪ್ಪಾಗಿ ಲಗ್ನಪತ್ರಿಕೆ ತಲಪುವುದು ವಿಳಂಬವಾದ್ದರಿಂದ ಅವನಿಗೆ ಪುಟ್ಟುವಿನ ಮದುವೆಗೆ ಹೋಗುವುದಕ್ಕಾ ಗಲಿಲ್ಲ ಅಂತೂ ಮದುವೆಯೇನೋ ಆಗಿಹೋಯಿತು ಮನೆಯಲ್ಲಿ ಒಬ್ಬಳು ಕುರುಡು ಅತ್ತೆ, ಮಾವನಿಲ್ಲ. ಮನೆ ತಪ್ಪಿದ ಇಬ್ಬರು ಅತ್ತಿಗೆ ಯರು. ಪುಟ್ಟುವು ಗಂಡನ ಮನೆಗೆ ಬಂದಮೇಲೆ ಇವರೆಲ್ಲರಿಗೂ ಅಚ್ಚು ಮೆಚ್ಚಾಗಿದ್ದುಕೊಂಡು ಮಾನವಾಗಿ ಸಂಸಾರ ಮಾಡಿಕೊಂಡಿದ್ದಳು. ದೇವರಿಗೆ ಅದೂ ಸ್ಥಿರಿಸಲಿಲ್ಲ. ಮನೆಗೆ ಬಂದ ವರ್ಷ ತುಂಬುವುದ ರೊಳಗೇ ಅವಳ ಗಂಡನು ಸ್ವರ್ಗಸ್ಥನಾದನು. ಜಾತಕವು ನಿಜ ವಾಯಿತು

೨

ಈ ದುಃಖವಾರ್ತೆಯು ಕಿಟ್ಟಣ್ಣನಿಗೆ ತಲುಪಿತು. ಅದನ್ನು ಕೇಳಿ ದಾಗ ಅವನ ಹೃದಯವನ್ನು ಕಿತ್ತು ಹಿಂಡಿ ಎಸೆದುಬಿಟ್ಟಂತಾಯಿತು. ಹತ್ತು ದಿನದೊಳಗೆ ನೋಡುವುದಕ್ಕೆಂದು ಪುಟ್ಟು ಇದ್ದ ಹಳ್ಳಿಗೆ

ಹೋದನು ಆದರೆ ಅವಸಿಗೆ ಅವಳು ಮುಖ ತೋರಿಸಲಿಲ್ಲ 'ನಾನು ಏನು ಅಂತ ಈ ಮುಖ ಹೊತ್ತುಕೊಂಡು ಕಿಟ್ಟಣ್ಣನ ಮುಂದೆ ಹೋಗಲಿ?' ಎಂದು ಅಳುವುದಕ್ಕೆ ಮೊದಲು ಮಾಡಿದಳು. ಕಿಟ್ಟಣ್ಣನು ಅಲ್ಲಿ ಇರುವುದಕ್ಕಿಂತ ಹೊರಟುಹೋಗುವುದೇ ಮೇಲೆಂದು ಊರಿಗೆ ಬಂದುಬಿಟ್ಟನು. ತನ್ನ ಮದುವೆಯಲ್ಲಿ ಅವಳನ್ನು ನೋಡಿದ್ದೇ ನೋಡಿದ್ದು ಪುನಃ ಒಬ್ಬರನ್ನೊಬ್ಬರು ನೋಡಿಲ್ಲ ಈಗ ಕಿಟ್ಟಣ್ಣನು ಪುಟ್ಟುವಿನ ಭವಿಷ್ಯ ವಾಣಿಯಂತೆ ನೂರು ರೂಪಾಯಿ ಸಂಬಳ ತರುತ್ತಿದ್ದಾನೆ. ಅವನು ಹುಚ್ಚು ಹುಚ್ಚಾಗಿದ್ದರೂ ದೊಡ್ಡ ಮನುಷ್ಯರಲ್ಲಿ ಗಣ್ಯನಾಗಿದ್ದಾನೆ ಅವನ ಪದ್ಯಗಳನ್ನು ವಿದ್ವಾಂಸರು ಶ್ಲಾಘಿಸುತ್ತಾ ಕನ್ನಡ ದೇಶದಲ್ಲೆಲ್ಲಾ ಓದುತ್ತಿದ್ದಾರೆ ಪುಟ್ಟು ಮಾಡಿದ ಹಾಡುಗಳು ದೇಶದಲ್ಲಿ ಎಲ್ಲಾ ಹೆಂಗಸರ ಬಾಯಲ್ಲಿಯೂ ಇವೆ. ಅವು ಯಾರು ಮಾಡಿದವೆಂಬುದು ಅವರಿಗೆ ತಿಳಿಯದು. ಅವುಗಳನ್ನು ಶೇಖರಿಸಿ ಕೊಟ್ಟರೆ ಅಚ್ಚು ಹಾಕಿಸಿ ಪುಸ್ತಕವಾಗಿ ಮಾರಬಹುದೆಂದು ಮೊನ್ನೆ ಒಬ್ಬ ಪುಸ್ತಕ ವ್ಯಾಪಾರಿಗಳು ನನಗೆ ಸೂಚಿಸಿದರು. ಆದರೆ ಮನಸ್ಸಿಗೆ ಏನೋ ಸಂಕಟವಾದ್ದರಿಂದ ನಾನು ಈ ಕೆಲಸಕ್ಕೆ ಕೈಹಾಕಲಿಲ್ಲ. ಪುಸ್ತಕಗಳಲ್ಲಿ ಅಚ್ಚುಹಾಕಿಸಿ ಇಟ್ಟರೆ ಬಂದ ಐಶ್ವರ್ಯವೇನು? ಒಂದೇ ಪುಸ್ತಕವಿರಲಿ, ಅನ್ನೇಕೆ? ಪುಸ್ತಕವೇ ಬೇಡ, ಅವರಲ್ಲಿರುವುವನ್ನು ಎಲ್ಲರೂ ಬಾಯಿಗೆ ಕಲಿತುಕೊಂಡು ಅಷ್ಟು ಜನರೂ ಅಷ್ಟು ಪುಸ್ತಕಗಳಾಗುವುದಾದರೆ ಕವಿಗೆ ಅದಕ್ಕಿಂತಲೂ ಉತ್ಕರ್ಷ ಬೇಕೇ? ಸಾಹಿತ್ಯಕ್ಕೆ ಅದಕ್ಕಿಂತ ಬೇರೆ ಉಪಯೋಗವಿದೆಯೆ?

ಇದೊಂದೂ ಲಕ್ಷ್ಮಮ್ಮನಿಗೆ ತಿಳಿಯದು.—ಬೇಕಿಲ್ಲ, ತಿಳಿದುಕೊಳ್ಳುವ ಯೋಗ್ಯತೆಯಿಲ್ಲ ತನ್ನ ಗಂಡನು ಬರೆದ ಪದ್ಯಗಳನ್ನು ನೆರೆಮನೆಯ ರಾಮಣ್ಣನು ಕಲಿತುಕೊಂಡು ತನ್ನ ಹೆಂಡತಿಗೆ ಹೇಳಿಕೊಟ್ಟನು. ರುಕ್ಕುವು ಅದನ್ನು ತನ್ನ ತಂಗಿಗೆ ಹೇಳಿಕೊಡುತ್ತಿದ್ದಳು. ಲಕ್ಷ್ಮಮ್ಮನು ಅಷ್ಟು ಹೊತ್ತಿಗೆ ಅವರ ಮನೆಗೆ ಹೋದಳು. "ಲಕ್ಷ್ಮಮ್ಮನವರೇ, ಲಕ್ಷ್ಮಮ್ಮನವರೇ! ನಿಮ್ಮ ಯಜಮಾನರು ಮಾಡಿದ ಹಾಡು ಹೇಳಿಸಿಕೊಳ್ಳುತ್ತಿದ್ದೆ" ಎಂದು ಆ ಹುಡುಗಿಯು ಕೀಟಲೆಮಾಡಿದಳು. "ಅಯ್ಯೋ

ಸಂಪತ್ತೇ! ಹಾಡು ಹೇಳುವುದಕ್ಕೆ ಬರುತ್ತೆ ಅಂತ ಅದೂ ಒಂದು ಜಂಭ; ನಮ್ಮ ಯಜಮಾನರ ಹಾಡನ್ನಾದರೂ ಹೇಳಿಸಿಕೊ, ಯಾರ ಯಜಮಾನರ ಹಾಡನ್ನಾದರೂ ಹೇಳಿಸಿಕೊ; ಅದು ಯಾರು ಹೇಳಿಕೊಟ್ಟರೋ ನಿಮ್ಮಕ್ಕನಿಗೆ; ಅವರ ಕೈಯಲ್ಲಿಯೇ ಹೇಳಿಸಿಕೊಂಡಳೋ ಏನೋ!" ಎಂದಳು ಲಕ್ಷಮ್ಮನಿಗೆ ಹಾಡು ಹೇಳುವುದಕ್ಕೆ ಬಾರದು. ಅವಳ ಮದುವೆಯಲ್ಲಿ ಉರುಟಣೆಯ ಕಾಲದಲ್ಲಿಯೂ ಅವಳು ಒಂದು ಹಾಡನ್ನು ಹೇಳಿ ಅರಿಯಳು. "ಅವಳಿಗೆ ಗಂಟಲು ನೋವಾಗಿದೆ, ಉಸಿರೇ ಹೊರಡದು" ಎಂದು ಅವರ ತಾಯಿ ನೆವಹೇಳಿದಳು. ನಿತ್ಯವೂ ಎರಡು ಹೊತ್ತೂ ಅದೇ ನೆವ; ಕೊನೆಗೆ ಒಂದು ದಿನ ಕಿಟ್ಟಣ್ಣನು 'ಹಾಗಾದರೆ ಆರತಿಗೆ ರೂಪಾಯಿ ಹಾಕುವುದೇ ಇಲ್ಲ' ವೆಂದು ಹಟಹಿಡಿದನು. ಅದಕ್ಕೆ ಲಕ್ಷಮ್ಮನು ಮುರಿತುಕೊಂಡು ಒಳಕ್ಕೆ ಹೊರಟೇ ಹೋಗುವುದರಲ್ಲಿದ್ದಳು. ಆದರೆ ಹತ್ತಿರವಲ್ಲಿಯೇ ನಿಂತಿದ್ದ ಪುಟ್ಟುವು ಅವಳನ್ನು ಹಿಡಿದು ನಿಲ್ಲಿಸಿ 'ನಾಕಪ್ಪ ಕಿಟ್ಟಣ್ಣ! ನೀನು ಹಾಕುವ ಒಂದು ರೂಪಾಯಿಗೆ ಹಾಡು ಹೇಳಬೇಕೋ? ಇದು ಬೆಂಗಳೂರು ಷಹರು; ಒಂದೊಂದು ಹಾಡಿಗೆ ಒಂದೊಂದು ಸವರ್ನ ಹಾಕಬೇಕು' ಎಂದು ಹೇಳಿ ಆರತಿಯನ್ನು ಜೊತೆಗೆ ಹಿಡಿದು ಎಂದಿನಂತೆ ತಾನೇ ಹಾಡನ್ನು ಹೇಳಿಬಿಟ್ಟಳು ನಿಜವಾದ ಸಂಗತಿ ಏನೆಂದರೆ, ಲಕ್ಷಮ್ಮನ ಗಂಟಲು ದೊಡ್ಡ ಗಂಟಲು, ಹಾಡು ಹೇಳುವ ಗಂಟಲಲ್ಲ, ಅದರ ಸ್ವರವು 'ವೃಷಭದುರ್ಲಭ' ವಾದದ್ದು, ಗಂಡಸರ ಕೈಯಲ್ಲಿ ವಾದಿಸಿ ಕಾದಿ ದಿಗ್ವಿಜಯವನ್ನು ಪಡೆಯುವುದಕ್ಕೋಸ್ಕರ ನಿರ್ಮಿತವಾದದ್ದು. ಕಿಟ್ಟಣ್ಣನು ಆಗಾಗ್ಗೆ "ನನ್ನ ಹೆಂಡತಿ ಅರ್ಧನಾರೀಶ್ವರನ ಅವತಾರ, ಆದರೆ ಒಂದು ಕಡೆ ಗಂಡನು ಒಂದು ಕಡೆ ಹೆಂಗಸಲ್ಲ, ಒಳಗೆ ಗಂಡಸು ಮೇಲೆ ಹೆಂಗಸು, ಅದರಲ್ಲಿ ಪುರುಷ ಭಾಗವು ಹೊದ್ದುಕೊಂಡಿರುವುದು ಗಜ ಚರ್ಮವಲ್ಲ ಗಾರ್ದಭ ಚರ್ಮ, ಕೈಯಲ್ಲಿ ಹಾವು, ಗಂಟಲಲ್ಲಿ ವಿಷ ಇವೆಲ್ಲಾ ಸಮ" ಎಂದು ಹೇಳುವನು. ನಮಗೆ ಅದನ್ನು ಕೇಳಿ ನಗಬೇಕೋ ಅಳಬೇಕೋ ಗೊತ್ತಾಗದು. ನಮ್ಮ ಅವಸ್ಥೆ ಏನಾಗುವುದೋ ಎಂದು ಯೋಚನೆಯಲ್ಲಿ ಮಗ್ನರಾಗುತ್ತಿದ್ದೆವು. ಕೊನೆಗೆ "ಇವೆಲ್ಲ ಕೋಮಲ ಹೃದಯರಾದ ಇಂಥ ಕವಿಗಳಿಗೆ; ಧರ್ಮಕರ್ಮಗಳೆಂದು ಹೆಂಡತಿಯ ದಾಸರಾಗಿರತಕ್ಕವ

ರಿಗೆ, ನಮ್ಮ ಹೆಂಡರು ಹೀಗೇನಾದರೂ ಮಾಡಿದರೆ ' ಹೋಗು ನಿಮ್ಮಪ್ಪನ ಮನೆಗೆ ' ಎಂದು ಅಟ್ಟಿಬಿಡುವುದಲ್ಲವೇ ! " ಎಂದು ಪೌರುಷ ವನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳುತ್ತಿದ್ದೆವು.

ಅವನು ಮನೆಯಲ್ಲಿ ಪುಸ್ತಕ ಹಿಡಿಯುವುದಕ್ಕಿಲ್ಲ. ಅವನ ಹೆಂಡತಿಯು ' ನಿಮಗೆ ಇನ್ನೇನೂ ತೋರುವುದಿಲ್ಲ ; ನೀವು ಕಂಡಿರು ವುದು ಒಂದು ಪುಸ್ತಕ, ಅದನ್ನು ಕೈಯಲ್ಲಿ ಹಿಡಿದುಕೊಂಡು ಕೂತರೆ ಗೆದ್ದುಬಿಟ್ಟರಿ ! ' ಎನ್ನುವಳು. ಕಿಟ್ಟಣ್ಣನು ಸರಸಿ, (ಆದರೆ ಅವನ ಹೃದಯದಲ್ಲಿದ್ದ ಹಾಸ್ಯರಸವು ಕೊನೆಕೊನೆಗೆ ಬತ್ತಿಹೋಯಿತು.) ಅವನು ತಡೆಯಲಾರದೆ ಒಂದು ದಿನ ' ಹಾಗಾದರೆ ನೌಕರಿಗೆ ಹೋಗಿ ದುಡಿದುಕೊಂಡು ಬರುವುದಕ್ಕೊ, ತಂದುಹಾಕುವುದಕ್ಕೊ ಬೇರೆ ಗಂಡಂ ದಿರು ಇದ್ದಾರೆಯೇನು ? " ಎಂದು ಕೇಳಿದನಂತೆ. " ಅಯ್ಯೋ, ಯಾರೂ ತಂದು ಹಾಕದಿರುವುದನ್ನು ನೀವೇ ತಂದು ಹಾಕುತ್ತಿರೇನೊ, ಮನೆ ಯಲ್ಲಿದ್ದರೆ ಇನ್ನು ಒಡನೆ ಪ್ರಸ್ತಾಪ ಎತ್ತುತ್ತಾಳಲ್ಲ ಅಂತ ಅದೊಂದು ನೆಪ ಹಾಕಿಕೊಂಡು ಹೊರಗೆ ಹೋಗುತ್ತೀರಿ, ಅಷ್ಟೆ ". ಎಂದು ಲಕ್ಷ್ಮಮ್ಮ ಉತ್ತರ ಕೊಟ್ಟಳಂತೆ ಇಂಥ ಉತ್ತರಗಳಿಗೆ ಅವನು ಹಳಬ ನಾಗಿದ್ದನು. ' ಒಂದು ಸ್ವಲ್ಪ ಜೋರುಮಾಡು ಕಿಟ್ಟಣ್ಣ, ಸರಿಹೋಗುತ್ತೆ, ಹೆದರಿಸು ! " ಎಂದು ಒಂದು ದಿನ ನಾನು ಹೇಳಿದೆ ಅದಕ್ಕೆ ಅವನು— ಎಷ್ಟಾದರೂ ಕವಿ !— ' ಅದೇನು ನಾನು ಮಾಡದೆ ಬಿಟ್ಟಿದ್ದಲ್ಲ ಶ್ರೀಪತಿ ! ಬಂಗಾರವನ್ನು ಕಾಯಿಸಿದರೆ ಅದಕ್ಕೆ ಹಚ್ಚು ಬಣ್ಣ ಬರುತ್ತೆ . ತಟ್ಟಿದರೆ ಹೊಳೆಯುವ ತಗಡಾಗುತ್ತೆ, ಎಳೆದರೆ ತಂತಿಯಾಗುತ್ತೆ. ಅರೆಬಂಡೆ ಯನ್ನು ಕಾಯಿಸಿ ಹೊಡೆದರೆ ?--ಪುಡಿಪುಡಿಯಾಗುತ್ತೆ. ಬೇಕಾದರೆ ಅರೆ ಬಂಡೆಯನ್ನಿಟ್ಟುಕೊಂಡಿರಬೇಕು, ಇಲ್ಲದಿದ್ದರೆ ಸುಮ್ಮನಿರಬೇಕು. ಅದು ಪುಡಿಯಾಗಲಿ–ಯಾವ ಉಪಯೋಗವೂ ಇಲ್ಲದೇ ಹೋಗಲಿ ಎನ್ನುವ ಹಾಗಿದ್ದರೆ, ಕಾಯಿಸಿ ಕುಟ್ಟಿ ಏನು ಬೇಕಾದರೂ ಮಾಡ ಬಹುದು " ಎಂದನು. " ಹಾಗಾದರೆ ಏನೂ ಮಾಡುವುದಕ್ಕಾಗುವು ದಿಲ್ಲವೇ ?" ಎಂದು ನಾನು ಕೇಳಿದೆ. ಅದಕ್ಕೆ ಅವನು " ಇಲ್ಲಪ್ಪ, ಇಲ್ಲ! ಅದು ಬೇವಿನ ಗಿಡ, ಏನೇನು ಮಾಡಲಿ ಮಾಡದಿರಲಿ ಅದರಲ್ಲಿ ಬಿಡು

ವುದು ಬೇವಿನ ಹಣ್ಣೇ! ನಮ್ಮ ಪುಟ್ಟು ಇದ್ದಾಳಲ್ಲ–ಅಯ್ಯೋ! ಅವಳನ್ನು ನೋಡಿ ಎಷ್ಟು ವರ್ಷವಾಯಿತು, ನನ್ನ ಮದುವೆಯಲ್ಲಿ ನೋಡಿದ್ದೇ ನೋಡಿದ್ದು ಆದರೂ ಈಗ ನೋಡಿದ ಹಾಗೆ ಇದೆ ಅವಳು ಜ್ಞಾಪಕಕ್ಕೆ ಬರದೇ ಇದ್ದ ದಿನವೇ ಇಲ್ಲ! –ನಮ್ಮ ಪುಟ್ಟು ಇದ್ದಾಳಲ್ಲ, ಅವಳು ಮಾವಿನ ಗಿಡದ ಹಾಗೆ, ಏನು ಮಾಡಲಿ ಮಾಡದಿರಲಿ ಅದರಲ್ಲಿ ಬಿಡು ವುದು ಮಾವಿನ ಹಣ್ಣೆ!" ಎಂದನು "ಮತ್ತೆ ಇಂಥ ಹೆಂಡತಿಯನ್ನೇಕೆ ಬಿಟ್ಟುಬಿಡಬಾರದು? ಇಲ್ಲ, ತಂದೆಯ ಮನೆಗೆ ಕಳುಹಿಸಿಬಿಡಬಾರದು?" ಎಂದು ನಾನು ಕೇಳಿದೆ "ಪಾಪ! ಅಂಥ ಅಪರಾಧ ಅವಳಲ್ಲೇನಿದೆ? ಅದು ಅವಳ ಸ್ವಭಾವವೆಂದು ಆಗಲೇ ಹೇಳಿದೆನಷ್ಟೆ ನನಗೊಬ್ಬನಿಗಾ ದರೆ ಸರಿ, ಅವಳು ಎಲ್ಲರಿಗೂ ಹಾಗೆಯೇ. ನೆರೆಹೊರೆಯವರ ಕೈಯಲ್ಲಿ ಅವಳು ಕಲಕಲನೆ ಜಗಳವಾಡದ ದಿನವಾವುದು? ಆದಿರಲಿ, ಮದುವೆ ಯಾದರೆ ಸುಖವಾಗಿರುತ್ತೇವೆ, ಹೀಗಿರುತ್ತೇವೆ, ಹಾಗಿರುತ್ತೇವೆ ಎಂದು ನಮಗೆ ಹೇಗೆ ಆಶೆಯಿರುತ್ತದೆಯೋ ಹಾಗೆಯೇ ಅವರಿಗೂ ಆಶೆಯಿರು ತ್ತದೆ. ನಮ್ಮ ಮನಸ್ಸಿಗೆ ಒಪ್ಪುವಂತೆ ಮತ್ತೊಬ್ಬರು ನಡೆಯುತ್ತಿಲ್ಲ ವೆಂದು ಆಕ್ಷೇಪಣೆ ಮಾಡತಕ್ಕ ನಾವು, ಮತ್ತೊಬ್ಬರಿಗೆ ಅನುಕೂಲ ವಾಗಿರುವಂತೆ ನಡೆಯಬೇಕೋ ಇಲ್ಲವೋ!" ಎಂದನು.

ನನಗೆ ಮುಂದೆ ಹೇಳುವುದಕ್ಕೆ ತೋರಲಿಲ್ಲ

೩

ಪುಟ್ಟುವಿನ ಗಂಡನು ಸ್ವರ್ಗಸ್ಥನಾದಾಗ ಅವಳು ಮೂರು ತಿಂಗಳ ಗರ್ಭಿಣಿ, ಯಥಾಕಾಲದಲ್ಲಿ ಅವಳು ಒಂದು ಗಂಡು ಮಗುವನ್ನು ಹೆತ್ತಳು. ಅದು "ಕಿಟ್ಟಣ್ಣನ ಹಾಗೇ ಇದೆ" ಎಂದು ಮಗುವನ್ನು ನೋಡಿದವರೆಲ್ಲರೂ ರಾಗವಾಗಿ ಹೇಳಿದರು. ನಾಮಕರಣವಾಗದಿದ್ದದ್ದ ರಿಂದ ಯಾವ ಹೆಸರನ್ನೂ ಇಡಲಿಲ್ಲ. ಮೊದಲು ಪರಿಹಾಸ್ಯಕ್ಕೆಂದು ಕರೆದ "ಕಿಟ್ಟಣ್ಣ" ನೇ ಸ್ಥಿರವಾಯಿತು.

ಈ ವರ್ತಮಾನವು ಕಿಟ್ಟಣ್ಣನಿಗೂ ಬಂತು. ಅದನ್ನು ಕೇಳಿ ಅವನು ನಕ್ಕು ಅನಂತರ "ಈ ನಿರ್ಭಾಗ್ಯನ ಹೆಸರನ್ನು ಯಾಕೆ ಪಾಪ

ಆ ಮಗುವಿಗೂ ಇಟ್ಟರು? ದೇವರು ಆ ಕಿಟ್ಟಣ್ಣನನ್ನಾದರೂ ಈ ಕಿಟ್ಟಣ್ಣನ ಹಾಗೆ ಇಡದಿರಲಿ!" ಎಂದನು.

ಇದೆಲ್ಲ ನಡೆದು ಈಗ ಕೆಲವು ವರ್ಷಗಳು ಕಳೆದು ಹೋಗಿವೆ. ಈಚೆಗೆ ಕಿಟ್ಟಣ್ಣನ ತಂದೆಯೂ ಸೋದರತ್ತೆಯೂ ಸೋದರಮಾವನೂ ಸ್ವರ್ಗಸ್ಥರಾಗಿದ್ದರು. (ಅವನ ತಾಯಿ ಮೊದಲೇ ಸ್ವರ್ಗಸ್ಥಳಾಗಿದ್ದಳು). ಆದ್ದರಿಂದ ಪುಟ್ಟುವು, ಕಷ್ಟವೋ ಸುಖವೋ ಅತ್ತೆಯ ಮನೆಯಲ್ಲಿಯೇ ಶಾಶ್ವತವಾಗಿ ನಿಲ್ಲಬೇಕಾಯಿತು. ತನ್ನ ತಾಯಿತಂದೆಗಳು ಬದುಕಿದ್ದಾಗಲೂ, ಈಚೆಗೆ ತೌರುಮನೆಗೆ ಹೋಗುತ್ತಿರಲಿಲ್ಲ. "ನಾನು ಹಬ್ಬ ಹರಿದಿನಗಳಿಗೆ ತೌರುಮನೆಗೆ ಹೋಗುವ ಸ್ಥಿತಿಯಲ್ಲಿದ್ದೇನೆಯೇ?" ಎಂದು ಕಣ್ಣೀರು ಹಾಕುವಳು ಆದರಿಂದ ಎರಡು ಮೂರು ಸಲ ಪ್ರಯತ್ನಮಾಡಿ ತಮ್ಮ ಸೋದರತ್ತೆಗೆ ಅದೇ ಕೆಲಸವಾಗಿ ಹೇಳಿದರೂ, ಪುಟ್ಟುವನ್ನು ಕರೆಸಿ ನೋಡುವುದು ಕಿಟ್ಟಣ್ಣನಿಗೆ ಸಾಧ್ಯವಾಗಲಿಲ್ಲ. ಒಂದುಸಾರಿ, ಬಹು ಹಿಂದು ಮುಂದು ನೋಡಿ, ಅವಳ ಅತ್ತೆಯ ಮನೆಗೇ ಹೋಗಿದ್ದನು. ಆದರೆ ಗ್ರಹಚಾರಕ್ಕೆ ತಕ್ಕ ಹಾಗೆ ಆವಾಗಲೇ ಮನೆಯವರೆಲ್ಲರೂ, ಸರಿಯಾದ ಜೊತೆ ಸಿಕ್ಕಿದ್ದರಿಂದ ಕಾಶೀಯಾತ್ರೆ ಹೊರಟು ಹೋಗಿದ್ದರು. ಮನೆಯಲ್ಲಿ ಕುರುಡು ಮುದುಕಿ ಮಾತ್ರ ಇದ್ದಳು. ನೆರೆಮನೆಯಲ್ಲಿ ಊಟ ಮಾಡಿಕೊಂಡು ಬಂದು ಮನೆಯಲ್ಲಿ ಕಾವಲಾಗಿ ಇರುತ್ತಿದ್ದಳು. ಕಿಟ್ಟಣ್ಣನಿಗೆ ಇದು ಗೊತ್ತಾಯಿತು; ಆದ್ದರಿಂದ ನಾಡಿಗ ಶೇಷಣ್ಣನವರ ಮನೆಯಲ್ಲಿ ಒಂದು ಮೊಹರು ಮಾಡಿದ ಭಾಗಿಯನ್ನೂ ಒಂದು ಪೆಪ್ಪರ್‌ಮೆಂಟಿನ ಪೊಟ್ಟಣವನ್ನೂ ಕೊಟ್ಟು ಅವುಗಳನ್ನು ಪುಟ್ಟು ಬಂದಮೇಲೆ ಅವಳಿಗೆ ತಲಪಿಸಬೇಕೆಂದು ಹೇಳಿ ಹೊರಟುಬಂದನು.

ಈಚೆಗೆ ಅವನ ದೇಹಸ್ಥಿತಿ ಕೆಟ್ಟು ದಿನ ದಿನಕ್ಕೆ ನವೆಯುತ್ತಾ ಬಂದು ಹಾಸಿಗೆ ಹಿಡಿದಿದ್ದನು, ನಾನು ನಿತ್ಯವೂ ಹೋಗಿ ಅವನನ್ನು ನೋಡಿಕೊಂಡು ಬರುತ್ತಿದ್ದೆನು. ಒಂದು ದಿನ "ಇವತ್ತು ದೇಹಸ್ಥಿತಿ ಹ್ಯಾಗಿದೆ ಕಿಟ್ಟಣ್ಣ?" ಎಂದು ಕೇಳಿದೆ. "ಇರುವುದು ಗೊತ್ತಾಗುವುದಿಲ್ಲವೇ ಶ್ರೀಪತಿ?—ಜಾತಸ್ಯ ಮರಣಂ ಧ್ರುವಂ" ಎಂದು ಗಂಭೀರ

ವಾಗಿ ಉತ್ತರಕೊಟ್ಟನು. "ನಿಮ್ಮ ಪುಟ್ಟುವನ್ನು ನೋಡಿದ್ದೆಯಾ ಈಚೆಗೆ?" ಎಂದು ಕೇಳಿದೆ. "ಇಲ್ಲ, ಋಣಾನುಬಂಧವಿಲ್ಲ; ನಾನು ಅವರ ಊರಿಗೆ ಹೋದರೆ ಆಗಲೇ ಅವರು ಕಾಶೀಯಾತ್ರೆ ಹೋಗಿರ ಬೇಕೆ? ಏನೋ ಅದು ಒಂದು ಚಾಪಲ್ಯ ತೀರಿ ಹೋಗಿದ್ದರೆ ಚನ್ನಾ ಗಿತ್ತು'' ಎಂದನು. ನನಗೆ ಸ್ವಲ್ಪ ಗಾಬರಿಯಾಯಿತು. "ಇದೇಕೆ ಕಿಟ್ಟಣ್ಣ? ಚನ್ನಾಯಿತುಬಿಡು! ಹೀಗೆಲ್ಲಾ ಮಾತನಾಡಿ ಹೆಂಗಸರನ್ನು ಕೈಕಾಲು ಬಿಡಿಸುತ್ತೀಯೆ ಅಷ್ಟ" ಎಂದೆನು.

ಅವತ್ತು ಸಾಯಂಕಾಲ ರೈಲಿನಿಂದ ಕೆಲವು ನೆಂಟರು ಬಂದಿಳಿದರು. ಅವರನ್ನು ನೋಡಿದರೆ ಯಾತ್ರಿಕರೆಂದು ಯಾರಾದರೂ ಹೇಳಬಹುದಾಗಿತ್ತು. ಅವರು ಮತ್ತಾರೂ ಅಲ್ಲ; ಪುಟ್ಟು, ಅವಳ ಮಗು, ಅವಳ ಅತ್ತಿಗೆಯರು, ನಾಡಿಗ ಶೇಷಣ್ಣನವರು, ಆತನ ಹೆಂಡತಿ, ಇಷ್ಟು ಜನ. ಅವರು ಕಾಶಿಯಿಂದ ರಾಮೇಶ್ವರಕ್ಕೆ ಹೋಗಿ ಊರಿಗೆ ಹಿಂತಿರುಗಿ ಬರುತ್ತ ಮಧ್ಯೆ ಬೆಂಗಳೂರಿನಲ್ಲಿ ಉಳಿದುಕೊಂಡರು. ಪುಟ್ಟುವು ಅಲ್ಲಿ ಇಳಿಯುವುದಕ್ಕೆ ಮೊದಲು ಒಪ್ಪಲಿಲ್ಲ, ಆದರೆ ಕೆಲವು ದಿವಸದಿಂದ ಅವಳಿಗೆ ದೇಹದಲ್ಲಿ ಸ್ವಸ್ಥನಾಗಿರಲಿಲ್ಲ. ಅವಳ ಅತ್ತಿಗೆಯರಲ್ಲಿ ಒಬ್ಬಳು ಒಂದು ಮರದ ಮರಗಿಯನ್ನು ಕೊಂಡುಕೊಳ್ಳಬೇಕೆಂದೂ ಮತ್ತೊಬ್ಬಳು ಒಂದು ಚಕ್ಕುಲಿಯ ಒರಳನ್ನು ಕೊಂಡುಕೊಂಡು ಹೋಗಬೇಕೆಂದೂ ಅದಕ್ಕೆ ಅವರ ಊರಿನ ಸುಬ್ಬಕ್ಕನು ದುಡ್ಡು ಕೊಟ್ಟು ಕಳುಹಿಸಿದ್ದಳೆಂದೂ ಹಟಮಾಡಿದರು. ಶೇಷಣ್ಣನವರ ಹತ್ತಿರ ರೈಲು ಖರ್ಚಿಗೆ ದುಡ್ಡು ಸಾಕಾಗುವಷ್ಟಿರಲಿಲ್ಲ. ಆದ್ದರಿಂದ ಹಿಂದೆ ಒಂದೆರಡುಸಲ ಕೋರ್ಟು ಮೊಖದ್ದಮೆಗಾಗಿ ಬೆಂಗಳೂರಿಗೆ ಬಂದು ಕಿಟ್ಟಣ್ಣನ ಮನೆಯನ್ನು ಗುರುತುಮಾಡಿಕೊಂಡಿದ್ದನಾದಕಾರಣ ಈಗ ತಾನೂ ಅಲ್ಲಿಗೆ ಹೋಗಬೇಕಾಗಿ ಸೂಚಿಸಿದನು. ಪುಟ್ಟುವೂ ವಿಧಿಯಿಲ್ಲದೆ ಒಪ್ಪಬೇಕಾಯಿತು.

ಅವರು ಒಬ್ಬರನ್ನೊಬ್ಬರು ನೋಡಿದಾಗ ಇಬ್ಬರೂ ಅಪ್ರತಿಭರಾದರು. ಈಗ ಅವರು ಮೊದಲಿನ ಪುಟ್ಟು ಕಿಟ್ಟಣ್ಣರಾಗಿರಲಿಲ್ಲ. ಆದರೂ ಇಬ್ಬರಿಗೂ ಅವರು ಮೊದಲಿನ ಹಾಗೆಯೇ ಇದ್ದರೆಂಬ ಭ್ರಾಂತಿ! ಒಳಗೆ

ಕೂಡಿ ಬೀಗ ಹಾಕಿದ್ದ ದುಃಖಕ್ಕೆ ಬಾಗಿಲು ತೆಗೆದುಕೊಟ್ಟಂತಾಯಿತು. ಆಮೇಲೆ ಇಬ್ಬರಿಗೂ ರೋಗವು ದಿನೇ ದಿನೇ ಹೆಚ್ಚುತ್ತ ಬಂತು. ನಾನು ನಿತ್ಯವೂ ಹೋಗಿ ಇಬ್ಬರಿಗೂ ಔಷಧವನ್ನು ತಂದುಕೊಟ್ಟು ಬರುತ್ತಿದ್ದೆನು. ಡಾಕ್ಟರು ಅವರಿಗೆ ಏನೂ ಖಾಯಿಲೆ ಇಲ್ಲವೆಂದೂ ಕೇವಲ ಅಶಕ್ತಿಯೆಂದೂ ಹೇಳುತ್ತಿದ್ದನು. ಪುಟ್ಟುವನ್ನೂ ಸಣ್ಣ ಕಿಟ್ಟಣ್ಣನನ್ನೂ ನಾನು ನೋಡಿದ್ದು ಅದೇ ಮೊದಲು. ಕಿಟ್ಟಣ್ಣನು ಕಿಟ್ಟಣ್ಣನಂತಿದ್ದನೆಂದು ಎಲ್ಲರೂ ಹೇಳುತ್ತಿದ್ದದ್ದು ನಿಜ. ಅವನು ಬಹು ತುಂಟ; ಆದರೆ ಬುದ್ಧಿಶಾಲಿ. ಕಣ್ಣಿನಲ್ಲ ತೇಜಸ್ಸು ತಳತಳನೆ ಹೊಳೆಯುತ್ತ ಇರುವುದು. ಅವನನ್ನು ನೋಡಿ 'ಇಂಥ ಒಂದು ಮಗು ನಮ್ಮ ಕಿಟ್ಟಣ್ಣನಿಗೆ ಇದ್ದಿದ್ದರೆ!' ಎಂದುಕೊಂಡೆನು. ಆ ಯೋಚನೆ ಬಂತೋ ಇಲ್ಲವೋ, ಚಟ್ಟನೆ ಎದ್ದು ಹೋಗಿ, "ಕಿಟ್ಟಣ್ಣ, ಈ ಕಿಟ್ಟಣ್ಣನನ್ನು ನೀನು ದತ್ತು ಯಾಕೆ ಮಾಡಿಕೊಳ್ಳಬಾರದು?" ಎಂದೆನು. ಅವನು "ನಿಜ, ನನಗೆ ಹೊಳೆದಿರಲೇ ಇಲ್ಲ" ಎಂದು ಹೇಳಿ ಆ ಹುಡುಗನನ್ನು ದತ್ತುಸ್ವೀಕಾರ ಮಾಡಿಕೊಳ್ಳುವುದಕ್ಕೆ ತಕ್ಕ ಪ್ರಯತ್ನ ಮಾಡಬೇಕೆಂದು ಹೇಳಿದನು. ಲಕ್ಷಮ್ಮನು ಮೊದಲು ಸ್ವಲ್ಪ ಹಟಮಾಡಿ ನೋಡಿದಳು. ಆದರೆ ಕಿಟ್ಟಣ್ಣನು "ನೀನು ಒಪ್ಪದೇ ಇದ್ದರೆ ಆಸ್ತಿಯನ್ನೂ ಜೀವವಿಮೆಯ ಹಣವನ್ನೂ ಆ ಹುಡುಗನ ಹೆಸರಿಗೆ ಉಯಿಲು ಬರೆದುಬಿಡುತ್ತೇನೆ ನೋಡಿಕೋ" ಎಂದು ಹೆದರಿಸಿದನು. ಆಮೇಲೆ ಅವಳು ಒಪ್ಪಿದಳು, ಅವಳಿಗೂ ಆ ಮಗುವಿನ ಆಟವಾಟಗಳನ್ನು ನೋಡಿ ಮನಸ್ಸು ಕರಗಿ ಹೋಗಿತ್ತು. ಒಂದು ದಿವಸ ಶಾಸ್ತ್ರೋಕ್ತವಾಗಿ ದತ್ತಸ್ವೀಕಾರವು ನಡೆದು ಹೋಯಿತು

ಪುಟ್ಟು ಕಿಟ್ಟಣ್ಣ ಇಬ್ಬರೂ ಹಾಸಿಗೆ ಹಿಡಿದವರು ಮತ್ತೇಳಲಿಲ್ಲ. ಕಂಡ ಕಂಡ ವೈದ್ಯವೆಲ್ಲಾ ಆಯಿತು. ಎಂಥೆಂಥ ಟಾನಿಕ್‌ಗಳನ್ನೋ ಕೊಟ್ಟು ಆಯಿತು; ಆದರೆ ಏನೂ ಆಗಲಿಲ್ಲ.

* * * *

ಇಂದು ಕಿಟ್ಟಣ್ಣನಿಗೆ ಬಹಳ ನಿಶ್ಶಕ್ತಿ. ಡಾಕ್ಟರು ಬಂದು ನೋಡಿ 'ಹಾರ್ಟ್ ಫೇಲ್' ಆಗದ ಹಾಗೆ ನೋಡಿಕೊಳ್ಳಬೇಕೆಂದು ಹೇಳಿ

ದನು. ನಾನು ಅವತ್ತು ಕಿಟ್ಟಣ್ಣನ ಇಷ್ಟದಂತೆ ರಜ ತೆಗೆದುಕೊಂಡು ಅವನ ಹತ್ತಿರವೇ ಇದ್ದೆನು. ದೇಹವು ಕ್ಷಣೇ ಕ್ಷಣೇ ಶಕ್ತಿಗುಂದುತ್ತಿತ್ತು. ಆದರೂ ಅವನ ಮನಸ್ಸಿನಲ್ಲಿ ಏನೇನೋ ಯೋಚನೆಗಳು ಬಹು ವೇಗ ವಾಗಿ ಓಡುತ್ತಿದ್ದುವೆಂದು ತೋರುತ್ತದೆ. ಅವನ ಹೊಳೆಯುತ್ತಿದ್ದ ಕಣ್ಣು ಗಳು ಅದನ್ನು ಸೂಚಿಸುತ್ತಿದ್ದುವು. ಸ್ವಲ್ಪ ಹೊತ್ತಿನ ಮೇಲೆ ಕ್ಷೀಣ ವಾದ ನಗುವನ್ನು ನಗುತ್ತ ಜ್ಞಾನಾಜ್ಞಾನಾವಸ್ಥೆಯಲ್ಲಿ "ಹೂವು! ಹೂವು!" ಎಂದನು. "ಕೆಲವರು ಮದುವೆ ಮಾಡಿಕೊಳ್ಳುವುದು ಕಾಲಿಗೆ ಮುಳ್ಳು ಚುಚ್ಚಿಕೊಳ್ಳುವ ಹಾಗೆ, ಇನ್ನು ಕೆಲವರು ಮದುವೆ ಮಾಡಿಕೊಳ್ಳುವುದು ಕಲ್ಲಿನ ಮೇಲೆ ಕಲ್ಲಿಟ್ಟು ಕುಟ್ಟುವ ಹಾಗೆ, ಇನ್ನು ಕೆಲವರು—ಎಲ್ಲಿಯೋ ಕೆಲವರು-ಮದುವೆ ಮಾಡಿಕೊಳ್ಳುವುದು ಎರಡು ಹೂಗಳು ಸೇರುವ ಹಾಗೆ" ಎಂದು ಅವನು ಆಗಾಗ ಹೇಳುತ್ತಿದ್ದನು. ಈಗಲೂ ಅದೇ ಮನಸ್ಸಿಗೆ ಬಂದಿರಬಹುದು. ಆದರೆ "ಹೂವು! ಹೂವು!" ಎಂಬ ಮಾತು ಅಲ್ಲಿ ಹೋಗುತ್ತಿದ್ದ ಅವನ ಹೆಂಡತಿಯ— ಲಕ್ಷ್ಮಮ್ಮನ-ಕಿವಿಗೆ ಬಿತ್ತು. ಅವಳು "ಹೂವೇ! ಹೂವು ಮಾಡಿಸಿ ಕೊಟ್ಟಿರಲ್ಲಾ! ಒಂದು ತಿಂಗಳ ಸಂಬಳ ಹಾಕಿದ್ದರೆ ಒಂದು ಒಳ್ಳೆಯ ಕೆಂಪಿನ ಹೂವು ಆಗುತ್ತಿತ್ತು, 'ಒಂದು ತಿಂಗಳ ಸಂಬಳ ಅದೊಂದಕ್ಕೆ ಹಾಕಿಬಿಟ್ಟು ಉಪವಾಸವಿರೋಣವೇ?' ಎಂದು ಕೇಳಿದಿರಿ, ನೀವು ಮಾಡಿಸಿಕೊಟ್ಟಿರಿ, ನಾನು ಹಾಕಿಕೊಂಡೆ!" ಎಂದು ಮುಖ ತಿರಿವಿ ಕೊಂಡು ಹೊರಟುಹೋದಳು. ಆದರೆ ಆ ಮಾತುಗಳು ಅವನ ಕಿವಿಗೆ ಬಿದ್ದಿರಲಾರವು. ಬಿದ್ದಿದ್ದರೂ ಮನಸ್ಸಿಗೆ ತಲಪಿರಲಾರವು. ಮತ್ತೊಂದು ಕ್ಷಣ, ಕಿಟ್ಟಣ್ಣನ ಎರಡು ಕಣ್ಣುಗಳೂ ಹುವ್ವಿನಂತೆ ಅರಳಿ ನಿಂತು ಬಿಟ್ಟವು

ನನಗೆ ಸಂದೇಹವಾಯಿತು. ನಾಡಿಯನ್ನು ಹಿಡಿದು ನೋಡಿದೆ ನಾಡಿ ಸಿಕ್ಕಲಿಲ್ಲ; ಗಾಬರಿಯಾಯಿತು. "ಲಕ್ಷ್ಮಮ್ಮನವರೇ, ಲಕ್ಷ್ಮಮ್ಮ ನವರೇ, ಸ್ವಲ್ಪ ಗಂಗೇ ತೆಗೆದುಕೊಂಡು ಬನ್ನಿ" ಎಂದು ಕೂಗಿದೆ. ಆಕೆ ಕಾಶಿಯಿಂದ ಪುಟ್ಟು ತಂದುಕೊಟ್ಟಿದ್ದ ಗಂಗೆಯ ತಾಲಿಯನ್ನು ಹಿಡಿದು ಕೊಂಡುಬಂದಳು. ಅಷ್ಟುಹೊತ್ತಿಗೆ ವಸ್ತು ಹೋಗಿದ್ದಿತೆಂದು ತಿಳಿದವ

ನಾಗಿ, ಗಂಗೆಯು ಕೆಲಸವಾಯಿತೆಂದು ಹೇಳಿಬಿಟ್ಟಿ. ಅನಂತರ ಗದ್ದಲ ಕ್ಕಿಟ್ಟುಕೊಂಡಿತು. ಅದು ಸ್ವಲ್ಪ ಶಾಂತವಾಗುವವರೆಗೂ ಪುಟ್ಟಮ್ಮನ ಮೇಲೆ ಯಾರಿಗೂ ಗಮನವೇ ಹೋಗಿರಲಿಲ್ಲ. ಈಗ ನೋಡಲಾಗಿ ಅವಳ ದೇಹದಲ್ಲಿಯೂ ವಸ್ತುವು ಹೋಗಿಬಿಟ್ಟದ್ದಿತು. ಯಾವಾಗ ಹೋಯಿತೋ ಯಾರೂ ನೋಡಲಿಲ್ಲ.

## ಪರಿಶಿಷ್ಟ

ಹುಡುಗನ ಹೆಸರಿನಲ್ಲಿ ಇಬ್ಬರಿಗೂ ದಿನಕರ್ಮಗಳು ಸಾಂಗವಾಗಿ ನಡೆದುವು ಕಿಟ್ಟಣ್ಣನು ಜೀವವಿಮೆ ಮಾಡಿದ್ದ ಆರೇಳು ಸಾವಿರ ರೂಪಾಯಿಗಳು ಮೊನ್ನೆ ತಾನೇ ಬಂದುವು. ಅವನಿಗೆ ಪಿತ್ರಾರ್ಜಿತವಾಗಿ ಬಂದಿದ್ದ ಸ್ವಲ್ಪ ಭೂಮಿ ಕಾಣಿಯ ಆಬಾದಿಗಾಗಿ ಅದರಲ್ಲಿ ಸ್ವಲ್ಪ ಹಣವನ್ನು ತೆಗೆದಿಟ್ಟು ಮಿಕ್ಕದ್ದನ್ನು ಸರ್ಕಾರದಲ್ಲಿ ಹೆಚ್ಚು ಬಡ್ಡಿ ಬರುವ ಹಾಗೆ ಹಾಕಿಸಿದ್ದಾಯಿತು. ಹಾಗೆಯೇ ಲಕ್ಷ್ಮಮ್ಮನ ಆಭರಣಗಳನ್ನು ಮಾರಿ ಬಂದ ಹಣವನ್ನು ಬಡ್ಡಿಗೆ ಹಾಕಬೇಕೆಂದೂ, ಇಲ್ಲದಿದ್ದರೆ ಅನುಕೂಲವಾಗಿ ಭೂಮಿ ಬಂದರೆ ಕೊಂಡುಕೊಳ್ಳಬೇಕೆಂದೂ ನಾನು ಸೂಚಿಸಿದೆ. ಆದರೆ ಅದಕ್ಕೆ ಆಕೆ ಒಪ್ಪಲಿಲ್ಲ. "ಸೊಸೆಗೋಸ್ಕರವಾಗಿ ಒಡವೆಗಳನ್ನೆಲ್ಲಾ ಇಟ್ಟುಕೊಂಡಿದ್ದಾಳೆಯೇನೋ!" ಎಂದು ಹತ್ತಿರ ಇದ್ದ ಯಾರೋ ಹೆಂಗಸರು ಎಂದರು. ಅದಕ್ಕೆ ಆಕೆಯು "ಹೂಂ! ಸೊಸೆಗೆ ಹಾಕಬೇಡವೇ? ಗಂಡ ಮಾಡಿದ್ದಾಯಿತು. ಈಗ ಮಗ ಮಾಡುತ್ತಿದ್ದಾನೆ; ಇನ್ನು ಸೊಸೆ ಬಂದು ಮಾಡುವುದು ಒಂದು ಉಳಿದಿದೆ" ಎಂದು ಸಿಡಸಿಡನೆ ಉತ್ತರ ಕೊಟ್ಟುಬಿಟ್ಟಳು. ನಾನು ಮುಂದಕ್ಕೆ ಬಲವಂತಪಡಿಸಲಿಲ್ಲ.

ಈಗ ಸ್ವಲ್ಪ ದಿನಗಳ ಕೆಳಗೆ ಕಿಟ್ಟಣ್ಣನು ಮಗುವಿಗೆಂದು ಹಳ್ಳಿಯಲ್ಲಿ ಕೊಟ್ಟು ಬಂದಿದ್ದ ಭಾಂಗಿಯು ಬೆಂಗಳೂರಿಗೆ ಸಣ್ಣ ಕಿಟ್ಟಣ್ಣನಿಗೆ ಬಂತು. ಅದನ್ನು ನಾನೇ ಒಡೆದು ನೋಡಿದೆ. ಅದರಲ್ಲಿ ಇದ್ದದ್ದು—ನಕಾಸೆ ಕೆಲಸ ಮಾಡಿದ ಒಂದು ಗಂಧದ ಮರದ ಸಣ್ಣ ಪೆಟ್ಟಿಗೆ, ಅದರೊಳಗೆ ಕಿಟ್ಟಣ್ಣನು ಬರೆದ ಪದ್ಯಗಳ ಸಣ್ಣ ಪುಸ್ತಕ; ಮೂರು ಸಣ್ಣ ಪಟ

ಗಳು—ಒಂದು ಸರಸ್ವತಿಯ ಪಟ, ಒಂದು ವಿವೇಕಾನಂದರ ಪಟ, ಮತ್ತೊಂದು ಕಿಟ್ಟಣ್ಣನ ಪಟ. ಕಿಟ್ಟಣ್ಣನದು ಬೇರೆ ಪಟವಿಲ್ಲದ್ದರಿಂದ ಅದನ್ನು ತೆಗೆದು ಕಟ್ಟು ಹಾಕಿಸಿ ಮನೆಯಲ್ಲಿ ತಗಲುಹಾಕಬೇಕೆಂದು ನಾನು ಪ್ರಯತ್ನ ಮಾಡಿದೆ. ಆದರೆ ನನ್ನ ಪ್ರಯತ್ನವು ನೆರವೇರಲಿಲ್ಲ. ಮಗುವು ಏನು ಮಾಡಿದರೂ ಅದನ್ನು ಕೊಡದೆ ಮೂರುಹೊತ್ತೂ ಪೆಟ್ಟಿಗೆಯನ್ನು ಕೊಂಕುಳಲ್ಲಿಟ್ಟುಕೊಂಡೇ ತಿರುಗಾಡುತ್ತಿದೆ ಆ ಪೆಟ್ಟಿಗೆಯನ್ನೇ ಆಗಲಿ ಪಟವನ್ನೇ ಆಗಲಿ ಬಲವಂತದಿಂದ ಅಥವಾ ಮೋಸದಿಂದ ಕಿತ್ತುಕೊಳ್ಳುವುದಕ್ಕೆ ಯಾರಿಗೆ ಏನು ಅಧಿಕಾರ?

ದೇವರು ಈ ಕಿಟ್ಟಣ್ಣನಿಗಾದರೂ ಸುಖವನ್ನು ಕೊಟ್ಟು ಕಾಪಾಡಲಿ!

‘ ಯಸ್ಯ ಮಾತಾ ಗೃಹೇ ನಾಸ್ತಿ ಭಾರ್ಯಾಚ ಪ್ರಿಯವಾದಿನೀ ।
ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾ ಗೃಹಂ ” ॥

[ಯಾವನಿಗೆ ಮನೆಯಲ್ಲಿ ತಾಯಿಯೂ ಪ್ರಿಯವಾಗಿ ಮಾತನಾಡುವ ಹೆಂಡತಿಯೂ ಇಲ್ಲವೋ, ಅವನು ಕಾಡಿಗೆ ಹೊರಟುಹೋಗಬೇಕು, (ಏಕೆಂದರೆ ಅವನಿಗೆ) ಕಾಡು ಹೇಗೋ ಮನೆಯೂ ಹಾಗೇ ]

೧೯೨೪. ಶ್ರೀಪತಿ.

# ಜ್ಯೋತಿಷಕ್ಕೆ ಬಹುಮಾನ

ನಮ್ಮ ನರಹರಿ ಬಹು ಪ್ರಚಂಡ—ಬಲದಲ್ಲಿಯೂ ಅಷ್ಟೇ, ಬುದ್ಧಿಯಲ್ಲಿಯೂ ಅಷ್ಟೇ. ಆದರೆ ದೇವರು ಈ ಜೀವದ ಯಂತ್ರವನ್ನು ಸೃಷ್ಟಿಸಿದಾಗ ಯಾವುದೋ ಒಂದು ಮೊಳೆಯನ್ನು ಸರಿಯಾಗಿ ಹೊಡೆಯದೆ ಬಿಟ್ಟನೆಂದು ತೋರುತ್ತದೆ. ಏಕೆಂದರೆ ಈತನು ಕಲಿಯದ ವಿದ್ಯೆಯಿಲ್ಲ, ಕೈಪಾಕದ ಕೆಲಸವಿಲ್ಲ, ಆದರೆ ಹಿಡಿದ ಮೇಲೆ ಪಾಂಕ್ತವಾಗಿ ಮಾಡಿ ಮುಗಿಸಿದ್ದಿಲ್ಲ. ಕೊನೆಗೆ ಅವನು ಬಿ.ಎ. ಪ್ಯಾಸು ಮಾಡಿದ್ದೂ ಒಂದು ಆಶ್ಚರ್ಯವೇ ! ಇದ್ದ ಎರಡು ವರ್ಷದಲ್ಲಿ ಮೂರು ನಲ ಮಾವನ ಮೇಲೆ ಮುನಿಸಿಕೊಂಡು ತಿಂಗಳುಗಟ್ಟಲೆಯಾಗಿ ಉತ್ತರದೇಶಕ್ಕೆ ಓಡಿಹೋದವನಿಗೆ 'ಟರ್ಮ್' ಉಳಿಯುವುದು ಹೇಗೆ ? ಓದುವುದು ಯಾವಾಗ ? ಓದಿದ್ದು ನಿಲ್ಲುವುದು ಹೇಗೆ ? ಏನೋ ಅದೃಷ್ಟ ಚೆನ್ನಾಗಿತ್ತು ; ನಮ್ಮ ಪ್ರಿನ್ಸಿಪಾಲೂ ಒಳ್ಳೆಯವನಾಗಿದ್ದ—ಎಲ್ಲವೂ ಸರಿಹೋಯಿತು. ಅವನಿಗೆ ಬರುವ ವಿದ್ಯೆಗಳಲ್ಲೆಲ್ಲಾ ವೈದ್ಯ, ಜ್ಯೋತಿಷ ಇವುಗಳಲ್ಲಿ ಅವನಿಗೆ ಹೆಚ್ಚು ಅನುಭವ, ಇದಕ್ಕೆ ಅವನು ಪಟ್ಟ ಶ್ರಮಕ್ಕಿಂತಲೂ ಇತರರು ಅವನಿಗೆ ಕೊಟ್ಟ ಶ್ರಮವೇ ಹೆಚ್ಚು ಕಾರಣವೆಂದು ತೋರುತ್ತದೆ. ಏಕೆಂದರೆ ಇವುಗಳನ್ನು ಸ್ವಲ್ಪ ಕಲಿತುಬಿಟ್ಟರೆ ನಾಕು, ಆಮೇಲೆ ಜನಗಳು ಚಿತ್ರಹಿಂಸೆ ಮಾಡಿ ಮುಂದಕ್ಕೆ ಕಲಿಸುತ್ತಾರೆ. ಇಂಗ್ಲಿಷ್ ತಿಳಿದವರಲ್ಲಿ ಜ್ಯೋತಿಷವನ್ನು ಇಷ್ಟು ಮಟ್ಟಿಗೆ ಬಲ್ಲವರು ಬಹಳ ಅಪರೂಪ.

ನನಗೆ ಜ್ಯೋತಿಷದಲ್ಲಿ ನಂಬಿಕೆ ಹುಟ್ಟಿದ್ದೇ ಅವನಿಂದ ; ಅಷ್ಟೇ ಏಕೆ, ಮನುಷ್ಯ ಪ್ರಯತ್ನವೆಂಬುದೇ ಇಲ್ಲ, ಎಲ್ಲಾ ದೈವಸಂಕಲ್ಪವೇ ಎಂದು ನಾನು ನಿರ್ಧರಮಾಡಿಕೊಂಡು ನನ್ನ ಸ್ನೇಹಿತರೊಡನೆಲ್ಲಾ ಜಗಳ ಕಾಯುತ್ತಿರುವುದೂ ಅವನಿಂದಲೇ ಎಂದು ಬೇಕಾದರೂ ಹೇಳಬಹುದು. ಏಕೆಂದರೆ, ಜಾತಕದಿಂದ—ಹಿಂದೆ ನಡೆದವನ್ನು ನಡೆದ ಹಾಗೆ ಹೇಳುವುದಿರಲಿ, ಅದೆಲ್ಲವೂ ಜೋಯಿಸರು ತಿಳಿದುಕೊಂಡಿದ್ದರೆಂದು ಹೇಳ

ಬಹುದು !—ಮುಂದಾಗುವುದನ್ನೆಲ್ಲಾ ಹೇಳಿಬಿಟ್ಟರೆ, ಮತ್ತು ಹಾಗೆಯೇ ಎಲ್ಲವೂ ನಡೆದರೆ, ಮತ್ತೇನು ಹೇಳಬೇಕು ? ಎಲ್ಲವೂ ಹೀಗೆ ಹೀಗೇ ನಡೆಯಬೇಕೆಂಬ ದೈವ ಸಂಕಲ್ಪ ಮೊದಲೇ ಇತ್ತೆಂದು ತಾನೇ ಹೇಳಬೇಕು? ಸುಳ್ಳು ಬಂದು ಜ್ಯೋತಿಷಕರಿಗೆ ತನ್ನ ಗುರುಗಳೆಂದು ಮೊದಲು ಪ್ರಣಾಮ ಮಾಡಿತೆಂದು ಹೇಳುವ ಒಂದು ಸಂಸ್ಕೃತ ಶ್ಲೋಕವಿದೆ. ಸರಿಯಾದ ಪರಿಶ್ರಮವಿಲ್ಲದ " ಕಸಬುದಾರಿ " ಜೋಯಿಸರೇ ಈ ಅಭಿಪ್ರಾಯಕ್ಕೆ ಕಾರಣವೆಂದು ತೋರುತ್ತದೆ ಏನೇ ಆಗಲಿ, ಅವನು ಹೇಳಿದ ಜ್ಯೋತಿಷಗಳಂತೂ, ಅದರಲ್ಲಿಯೂ ನನ್ನ ವಿಷಯದಲ್ಲಿ ಹೇಳಿದವುಗಳಂತೂ ಯಾವುದೂ ಸುಳ್ಳಾಗಿಲ್ಲ. ನಾನೊಬ್ಬನೇ ಅಲ್ಲ, ನಾನು ಕಂಡ ಹಾಗೆ ನಮ್ಮೂರಿನಲ್ಲಿ ಅನೇಕರಿಗೆ ಅವನು ಹೇಳಿದ ಸಂಗತಿಗಳು ನಿಜವಾಗಿ ನಡೆದಿವೆ. ಅವುಗಳಲ್ಲಿ ಒಂದನ್ನು ಮುಂದೆ ಬರೆದಿದ್ದೇನೆ.

ಈಗ ಕೆಲವು ವರ್ಷಗಳ ಕೆಳಗೆ ಒಂದು ದಿನ ಸಾಯಂಕಾಲ ಅವನನ್ನು ತಿಮ್ಮಣ್ಣ ಭಟ್ಟರ ಮನೆಗೆ ಕರೆದುಕೊಂಡು ಹೋಗಿದ್ದೆ

ತಿಮ್ಮಣ್ಣ ಭಟ್ಟರು ನಮ್ಮ ಬಂಧುಗಳು. ಅವರ ಮಗಳಿಗೆ ಮದುವೆಯಾಗಬೇಕಾಗಿತ್ತು. ಲಗ್ನ ಪತ್ರಿಕೆ ಮಾಡಿಕೊಳ್ಳುವುದಕ್ಕಾಗಿ ಬೀಗರು ಬಂದಿದ್ದರು.

" ಬಾ ಶ್ರೀಪತಿ, ಕೂತುಕೋ ಬನ್ನಿ. ನರಹರಿರಾಯರೇ, ಬಹಳ ಅಪರೂಪ ಭೇಟಿ ''

ನರಹರಿ—" ನಾನೇನು ಕಳ್ಳನೇ ? "

ಎಲ್ಲರೂ ಮುಖ ಮುಖ ನೋಡಿದರು,--ನಾನು ನಗುತ್ತಾ 'ಅಪರೂಪಂ ಚೋರದರ್ಶನಂ!' ಎಂದೆ, ಆಮೇಲೆ ಅರ್ಥವಾಗಿ ಎಲ್ಲರೂ ಗೊಳ್ಳೆಂದು ನಕ್ಕರು 'ನೀವು ಮಾತನಾಡುವುದೇ ಹೀಗೆ, ಸ್ವಾಮಿ!—ಎರಡು ಮೂರು ಮೆಟ್ಟಿಲುಗಳನ್ನು ಬಿಟ್ಟು ಹಾರಿ ಹಾರಿ ಏಣಿಯನ್ನು ಹತ್ತಿಕೊಂಡು ಹೋಗುವ ಹಾಗೆ. ಶ್ರೀಪತಿ, ನರಹರಿರಾಯರಿಗೆ ಜಾತಕ ತೋರಿಸಲೇ ಇಲ್ಲವಲ್ಲ!' ಎಂದು ಹೇಳಿ ತಿಮ್ಮಣ್ಣ ಭಟ್ಟರು ಎರಡು ಜಾತಕಗಳನ್ನು ನರಹರಿಯ ಕೈಯಲ್ಲಿ ಕೊಟ್ಟರು.

" ಇದು ಸಾವಿತ್ರಮ್ಮನ ಜಾತಕ!—ಇದು ಯಾರದು ? ''

" ಅದು ವರನ ಜಾತಕ"

" ಒಂದು ದೀಪ ತರಿಸಿ."

" ಎಲೆಕ್ಟ್ರಿಕ್ ದೀಪವಿದೆ! ಇನ್ಯಾತಕ್ಕೆ ದೀಪ? ''

" ಹಾಗಲ್ಲ, ತಾವು ತರಿಸಿ, ಎಲೆಕ್ಟ್ರಿಕ್ ದೀಪ, ನಲ್ಲಿಯ ನೀರು ಇವೆಲ್ಲಾ ನಂಬತಕ್ಕದ್ದಲ್ಲ.''

'' ಓಹೋ ಹಾಗಾದರೆ ಸರಿ—ಮಗೂ, ದೇವರ ಮುಂದೆ ಹೊತ್ತಿಸಿಟ್ಟಿರುವ ಒಂದು ಸೊಡಲನ್ನು ತೆಗೆದುಕೊಂಡು ಬಾರೋ! ''

ಹುಡುಗನು ಒಳ್ಳೆಣ್ಣೆ ಬತ್ತಿ ಹಾಕಿ ಉರಿಯುತ್ತಿದ್ದ ಒಂದು ಸೊಡಲನ್ನು ತಂದಿಟ್ಟನು.

ಜಾತಕಗಳನ್ನು ಒಂದೊಂದು ಕೈಯಲ್ಲಿ ಒಂದೊಂದು ಹಿಡಿದುಕೊಂಡು ನರಹರಿಯು ನೋಡಲಾರಂಭಿಸಿದನು. ಕ್ಷಣ ಮಾತ್ರದಲ್ಲಿ ಆವನ ಮುಖವು ಗಂಭೀರವಾಯಿತು. ಸುಮಾರು ಕಾಲುಘಂಟೆಯ ಮೇಲೆ ನೋಡಿದನು. " ಕಾಗದ ಸ್ಲೇಟು ಏನಾದರೂ ಬೇಕೇನಯ್ಯಾ" ಎಂದು ಕೇಳಿದೆ. ಏಕೆಂದರೆ ಆತನು ಇಂಥ ವಿಷಯಗಳನ್ನೆಲ್ಲಾ ಐದು ನಿಮಿಷದಲ್ಲಿ ಹೇಳಿಬಿಡುತ್ತಿದ್ದನು. ನನ್ನ ಪ್ರಶ್ನೆಗೆ ಯಾವ ಉತ್ತರವನ್ನೂ ಹೇಳದೆ ತಲೆಯನ್ನು ಅಲ್ಲಾಡಿಸಿ,

" ಈ ವರ ಕಪ್ಪಾಗಿದಾನೆಯೋ ಶಾಸ್ತ್ರಿಗಳೇ ?"

" ಸ್ವಲ್ಪ ಎಣ್ಣೆಗೆಂಪು"

ನಮಗೆ ಬೇಕಾದವರ ಬಣ್ಣವು ಕಪ್ಪಾಗಿದ್ದರೆ ಅದನ್ನು ಹೀಗೇ ಹೇಳುವುದು.

" ಹೌದು, ಅದನ್ನೇ ನಾನು ಹೇಳಿದ್ದು—ಆದರೆ ಸಾವಿತ್ರಮ್ಮನಿಗೆ ಕೆಂಪಗೆ ಉದ್ದಕ್ಕೆ ಇರುವ ಬುದ್ಧಿವಂತನಾದ ಗಂಡ ಸಿಕ್ಕಬೇಕಲ್ಲಾ ; ಕಳತ್ರ ಸ್ಥಾನವನ್ನು ನೋಡಿ:—ಶುಕ್ರ ಉಚ್ಚನಾಗಿ ಕೂತುಕೊಂಡಿದ್ದಾನೆ, ಅಂಗಾರಕ ನೋಡುತ್ತಾ ಇದ್ದಾನೆ"

" ಈ ವರನೂ ಬುದ್ಧಿವಂತ"

" ಇರಬಹುದು. ಆದರೂ—"

" ಆದರೂ–ಏನು ? ಜಾತಕ ಸರಿ ಹೋಗುವುದಿಲ್ಲವೇ ? ಅನಂತ

ಜೋಯಿಸರು ಆಗಬಹುದು ಅಂತ ಹೇಳಿದರು, ರಾಮಾಜೋಯಿಸರಿಗೆ ತೋರಿಸಿದೆ, ಅವರೂ ದಿವ್ಯವಾಗಿದೆ ಎಂದರು."

"ನಿಜ, ಜಾತಕವೇನೋ ಸರಿಹೋಗುತ್ತೆ. ಆದರೆ—"

"ಮತ್ತೆ ಆದರೆ—ಅಂತೀರಲ್ಲ; ಏನು ಹಾಗಂದರೆ "

"ನಾನು ಕಸಬುದಾರಿ ಜೋಯಿಸನ ಹಾಗೆ ಹೇಳಲೋ, ನಿಜ ವಾಗಿ ಹೇಳಲೋ?"

"ಕಸಬುದಾರಿ ಏಕೆ ಸ್ವಾಮಿ? ನಾನೇನು ನಿಮಗೆ ದಕ್ಷಿಣೆ ಕೊಡು ವುದಕ್ಕೆ ಬಂದಿದ್ದೇನೆಯೇ? ನಿಮಗೆ ತಿಳಿದಿದ್ದನ್ನು ಹೇಳಿಬಿಡಿ."

"ಹಾಗಾದರೆ, ಈ ಹುಡುಗಿಗೂ ಈ ವರನಿಗೂ ಮದುವೆಯಾಗು ವುದಿಲ್ಲ ಸ್ವಾಮಿ!"

ನಾನು—"ಇದೇನಯ್ಯಾ ಇಷ್ಟು ಖಂಡಿತವಾಗಿ ಹೇಳಿಬಿಟ್ಟೆ?"

"ಹಾಗಾದರೆ ಕಸಬುದಾರಿ ರೀತಿಯಲ್ಲಿ ಹೇಳಲೇನು?"

ಇಷ್ಟು ಹೊತ್ತಿಗೆ ಮಳೆಯು ಆರಂಭವಾಗಿ ಒಂದೆರಡು ಸಲ ಮಿಂಚಿ, ದೀಪವು ತಟ್ಟನೆ ಆರಿ ಹೋಯಿತು. ಮಿಣಕ್ ಮಿಣಕನೆ ಉರಿಯುತ್ತಿದ್ದ ಆ ನೊಡಲಿನ ದೀಪವಿಲ್ಲದಿದ್ದರೆ ಎಲ್ಲರೂ ಕತ್ತಲೆಯಲ್ಲಿರ ಬೇಕಾಗಿತ್ತು. ದೀವದ ಕಡ್ಡಿ ಹುಡುಕುವುದರಲ್ಲಿ ಪುನಃ ಬೆಳಕು ಬಂತು. ತಿಮ್ಮಣ್ಣಭಟ್ಟರು ಸುಮ್ಮನಿದ್ದರೂ, ಈಗ ಅವರ ಬೀಗರು ಬಾಯಿಹಾಕಿ 'ಜಾತಕ ಸರಿ ಹೋಗುತ್ತದೆಯೋ ಇಲ್ಲವೋ ಸ್ವಾಮಿ, ಅದನ್ನು ಹೇಳ ಬಿಡಿ!' ಎಂದರು.

ನರಹರಿ—"ಆಹಾ ಅದಕ್ಕೇನು ಸಂದೇಹ ನಾನು ಆಗಲೇ ಹೇಳಲಿಲ್ಲವೇ?"

ಅವರು—"ಸರಿ ಮತ್ತೆ."

ಸಾವಿತ್ರಮ್ಮನು ಒಳ್ಳೆಯ ಲಕ್ಷಣವಂತೆ; ಆ ಹುಡುಗಿಯನ್ನು ತಂದುಕೊಳ್ಳಬೇಕೆಂದು ಈಗ ನಾಲ್ಕೈದು ವರ್ಷಗಳ ಹಿಂದೆಯೇ ಪ್ರಸ್ತಾಪ ಮಾಡಿ ತಿಮ್ಮಣ್ಣಭಟ್ಟರಿಂದ ಅವರು ಮಾತು ತೆಗೆದುಕೊಂಡಿ ದ್ದರು. ಆದ್ದರಿಂದ ಈಗ ಭಟ್ಟರೂ ಸ್ವಲ್ಪ ಹಿಂದು ಮುಂದು ನೋಡಿ —'ಈ ಹುಡುಗ ಇಂಗ್ಲಿಷ್ ಜೋಯಿಸರ ಮಾತೇನು!' ಎಂದು

ಕೊಂಡೋ ಏನೋ — "ಶ್ರೀಕಂಠೇಶ್ವರನು ಮಾಡಿಸಿದಂತಾಗಲಿ; ನಾನೇನೋ ಮಾತುಕೊಟ್ಟು ಬಿಟ್ಟಿದ್ದೇನೆ. ಅದನ್ನು ಮೀರುವವನಲ್ಲ. ಎಲ್ಲವೂ ನಿಷ್ಕರ್ಷೆಯಾಗಿರುವಾಗ ಈಗೇನು ಮಾಡುವುದು? ಇಷ್ಟೂ ಆಗಿ ಜಾತಕಗಳು ಸರಿಹೋಗುತ್ತವೆಯಲ್ಲ" ಎಂದು ಗಟ್ಟಿಯಾಗಿ ಹೇಳಿಕೊಂಡರು. ಎಲ್ಲರೂ ಎದ್ದರು. ನಾವೂ ಎದ್ದೆವು. ತಿಮ್ಮಣ್ಣ ಭಟ್ಟರು "ಎಲ್ಲಿ ಹೊರಟೆ, ಶ್ರೀಪತಿ! ನೀನೂ ನಮ್ಮ ಜೋಯಿಸರೂ ಇಬ್ಬರೂ ಇಲ್ಲಿಯೇ ಊಟಮಾಡಬೇಕು. ಇವತ್ತು ಲಗ್ನಪತ್ರಿಕೆಯಾಗಿದೆ, ನನ್ನ ಬೀಗರಿಗೆ ಔತನ, ಅನಾಯಾಸವಾಗಿ ಬಂದವನು ಹೊರಟು ಹೋಗುವುದೇ? ಏಳಿ ಏಳಿ ಕೈಕಾಲು ತೊಳೆದುಕೊಳ್ಳಿ!" ಎಂದರು. ನನಗೂ ಹಸಿವಾಗುತ್ತಿತ್ತು, ಹೊರಗೆ ಮಳೆ ಬೇರೆ, ಕೈಯಲ್ಲಿ ಕೊಡೆಯಿರಲಿಲ್ಲ, ಈಚೆಗೆ ನೀ ಪದಾರ್ಥ ಬಿದ್ದು ಬಹಳ ದಿನವಾಗಿತ್ತು ಏನೋ ಬಲವಂತಕ್ಕೆ ಒಪ್ಪಿಕೊಂಡವನ ಹಾಗೆ ಒಪ್ಪಿಕೊಂಡು ನರಹರಿಯನ್ನೂ ಒಪ್ಪಿಸಿದೆ. ಗರಗೊಬ್ಬಟ್ಟು, ಬಿಸಿ ನಿಂಬೆ ಹಣ್ಣಿನ ಚಿತ್ರಾನ್ನ, ಹಾಲುಕೀರು, ಬೋಂಡ ಮಾಡಿದ್ದರು. ಪುಷ್ಕಳವಾಗಿ ಊಟ ಮಾಡಿ ಎಲೆ ಅಡಿಕೆಯನ್ನು ಹಾಕಿಕೊಂಡು ಅಪರೀಕ್ಷಿತವಾಗಿ ಔತಣದೂಟ ಸಿಕ್ಕಿದ್ದಕ್ಕೆ ಸಂತೋಷಪಡುತ್ತ ಹೊರಟೆವು.

ತಿಮ್ಮಣ್ಣ ಭಟ್ಟರು "ಏನಪ್ಪಾ, ನೀವಿಬ್ಬರೂ ಮದುವೆ ಎಂಟು ದಿನವೂ ಇಲ್ಲಿಯೇ ಇದ್ದುಬಿಡಬೇಕು, ತಿಳಿಯಿತೋ, ಮಳೆಯೇನೋ–ಛತ್ರಿ ಕೊಡಲೇ?" ಎಂದರು

ನಾನು ಹೊರಕ್ಕೆ ಬಂದು ನೋಡಿದೆ; ಅಷ್ಟು ಹೊತ್ತಿಗೆ ಮಳೆ ನಿಂತು ಪರಿಷ್ಕಾರವಾಗಿ ಬೆಳದಿಂಗಳು ಬಂದಿತ್ತು, ಆದ್ದರಿಂದ ಛತ್ರಿಯನ್ನು ತೆಗೆದುಕೊಳ್ಳದ ಹಾಗೇ ಮನೆಗೆ ಬಂದೆವು. ನರಹರಿಯದು ಮಹಾ ಕೆಟ್ಟಬಾಯಿ; ಆಡಿದ್ದು ಆಗಿ ಬಿಡುವುದು. ಆದ್ದರಿಂದ ನಾನು ದಾರಿಯುದ್ದಕ್ಕೂ ಏನೇನೋ ಯೋಚಿಸುತ್ತಾ ಮನೆಯು ಹತ್ತಿರವಾದಾಗ 'ಏನೋ ನರಹರಿ ಹೀಗೆ ಹೇಳಿ ಬಿಟ್ಟೆ!' ಎಂದೆ.

"ನೋಡು ಬೇಕಾದರೆ ಆ ಹುಡುಗಿಗೂ ಆ ಹುಡುಗನಿಗೂ ಮದುವೆಯೇನಾದರೂ ಆದರೆ ನಾನು ಇತಃಪರ ಪಂಚಾಂಗ ಹಿಡಿಯುವುದಿಲ್ಲ."

"ಸಾಕು ಮಹಾರಾಯ! ನಿನಗೆ ಪಂಚಾಂಗ ಒಂದು ಕೇಡು; ಈಗಬೇಕಾದರೆ ನೂರೈವತ್ತು ಜನರ ಕುಂಡಲಿಗಳನ್ನು ಸರಸರನೆ ಒಪ್ಪಿಸಿ ಬಿಡುತ್ತೀಯೆ. ಇಂಥವನಿಗೆ ಪಂಚಾಂಗ ಒಂದು ದಂಡ; ನಿನಗೆ ಒಂದು ವರ್ಷದ ಪಂಚಾಂಗವೆಲ್ಲಾ ಬಾಯಿಗೇ ಬರುತ್ತದೆಯೋ ಏನೋ! ಆದಿರಲಿ, ಆ ಹುಡುಗಿಗೆ ಈ ಸಲ ಮದುವೆಯಾಗುವ ಯೋಗವಿದೆಯೋ ಇಲ್ಲವೋ?"

"ಈ ಸಲ ಮದುವೆಯೇನೋ ಆಗಬೇಕು. ಶುಕ್ರ ಮುಂದಿನ ಮನೆಗೆ ಹೋಗುವಷ್ಟರಲ್ಲಿಯೇ ಆಗಬೇಕು"

"ಅದು ಯಾವಾಗ ಶುಕ್ರ ಮುಂದಕ್ಕೆ ಹೋಗುವುದು?"

"ಚೈತ್ರ ಶುದ್ಧ ದ್ವಾದಶಿಯೋ ತ್ರಯೋದಶಿಯೋ ಹೋಗುತ್ತಾನೆ"

ಅಷ್ಟು ಹೊತ್ತಿಗೆ ಸುಮಾರು ಹತ್ತು ಗಂಟೆ ಇರಬಹುದು; ನಮ್ಮ ತಾಯಿ ಇನ್ನೂ ಎಚ್ಚರವಾಗಿದ್ದಳು. ಹೋದ ಕೂಡಲೇ ನಡೆದ ಸಂಗತಿಯನ್ನೆಲ್ಲಾ ಆಕೆಗೆ ಹೇಳಿ, ಸ್ವಲ್ಪ ನೀರು ತರಿಸಿ ಕುಡಿದು ಮಲಗಿಬಿಟ್ಟೆ.

೨

ಇವತ್ತು ಚೈತ್ರಶುದ್ಧ ಚೌತಿ; ಸಾಯಂಕಾಲ ವರಪೂಜೆ ನಡೆಯಬೇಕು, ಆದ್ದರಿಂದ ಕಛೇರಿಯಿಂದ ನೆಟ್ಟಗೆ ಭಕ್ಷೀನರಸಪ್ಪನವರ ಛತ್ರಕ್ಕೆ ಹೋದೆ, ಅಲ್ಲಿ ಬೀಗರನ್ನು ಇಳಿಸಿದ್ದರು. ನನ್ನನ್ನು ನೋಡಿದ ಕೂಡಲೇ ಭಟ್ಟರು 'ಯಾಕಪ್ಪಾ ಇಷ್ಟು ಹೊತ್ತು ಮಾಡಿದೆ? ನೀವೇ ಹೀಗೆ ಮಾಡಿದರೆ ಇನ್ನು ಹ್ಯಾಗೆ?' ಎಂದರು.

ನಾನು—"ಏನು ಮಾಡಲಿ ಮಾವಯ್ಯ, ಕಛೇರಿ ಬಿಡುವುದೇ ಹೊತ್ತಾಯಿತು, ಐದು ಘಂಟೆಯ ತನಕ ಎಂದು ಹೆಸರು, ಅವನ ಮನೆ ಎಂಟೆಮ್ಮೆ ಕರೆಯ, ನಮ್ಮ ಸಾಹೇಬ ಒಂದೊಂದು ದಿನ ಕೂತವನು ಕೂತೇ ಬಿಡುತ್ತಾನೆ; ಎಷ್ಟು ಹೊತ್ತಾದರೂ ಏಳುವುದೇ ಇಲ್ಲ, ಸಾಲದ್ದಕ್ಕೆ ಇವತ್ತು ಯಾರೋ ಹರಟೆಗೆ ಬಂದು ಕೂತಿದ್ದರು. ಅವನು ಎದ್ದು ಹೋಗುವವರೆಗೂ ನಾವು ಹೊರಡುವುದಕ್ಕಿಲ್ಲ"

"ಹೌದಪ್ಪ, ಸರ್ಕಾರದ ತಾಬೆ ಅಂದರೇ ಹಾಗೆ, ನಾಳೆ ರಜ ತಗೊಂಡಿದ್ದೀಯೋ ಇಲ್ಲವೋ?"

" ನಾಳೆ ರಜಾ ತೆಗೆದುಕೊಳ್ಳದೇ ಉಂಟೆ ? ''

" ಸರಿ ಹಾಗಾದರೆ, ಎಲ್ಲಾ ಹೊರಡಿ, ನಿಮ್ಮ ಹೆಂಗಸರೆಲ್ಲಾ ಇಲ್ಲೇ ಬಂದಿದ್ದಾರೆ; ನೀನು ಮತ್ತೆ ಮನೆಗೆ ಹೋಗಬೇಡಪ್ಪ; ಕುದುರೆ ಗಾಡಿ, ಗ್ಯಾಸ್ ಲೈಟ್ ಬಂತೇನು ನೋಡು.''

ನರಹರಿಯು ಎರಡನ್ನೂ ತೆಗೆಸಿಕೊಂಡು ಬರುತ್ತಿದ್ದನು. ಅವನಿಗೆ ದಿವಾನರಿಂದ ಝಾಡಮಾಲಿಯವರೆಗೆ ಎಲ್ಲರೂ ಗೊತ್ತು ; ಎಲ್ಲರಲ್ಲಿಯೂ ಸ್ನೇಹ—ಒಂದೇ ವಿಧವಾದ ಬಳಕೆ, ಭೇದವಿಲ್ಲ. ಇಂಥ ಚಿಲ್ಲರೆ ಕೆಲಸಕ್ಕೆ ಅವನಿಂದ ಸಹಾಯವಾಗುವಷ್ಟು ಮತ್ತಾರಿಂದಲೂ ಆಗುವುದಿಲ್ಲ

ಮಗ್ಗುಲಲ್ಲಿಯೇ ದೇವಸ್ಥಾನ, ಅಲ್ಲಿ ವರಪೂಜೆ ನಡೆಯಿತು. ಇನ್ನು ವರನನ್ನು ಮೆರವಣಿಗೆ ಮಾಡಿಕೊಂಡು ಕರೆದುಕೊಂಡು ಹೋಗಬೇಕು, ಅಷ್ಟುಹೊತ್ತಿಗೆ ಬೀಗರ ಕಡೆಯವರೊಬ್ಬರು ಬಂದು,

" ರಾಯರೇ ಒಂದು ಕೆಲಸವಾಗಬೇಕಾಗಿದೆಯಲ್ಲಾ !''

" ಏನು ? ''

" ಈ ಗಾಡಿಯನ್ನು ಸ್ವಲ್ಪ ತೆಗೆದುಕೊಂಡು ಹೋಗಲೇ ? ''

" ಎಲ್ಲಿಗೆ ? ''

" ಆಸ್ಪತ್ರೆಗೆ ''

" ಆಸ್ಪತ್ರೆಗೆ ಯಾಕೆ ?—ಈಗ ಎಲ್ಲರೂ ಮನೆಗೆ ಹೊರಟಿದ್ದೇವೆ !"

" ನಮ್ಮ ಗೌರಮ್ಮನಿಗೆ ದಾರಿಯಲ್ಲಿ ಎರಡು ಮೂರಾವರ್ತಿ ಪ್ರವೃತ್ತಿಯಾಯಿತು. ಇಲ್ಲಿ ಬಂದ ಮೇಲೆ ವಾಂತಿಗಿಟ್ಟುಕೊಂಡಿದೆ, ಏನೋ ಗಾಡಿಯಲ್ಲಿ ಬಂದದ್ದು, ಪಿತ್ತ-ಎಂತ ಮಾಡಿಕೊಂಡಿದ್ದೆ ; ಇಲ್ಲಿಗೆ ದೀಪ ತೆಗೆಸಿಕೊಂಡು ಬರುವುದಕ್ಕೇಂತ ಹೋದರಲ್ಲಾ ಆ ಪಂಡಿತರು ನೋಡಿ ಕಾಲರಾ ಎಂತ ಹೇಳಿದರು. ಆಸ್ಪತ್ರೆಗಾದರೂ ಕರೆದುಕೊಂಡು ಹೋಗೋಣ ಅಂತ.''

ನಾನು ತಿಮ್ಮಣ್ಣ ಭಟ್ಟರಿಗೆ " ಸ್ವಲ್ಪ ಗಾಡಿಯನ್ನು ತೆಗೆಸಿಕೊಂಡು ಹೋಗಿ ಬಂದು ಬಿಡುತ್ತೇನೆ, ಈಗ ಬಂದುಬಿಟ್ಟೆ ; ಹೆಂಗಸರೆಲ್ಲಾ ಸಿದ್ಧವಾಗಲಿ'' ಎಂದು ಹೇಳಿ, ಕಾಯಿಲೆಯಾದ ಹೆಂಗಸು ಆಕೆಯ ಸಹಾ

ಯಕ್ಕೆ ಮತ್ತೊಬ್ಬ ಹೆಂಗಸು ಆಕೆಯ ತಮ್ಮ ಇಷ್ಟು ಜನವೂ ಹೊರ ಟೆವು. ಡಾಕ್ಟರು ನನಗೆ ಗುರುತು. ಆದರೆ ಆತನು ಆಸ್ಪತ್ರೆಯಲ್ಲಿ ಇರ ಲಿಲ್ಲ, ಆದ್ದರಿಂದ ಅದೇ ಗಾಡಿಯನ್ನೇ ತೆಗೆದುಕೊಂಡು ಆತನಿದ್ದ ಕಡೆಗೆ ಹೋಗಿ ಕರೆದುಕೊಂಡು ಬಂದೆ. ನನ್ನ ದಾಕ್ಷಿಣ್ಯಕ್ಕೆ ಆತನು ರೋಗಿಯನ್ನು ನೋಡಿಕೊಳ್ಳುವುದಾಗಿ ಹೇಳಿದನು. ನಾನು ಅವರೆಲ್ಲ ರನ್ನೂ ಅಲ್ಲಿಯೇ ಬಿಟ್ಟು ಹಿಂದಕ್ಕೆ ಬಂದೆ; ಗಾಡಿಯವನು "ಏನು ಸ್ವಾಮಿ, ಆರು ಗಂಟೆಗೆ ಬಂದೆ, ಈಗ ಒಂಭತ್ತು ಗಂಟೆಯಾಯಿತು" ಎಂದು ಗೊಣಗುವುದಕ್ಕೆ ಮೊದಲು ಮಾಡಿದನು. ನಾನು ಒಂದು ರೂಪಾಯಿ ತೆಗೆದು ಕೈಲಿಟ್ಟೆ. ಗೊಣಗುವುದು ನಿಂತುಹೋಯಿತು.

ಮೆರವಣಿಗೆಯಾಯಿತು, ಊಟವಾಯಿತು, ನಾವು ಮಲಗಿ ಕೊಳ್ಳುವ ಹೊತ್ತಿಗೆ ಸುಮಾರು ಹನ್ನೆರಡು ಗಂಟೆ, ಮಲಗಿಕೊಳ್ಳುವು ದಕ್ಕೆ ಮುಂಚೆ ನಾನು ಮತ್ತೊಂದು ಸಾರಿ ಆಸ್ಪತ್ರೆಗೆ ಹೋಗಿ ನೋಡಲು ಡಾಕ್ಟರು "ಅದು ಕಾಲರಾ ಕೇಸು, ಕ್ಯಾಂಪಿಗೆ ಕಳುಹಿಸಿಬಿಟ್ಟೆ, ನಾಳೆ ಹನ್ನೆರಡು ಗಂಟೆಯಾದಷ್ಟನ್ನು ನೋಡಿ ಯಾವುದೂ ಮಾತು" ಎಂದು ಬಿಟ್ಟರು. ಇದನ್ನು ತಿಮ್ಮಣ್ಣಭಟ್ಟರಿಗೆ ತಿಳಿಸಿ ನಾನು ಬೆಳಗಿನ ಜಾವಕ್ಕೇ ಎದ್ದು ಕ್ಯಾಂಪಿಗೆ ಹೋಗಿ ನೋಡಿಕೊಂಡು ಬರಬೇಕೆಂದು ನಿಶ್ಚಯಿಸಿದೆನು.

ನನಗೆ ಎಚ್ಚರವಾದಾಗ ಸುಮಾರು ಐದು ಗಂಟೆಯಿರಬಹುದು, ಅಷ್ಟು ಹೊತ್ತಿಗೆ ಹೆಂಗಸರು ಆಗಲೇ ಎದ್ದು ಸಡಗರ ಪಡುತ್ತಿದ್ದರು, ನನ್ನ ಎದುರಿಗೆ ಸ್ವಲ್ಪ ದೂರದಲ್ಲಿ ಹಾಸಿಗೆಯ ಮೇಲೆಯೇ ಕುಳಿತು ತಿಮ್ಮಣ್ಣ ಭಟ್ಟರು ಬಂದು ಓಲೆಯ ಪುಸ್ತಕವನ್ನು ಮೊಗುಚಿಹಾಕುತ್ತಿ ದ್ದಾರೆ. ದೀಪವು ಉರಿಯುತ್ತಿದೆ, ಒಂದೊಂದು ಸಾರಿ ಕನ್ನಡಕವನ್ನು ಮೂಗಿನಮೇಲೆ ಹಿಂದಕ್ಕೂ ಮುಂದಕ್ಕೂ ತಳ್ಳಿಕೊಳ್ಳುತ್ತಿದ್ದಾರೆ. ಗಮನವೆಲ್ಲವೂ ಪುಸ್ತಕದಮೇಲೆಯೇ ಇದೆ; ಆದರೆ ಮನಸ್ಸು ಕ್ಷುಬ್ಧವಾ ದಂತಿದೆ; ನಾನು ಎದ್ದು ಹೋಗಿ "ಏನು ಮಾವಯ್ಯಾ ನೋಡುತೀರಿ?" ಎಂದೆ.

"ಏನೋ ನೋಡುತಾ ಇದ್ದೇನಪ್ಪ—ಸರಿಹೋಗುತ್ತಾ ಇಲ್ಲ.

ರಾತ್ರಿಯೆಲ್ಲಾ ನಿದ್ದೆಯೇ ಬರಲಿಲ್ಲ; ಏನೋ ಕೆಟ್ಟ ಕೆಟ್ಟ ಕನಸು"

"ಊಟ ಹೊತ್ತಾಯಿತು, ಮಲಗಿದ್ದೂ ಹೊತ್ತು; ಹೊತ್ತಾಗಿ ಮಲಗಿಕೊಂಡರೆ ಹಾಗೇ"

"ಹಾಗಲ್ಲಪ್ಪ! ಆಕೆಗೆ ಕಾಯಿಲೆ ಎಂತ ನೀನು ಹೇಳಿದಾಗಿನಿಂದ ನನ್ನ ಮನಸ್ಸಿಗೆ ಹೇಗೆ ಹೇಗೋ ಇದೆ, ಏನೇನೋ ಪ್ರಶ್ನೆಗಳನ್ನು ನೋಡುತ್ತಿದ್ದೇನೆ, ಒಂದೂ ಸರಿ ಹೋಗುತ್ತಿಲ್ಲ"

"ಅವೇ? ಅದಕ್ಕೂ ಇದಕ್ಕೂ ಏನು ಸಂಬಂಧ? ಈಗ ನಾನು ಹೋಗಿ ನೋಡಿಕೊಂಡು ಬರುತ್ತೇನೆ."

"ಏನೋಪ್ಪ!"

ನಾನು ಮುಖವನ್ನು ತೊಳೆಯದೆ ಹಾಗೆಯೇ ಕ್ಯಾಂಪಿಗೆ ಹೋಗಿ ನೋಡಿದೆ ಡಾಕ್ಟರನ್ನು ಕರೆಯುವುದು ಅನಾವಶ್ಯಕವಾಗಿ ತೋರಿತು. ನಾನು ಅಲ್ಲಿಯೇ ನಿಂತು, ಮದುವೆ ನಡೆದು ಹೋದರೆ ಹೋಗಲಿ ಎಂದು ಕೊಂಡೆ ಇಷ್ಟು ಹೊತ್ತಿಗೆ ಎರಡು ಕಡೆಯವರಿಗೂ ಈ ವಿಚಾರ ತಿಳಿದು ನಾಲ್ಕಾರು ಜನ ಅಲ್ಲಿಗೆ ಬಂದು ಬಿಟ್ಟರು, ಇಲ್ಲಿಯ ವಿಚಾರ ಖಂಡಿತ ವಾಗಿ ಗೊತ್ತಾದ ಹೊರತು ಮುಂದೆ ಕೆಲಸ ನಡೆಯುವ ಹಾಗಿಲ್ಲವೆಂದು ತಿಳಿಯ ಬಂತು. ಆದ್ದರಿಂದ ನಾನು ಹಿಂತಿರುಗಿ ಮನೆಗೆ ಬಂದು ನೋಡಲು ಪುರೋಹಿತರ ಗಲಾಟೆಯಿಂದಲೂ ಹೆಂಗಸರ ಗಡಿಬಿಡಿ ಯಿಂದಲೂ ನಡೆದಷ್ಟು ಕೆಲಸ ನಡೆದಿದೆ, ತಿಮ್ಮಣ್ಣಭಟ್ಟರು ದೇವರ ಮನೆಯಲ್ಲಿ ಕುಳಿತು ದೇವತಾರ್ಚನೆ ಮಾಡುತ್ತಿದ್ದಾರೆ. ಅಷ್ಟು ಹೊತ್ತಿಗೆ ನಾನು ಬಂದಿದ್ದನ್ನು ನೋಡಿ, 'ಏನಪ್ಪಾ ಸಮಾಚಾರ? ನಾನು ಆಗಲೇ ಮೂರು ನಾಲ್ಕು ಸಲ ಶ್ರೀಪತಿ ಬರಲಿಲ್ಲವೇ ಎಂತ ಕೇಳಿದೆ' ಎಂದರು.

'ಇನ್ನೂ ಏನೂ ಸಮಾಚಾರವಿಲ್ಲ'

'ಹಾಗೆಂದರೆ?'

'ಕಾಯಿಲೆ ಹಾಗೇ ಇದೆ.'

'ಸ್ವಲ್ಪ ವಾಸಿಯೋ?'

'ವಾಸಿಯೇನೂ ಇಲ್ಲ, ಕಾಲರಾದಲ್ಲಿ ಹೀಗೇ ಅಂತ ಹೇಳುವು ದಕ್ಕಾಗುವುದಿಲ್ಲ.'

ಅವರ ಮುಖ ಜೋಲುಬಿತ್ತು. ‘ಹಾಗಾದರೆ, ಈಗ ಏನು ಮಾಡೋಣಯ್ಯ ?’

‘ನಡೆಯುವ ಕೆಲಸ ನಡೆಯಲಿ, ಅದಕ್ಕೂ ಇದಕ್ಕೂ ಏನು ಸಂಬಂಧ ?’

ಆದರೆ ಅವರಿಗೆ ಮನಸ್ಸು ಒಪ್ಪಲಿಲ್ಲ. ಇಷ್ಟು ಹೊತ್ತಿಗೆ ಪುರೋಹಿತರು--ಅವರಿಗೆ ಈ ಒಳಗಿನ ಬೇಗೆ ಒಂದೂ ತಿಳಿಯದು---ಬಂದು, ಲಗ್ನ ಮೀರಿ ಹೋಗುತ್ತದೆ ಎಂದು ಗದ್ದಲ ಮಾಡಿದರು. ಭಟ್ಟರು ಮುಂದೆ ತೋರದೆ ದೇವರ ಮಂದಾಸನದಲ್ಲಿದ್ದ ರಾಮಾಯಣ ಪುಸ್ತಕವನ್ನು ತೆಗೆದುಕೊಂಡು ಅದಕ್ಕೆ ಕಡ್ಡಿ ಹಾಕಿ ನೋಡಿದರು ಅದರಲ್ಲಿ ಬಂದ ಪ್ರಕರಣವು ಅಷ್ಟು ಗೋಡೆಯ ಮೇಲಿನ ದೀಪವಾಗಿತ್ತು—ಶ್ರೀರಾಮರು ಮದುವೆ ಮಾಡಿಕೊಂಡು ಬರುತ್ತಾ ಪರಶುರಾಮರನ್ನು ಕಂಡದ್ದು. ಮೊದಲು ಸ್ವಲ್ಪ ತೊಂದರೆಯಾಗಿ ಆ ಮೇಲೆ ಎಲ್ಲವೂ ಶುಭವಾಗುವುದೆಂದು ವಸಿಷ್ಠರು ಹೇಳಿದ್ದನ್ನೇ ತಮ್ಮ ಪ್ರಶ್ನೆಗೆ ಉತ್ತರವಾಗಿಟ್ಟುಕೊಂಡು ಭಟ್ಟರು ಧಾರೆಗೆ ಪ್ರಯತ್ನ ಮಾಡಲು ನಿಶ್ಚಯಿಸಿ ಹೊರಟರು.

ಇಷ್ಟು ಹೊತ್ತಿಗೆ ರೋಗಿಯು ಮೃತಳಾದಳೆಂದು ವರ್ತಮಾನವು ಬಂದೇ ಬಿಟ್ಟಿತು !

೩

ವರನಿಗೂ ಅವನ ತಾಯಿ ತಂದೆಗಳಿಗೂ ಮೃತಳಾದ ಆಕೆಯು ದೂರದ ಸಂಬಂಧ, ಬರಿಯ ಸ್ನಾನವೋ ಅಥವಾ ಅದೂ ಇಲ್ಲವೋ ಇಷ್ಟು ಮಾತ್ರ ಸಂದೇಹದಲ್ಲಿತ್ತು ; ಹೇಗಾದರೂ ಆಗಲಿ ಸ್ನಾನ ಮಾಡಿ ಕೆಲಸ ಮಾಡಬಹುದೆಂದು ವೈದಿಕರಾದವರು ಅಭಿಪ್ರಾಯ ಪಟ್ಟರು. ಆದರೆ ನಾರಾಯಣ ಶಾಸ್ತ್ರಿಗಳು (ವರನ ತಂದೆ) ಇದಕ್ಕೆ ಒಪ್ಪಲಿಲ್ಲ ; “ನಮ್ಮ ಜೊತೆಯಲ್ಲಿ ಬಂದವರ ಯೋಗಕ್ಷೇಮ ನೋಡದೇ ನಾನು ಇಲ್ಲಿ ಉತ್ಸವದಲ್ಲಿ ಮೆರೆಯಬೇ ? ಅಲ್ಲದೆ ನಮಗೆ ಇದು ಶಕುನವಲ್ಲ ; ನನಗೆ ಈ ಲಗ್ನ ಇಷ್ಟವಿಲ್ಲ, ಮುಂದೆ ಯಾವುದಾದರೂ ಒಂದು ಲಗ್ನ ಸಿಕ್ಕಿದರೆ ನೋಡೋಣ ; ಇಲ್ಲದಿದ್ದರೆ ಈ ಸಂಬಂಧವೇ ಬೇಡ ; ಯಾರಾ

ದರೂ ಚೆನ್ನಾಗಿರುವುದು ಬೇಕು'' ಎಂದು ಖಂಡಿತವಾಗಿ ತಮ್ಮ ಅಭಿಪ್ರಾಯವನ್ನು ತಿಳಿಸಿಬಿಟ್ಟರು.

ಭಟ್ಟರಿಗೆ ಬೆಳಗಿನಿಂದಲೂ ಮನಸ್ಸಿನಲ್ಲಿ ಕಳವಳವಿದ್ದದ್ದು ಈಗ ಪರಿಹಾರವಾಯಿತು, ಆದರೆ ಎಂಥ ಆಭಾಸ! ಹೊರಗಿನಿಂದ ಐವತ್ತು ಜನದಮೇಲೆ ನೆಂಟರಿಷ್ಟರು ಬಂದಿದ್ದಾರೆ, ಊರಿನಲ್ಲಿ ನೂರಾರು ಜನಕ್ಕೆ ಲಗ್ನ ಪತ್ರಿಕೆಗಳನ್ನು ಕಳುಹಿಸಿದೆ, ಮಾಡಿದ ಪದಾರ್ಥಗಳು ನಷ್ಟವಾಗುತ್ತವೆ—ಈಗ ಏನು ಮಾಡುವುದು ?

ಈ ಮಧ್ಯೆ ನರಹರಿಯು ಬೇಗರೊಡನೆ ಕ್ಯಾಂಪಿಗೆ ಹೋಗಿ ಶವವನ್ನು ಒಪ್ಪ ಮಾಡಿಸಿದನು. ಪಾಪ ! ತಾನೂ ಹೆಗಲು ಕೊಡಬೇಕಾಯಿತಂತೆ. ನಾನು ಇದನ್ನು ಕೇಳಿ '' ನರಹರಿ, ನಿನ್ನಂಥವನು ಜೊತೆಯಲ್ಲಿ ಒಬ್ಬನಿದ್ದರೆ ಯಾವುದಕ್ಕೂ ಯೋಚನೆ ಮಾಡಬೇಕಾಗಿಲ್ಲ. ನೀನು ದಿಕ್ಕಿಲ್ಲದವರಿಗೆ ದಿಕ್ಕು, ಬಡವರಿಗೆ ತ್ರಾತ'' ಎಂದೆ. ಅದಕ್ಕೆ ಅವನು ' ನಾನೇನು ಹೆಣ ಹೊರುವವನು ಎಂತ ಮಾಡಿಕೊಂಡೆಯೋ ? ' ಎಂದು ಒರಟು ಒರಟಾಗಿ ಮಾತನಾಡಿದನು—ಅವನು ಯಾವಾಗಲೂ ಹಾಗೆಯೇ, ಮಾತಿನಲ್ಲಿ ನಯವಿಲ್ಲ. ನಾನು 'ಮತ್ತೇನು? ಕಣ್ಣಿಗೆ ಕಾಣುವುದಕ್ಕೆ ಕನ್ನಡಿ ಯಾಕೆ ? ಬಿ. ಎ. ಪ್ಯಾಸು ಮಾಡಿದವರು ನಿನ್ನ ಹಾಗೆ ಯಾರು ಇ-ಇ-ಇದನ್ನು ಹೊರುವುದಕ್ಕೆ ಹೋಗುತ್ತಾರೆ, ಕೈಯಲ್ಲಿ ಮಾರ್ಕೆಟ್ಟನಿಂದ ಒಂದು ತರ್ಕಾರಿ ಗಂಟನ್ನು ಹಿಡಿದುಕೊಂಡು ಬರುವುದೂ ನನಗೆ ಅವಮಾನವಪ್ಪ ! ' ಎಂದು ಬಿಟ್ಟ.

ಮದುವೆ ನಿಂತುಹೋದ ಸಮಾಚಾರವು ಮದ್ದಿನ ಬಾಣದಂತೆ ಹತ್ತಿ ಹರಡಿಕೊಂಡು ಆ ಸುತ್ತಿನವರಿಗೆ ಅನೇಕರಿಗೆ ತಿಳಿದು ಹೋಯಿತು. ಆದ್ದರಿಂದ ಮಧ್ಯಾಹ್ನದ ಹೊತ್ತಿಗೆ ಹೊರಗಿನಿಂದ ಬಂದವರು ಯಾರೋ ಒಬ್ಬಿಬ್ಬರು. ಅವರು ವರ್ತಮಾನವನ್ನು ತಿಳಿದು ಪಶ್ಚಾತ್ತಾಪಪಟ್ಟುಕೊಂಡು ಹೋದರು.

ಊಟವಾದ ಮೇಲೆ ಮಾತನಾಡುತ್ತಿರುವಾಗ ವೆಂಕಪ್ಪಯ್ಯನೆಂಬವರೊಬ್ಬರು " ತಿಮ್ಮಪ್ಪಯ್ಯ, ತಿಮ್ಮಪ್ಪಯ್ಯ, ನಿನ್ನೆ ಶ್ರೀರಂಗಪಟ್ಟಣಕ್ಕೆ ಮದುವೆಗೆ ಹೋಗಿದ್ದಾಗ ಅಲ್ಲಿ ಒಬ್ಬ ಹುಡುಗನನ್ನು ನೋಡಿದೆ. ಅವನು

ಯಾರು ಎಂತ ಕೇಳಿದೆ, ಹತ್ತಿರವಿದ್ದವನು ಯಾರೋ ಒಬ್ಬರು 'ಅವರು ಚಾಮರಾಜನಗರ' ಎಂದರು. ನಾನು 'ಯಾವ ಜನ" ಎಂತ ಕೇಳಿದೆ; ನಮ್ಮ ಜನವೇ ಅಂತ ಹೇಳಿದರು. ಆ ಹುಡುಗನಿಗೆ ಇನ್ನೂ ಮದುವೆ ಯಾಗಿದ್ದ ಹಾಗೆ ತೋರಲಿಲ್ಲ; ತಡುಪು ಸುತ್ತಿಕೊಂಡು ತಿರುಗಾಡು ತ್ತಿದ್ದ, ನೋಡುವುದಕ್ಕೂ ಕೆಂಪಗೆ ಲಕ್ಷಣವಾಗಿದ್ದ, ನಾಳೆ ನಾಡಿದ್ದು ಲಗ್ನವಿದ್ದರೆ ಆ ಹುಡುಗನನ್ನು ಕರೆದುಕೊಂಡು ಬಂದು ಮದುವೆ ಯಾಕೆ ಮಾಡಿ ಬಿಡಬಾರದು? ಶುಭವು ಆರಂಭವಾದದ್ದು ನಡೆದೇ ಹೋಗಲಿ" ಎಂದರು. ಭಟ್ಟರು "ಏನು ನೀನು ಹೇಳುವ ಮಾತು? ನಾಲ್ಕಾರು ವರ್ಷಗಳ ಕೆಳಗೆ ಗೊತ್ತಾಗಿದ್ದ ಮದುವೆಯೇ ನಡೆಯಲಿಲ್ಲ ವಂತೆ, ಎಲ್ಲಿಯೋ ಯಾರನ್ನೋ ಹುಡುಕಿಕೊಂಡು ಹೋಗಿ ಬಂದು ನಾಳೆ ಮದುವೆಯಂತೆ, ಜಾತಕ ಸರಿಹೋಗಬೇಕು ಅವರು ಮದುವೆ ಮಾಡಿಕೊಳ್ಳುವುದಕ್ಕೆ ಒಪ್ಪಬೇಕು ಸಿದ್ಧವಾಗಬೇಕು. ಮದುವೆ ಎಂದರೆ ಸುಮ್ಮನೇಯೆ? ಇಷ್ಟೂ ಆಗಿ ಅವರನ್ನು ಎಲ್ಲಿ ಅಂತ ಹುಡುಕುವುದು? ಹೆಸರು ಗೊತ್ತಿಲ್ಲ; ಕುಲ ಗೊತ್ತಿಲ್ಲ. . . ." ಎನ್ನುವುದಕ್ಕೆ ಮೊದಲು ಮಾಡಿದರು.

ವೆಂ—"ಹಾಗಲ್ಲಪ್ಪ, ಒಂದು ವೇಳೆ ಇವೆಲ್ಲಾ ಸರಿಹೋದರೆ ಮದುವೆ ನಡೆಯುವುದಕ್ಕೆ ಏನು ಅಡ್ಡಿ? ನಾನು ಇವತ್ತು ಮಧ್ಯಾಹ್ನ ಅಲ್ಲಿಂದ ಹೊರಟಾಗ ಎಲ್ಲರೂ ಬೆಳಗಿನ ಜಾವದ ರೈಲಿನಲ್ಲಿಯೇ ಹೊರಟು ಹೋಗಿದ್ದರು. ಪ್ರಾಯಶಃ ಅವರು ಇಷ್ಟು ಹೊತ್ತಿಗೆ ನಗರ ವನ್ನು ಸೇರಿರಬಹುದು, ಹೋಗಿನೋಡೋಣ ನಗರವೇನು ದೊಡ್ಡ ಪಟ್ಟಣವಲ್ಲ; ಅಲ್ಲಿ ನಮ್ಮ ಜನವೂ ಬಹಳವಾಗಿಲ್ಲ, ಕಣ್ಣು ಕುರುಡಾದರೆ ಬಾಯಿ ಕುರುಡೇ? ಈಗ ಸಾಯಂಕಾಲ ಐದು ಗಂಟೆಗೆ ಹ್ಯಾಗಿದ್ದರೂ ನಂಜನಗೂಡಿಗೆ ರೈಲು ಹೊರಡುತ್ತದೆ. ಹೋಗಿ ನೋಡೋಣ,—ಏನು ಹೇಳುತ್ತೀಯ?"

ಭಟ್ಟರಿಗೆ ಸ್ವಲ್ಪ ಆಸೆಯೂ ತಲೆದೋರಿತು. "ಆಗಲಿ ಹಾಗಾದರೆ, ನೆಂಟರಿಷ್ಟರು ಬಂದವರೆಲ್ಲಾ ಇಲ್ಲಿಯೇ ಇರಲಿ, ಮಾಡಿದ ಪ್ರಯತ್ನ ಗಳೆಲ್ಲಾ ನಡೆಯುತ್ತಿರಲಿ. ಶ್ರೀಪತಿ, ನೀನು ರಾಮು ಇಬ್ಬರೂ

ಮನೆಯ ಕಡೆ ನೋಡಿಕೊಳ್ಳುತ್ತ ಇರಿ; ನಾವು ನಗರಕ್ಕೆ ಹೋಗಿ ವಿಚಾರ ಮಾಡಿ ನಾಳೆ ಬೆಳಗ್ಗೆ ಯಾವುದಕ್ಕೂ ತಂತಿ ಕೊಡುತ್ತೇವೆ; ದೇವರಿಚ್ಛೆ ಹ್ಯಾಗಿದ್ದರೆ ಹಾಗಾಗಲಿ'' ಎಂದರು.

ಎಲ್ಲವೂ ಅವರು ಯೋಚಿಸಿದ್ದಂತೆಯೇ ಆಯಿತು; ಗಂಡಿನವರಿಗೆ ಮದುವೆ ಮಾಡಬೇಕೆಂಬ ಇಷ್ಟವೇನೋ ಇತ್ತು; ಆದರೆ ಹಣ ಒದಗದ್ದ ರಿಂದಲೂ ಹೆಣ್ಣು ಸಿಕ್ಕದಿದ್ದದ್ದರಿಂದಲೂ ಮುಂದಿನ ವರ್ಷ ಮಾಡ ಬೇಕೆಂದಿದ್ದರು ಇದನ್ನು ತಿಳಿದು ವೆಂಕಪ್ಪಯ್ಯನವರೇ ಮುಂದು ವರಿದು ಎರಡು ಖರ್ಚನ್ನೂ ಹೆಣ್ಣಿನವರೇ ವಹಿಸುವುದಾಗಿಯೂ ದುಡ್ಡಿ ಗಾಗಿಯಾಗಲಿ ಸಾಮಗ್ರಿಗಾಗಿಯಾಗಲಿ ಅವರು ಯೋಚಿಸಬೇಕಾಗಿರ ಲಿಲ್ಲವೆಂತಲೂ ಹೇಳಿ ಒಪ್ಪಿಸಿದರು. ಮೈಸೂರಿಗೆ ತಂತಿಯನ್ನು ಕಳು ಹಿಸಿಕೊಟ್ಟು ಊಟವಾದಮೇಲೆ ನಂಜನಗೂಡಿಗೆ ಹೊರಟು ರೈಲು ಹತ್ತಿ ಮೈಸೂರಿಗೆ ಬಂದು ತಲುಪಿದರು.

೪

ಮೂರನೆಯ ದಿನ ಧಾರೆ, ಹಾಕಿದ ಚಪ್ಪರವೂ ಕಟ್ಟಿದ ತೋರಣವೂ ಇನ್ನೂ ಆರಿಕೂಡ ಇರಲಿಲ್ಲ; ಎಲ್ಲವೂ ನಿರ್ವಿಘ್ನವಾಗಿ ನಡೆಯಿತು. ಬಂಧು ಬಳಗದವರು ನಾಲ್ಕು ದಿನ ಮುಂಚಿತವಾಗಿ ಬಂದು ಎರಡು ದಿನ ಹೆಚ್ಚಾಗಿದ್ದು ಉಡುಗೊರೆ ಔತನಗಳನ್ನು ಮಾಡಿಸಿಕೊಂಡು ಹೊರಟು ಹೋದರು.

ಇದು ನಡೆದು ಈಗ ನಾಲ್ಕೈದು ವರ್ಷಗಳಾಗಿ ಹೋದುವು. ಈಗ ಸಾವಿತ್ರಮ್ಮನಿಗೆ ಒಂದು ಗಂಡು ಮಗುವಿದೆ; ತಿಮ್ಮಣ್ಣ ಭಟ್ಟರು ತಮ್ಮ ಮಗಳು ಅಳಿಯ ಮೊಮ್ಮಗು ಬೀಗರು ಎಲ್ಲರನ್ನೂ ನವರಾತ್ರಿಗೆ ಕರೆಸಿಕೊಂಡರು; ಅವರು ನವರಾತ್ರಿಗೆ ಬಂದವರು ಬೆಟ್ಟದ ಜಾತ್ರೆ ಯಾಗುವವರೆಗೂ ನಿಂತರು. ಅಷ್ಟು ಹೊತ್ತಿಗೆ ದೀಪಾವಳಿ ಹಬ್ಬ ಬಂತು. ಮೂರನೆಯ ದಿನ ಮಗುವಿಗೆ ವರ್ಷದ ಹೆಚ್ಚು; ಹಿರಿಯ ಮಗು, ಗಂಡು ಮಗು, ಆದರ ವರ್ಷದ ಹೆಚ್ಚನ್ನು ತಮ್ಮೂರಿನಲ್ಲಿಯೇ ಮಾಡಬೇಕೆಂದು ಸಾವಿತ್ರಮ್ಮನ ಹಟ, ಇಲ್ಲಿಯೇ ಮಾಡಬೇಕೆಂದು ನಮ್ಮೆಲ್ಲರ ಹಟ. ಕೊನೆಗೆ ನಮ್ಮ 'ಹಟವೇ ಗೆದ್ದು ಮೊನ್ನೆ ನಾನೂ

ನರಹರಿಯೂ ಊಟಕ್ಕೆ ಹೋಗಿದ್ದು ಬಂದೆವು. ನರಹರಿಯು ಒಂದು ಕಲಾಪತ್ತಿನ ಟೋಪಿಯನ್ನು ಮಗುವಿಗೆ ಓದಿಸಿದನು. ಆದರೆ ಅದು ಟೋಪಿಯನ್ನು ಹಾಕಿದರೆ, ತಲೆಯ ಮೇಲಿನಿಂದ ಕಿತ್ತು ಒಗೆಯುವುದು. ಯಾರು ಇಟ್ಟರೂ ಒಲ್ಲದು, ಕೊನೆಗೆ ಹನೆಯ ಮೇಲೂ ಬರಿಯ ತಲೆಯಲ್ಲಿಯೇ ಕೂರಿಸಿ ಆರತಿ ಮಾಡಿದರು.

ಅದನ್ನು ನೋಡಿ ನರಹರಿಯು "ಎಷ್ಟಾದರೂ ವೈದಿಕಗೊಡ್ಡು; ಕೂತುಕೊಂಡು ಬ್ರಹ್ಮಾಭಟ್ಟನ ಹಾಗೆ ಗಂಧಾಕ್ಷತೆ ಬಳಿಸಿ ಕೊಳ್ಳು ತ್ತಾನೆ. ಟೋಪಿ ಹಾಕಿದರೆ ಕಿತ್ತು ಬಿಸಾಡುತ್ತಾನೆ!" ಎಂದು ಹಾಸ್ಯ ಮಾಡಿದನು. ಅದನ್ನು ಕೇಳಿ ಮಗುವಿನ ಅಜ್ಜ "ಅವನಿಗೆ ಗಂಧಾಕ್ಷತೆ ಬರಿಯತಲೆ ಇವೇ ಇರಲಪ್ಪ; ನಿಮ್ಮ ಕ್ರಾಪೂ ಜೈತಲೆಯೂ ಹಾಳು ಹಣೆಯೂ, ಟೋಪಿಯೂ ಬ್ಯಾಡ," ಎಂದು ಮಗುವನ್ನು ಎತ್ತಿಕೊಂಡು ಮುದ್ದಿಟ್ಟರು.

ಅವತ್ತೂ ಗರಗೊಬ್ಬಟ್ಟು, ಬಿಸಿ ನಿಂಬೇಹಣ್ಣಿನ ಚಿತ್ರಾನ್ನ, ಹಾಲು ಖೀರು, ಬೋಂಡ ಇವುಗಳನ್ನು ಮಾಡಿದ್ದರು; ಜೊತೆಗೆ ಲಾಡು ಬೇರೆ; ನಾನೂ ನರಹರಿಯೂ ಒಬ್ಬರ ಪಕ್ಕದಲ್ಲಿ ಒಬ್ಬರು ಕುಳಿತು ಊಟ ಮಾಡುತ್ತಿದ್ದೆವು. ಆಗ ನರಹರಿಯು ಊಟದ ಮಧ್ಯದಲ್ಲಿ ಎಡಗೈ ಬೆರಳಿನಿಂದ ತಿವಿದನು, ನಾನು "ಊಟಮಾಡುವಾಗ ಮುಟ್ಟಬೇಡವೋ! ಮುದುಕರು ನೋಡಿ ಏನಾದರೂ ಅಂದಾರೋ!" ಎಂದೆನು.

"ಇನ್ನೊಂದು ಸಲ ಊಟಮಾಡಬೇಕಾಗುತ್ತೆ ಅಷ್ಟೇ ತಾನೆ! ಅದನ್ನೂ ಮಾಡಿಬಿಟ್ಟರಾಯಿತು. ನಾನು ಅವತ್ತು ರಾತ್ರಿ ಚಂದ್ರ ಶೇಖರಯ್ಯನವರ ಮನೆಯಲ್ಲಿ ಮಾಡಲಿಲ್ಲವೆ? ಅದಿರಲಿ, ಹಿಂದೆ ಒಂದು ದಿನ ಇಲ್ಲಿ ಇದೇ ಊಟ ಮಾಡಿದ್ದೆವು ಜ್ಞಾಪಕವಿದೆಯೊ?"

ನಾನು ಸ್ವಲ್ಪ ಜ್ಞಾಪಿಸಿಕೊಂಡು, ಬಾಯಿ ತುಂಬ ಅನ್ನವಿದ್ದದ್ದರಿಂದ 'ಹುಂ' ಎಂದು, ಆಮೇಲೆ 'ಅವತ್ತು ಇದೆಲ್ಲಾ ಮಾಡಿತ್ತೇ?' ಎಂದು ಕೇಳಿದೆನು.

"ಇದೇ ಅಡಿಗೆ; ಆದರೆ ಇವತ್ತು ಲಾಡು ಮಾತ್ರ ಹೆಚ್ಚು; ಗಂಡು ಮಗು; ಅಷ್ಟೂ ಬೇಡವೇ?"

"ಅದು ಗಂಡು ಮಗುವಿಗಲ್ಲ, ನಿನ್ನ ಜ್ಯೋತಿಷಕ್ಕೆ ಉಡುಗೆರೆ."

"ಅದೂ ನಿಜ ಅನ್ನು, ನಾನು ಹೇಳಿದ ಜಾತಕಫಲ ನಿಜವಾಗಿ ಬಾಡು ತಿನ್ನುವ ಹಾಗಾದದ್ದು ಜ್ಯೋತಿಷಕ್ಕೆ ಉಡುಗೆರೆಯಲ್ಲವೋ?"

೧೯೨೩. ಶ್ರೀಪತಿ.

---

# ಶಾನುಭೋಗನ ಪುಣ್ಯ

" ತಾಯಿ !"

" ಯಾರಪ್ಪ ?"

" ನಾನು ತಾಯಿ ; ಬಾಗಿಲು !"

ಬಾಗಿಲು ತೆಗೆಯಿತು, ಮುಸುಕು ಹಾಕಿಕೊಂಡು ಹೊರಗೆ ನಿಂತಿದ್ದವನೊಬ್ಬನು ಹೆದರಿಕೊಂಡಿದ್ದವನಂತೆ ಆ ಕಡೆ ಈ ಕಡೆ ನೋಡಿ ಒಳಕ್ಕೆ ಹೋಗಿ ಬಾಗಿಲು ಅಗಣಿಯನ್ನು ಹಾಕಿಕೊಂಡನು.

" ಏನಪ್ಪ ಇಷ್ಟು ಹೊತ್ತಿನಲ್ಲಿ ಬಂದೆ ?"

" ಇನ್ನೇನು ಮಾಡೋದು ತಾಯಿ ? ಹಗಲು ಹೊತ್ತು ಸರ್ಕಾರಿ ದಪೇದಾರ್‍ರು ನಿಮ್ಮೂರ್‍ಗೆ ಬಂದು ಬದುಕಬಹುದೇ ?"

" ಮತ್ತೆ ನಾವು ಯಾವಾಗಲೂ ಇಲ್ಲಿಯೇ ಹ್ಯಾಗಿರಬೇಕು?"

" ಅದು ಹ್ಯಾಗಿದ್ದೀರೋ ತಾಯಿ ! ನಿಮ್ಮ ಪುಣ್ಯ ಒಳ್ಳೇದು, ರಾಮಣ್ಣನವರು ಆಗುವ ಹೊತ್ತಿಗೆ ಈ ಶಾನುಭೋಗಿಕೆ ನಡೆಸುತ್ತಾರೆ; ಇಲ್ಲದೆ ಇದ್ದರೆ ಸರ್ಕಾರದವರು ಕೈಮುಗಿದು ಹೊರಟುಹೋಗೋದೇ !"

" ಆದಿರಲಿ ಜವರಪ್ಪ, ಕೈಕಾಲು ತೊಳಕೊ ಏಳು, ಊಟ ಮಾಡುವೆಯಂತೆ, ಆಗಲೆ ಹತ್ತು ಗಂಟೆ ಹೊಡೆದುಹೋಯಿತು."

" ನನಗೆ ಊಟವಾಗಿದೆಕಣವ್ವ, ಶಾನುಭೋಗರನ್ನ ಈಗಲೇ ನೋಡಬೇಕಾಗಿತ್ತಲ್ಲವ್ವ; ಎಲ್ಲಿ ಅವರು ? ಹಳ್ಳೀ ಕಡೆಗೆ ಯಾವಾಗ ಬರೋಣ ಕೇಳಿಕೊಂಡು ಬಾ ಅಂತ ಹೇಳಿ ಕಳುಹಿಸವ್ರೆ ಸಾಹೇಬರು."

" ಯಾವ ಸಾಹೇಬರು ?"

" ಸಬ್ ಡಿವಿಜನ್ ಸಾಹೇಬರು ಡೆಪ್ಟೀಕಮೀಷನ್ ಸಾಹೇಬರು ಇಬ್ಬರೂ...."

" ಇಲ್ಲಿಗೆ ಬಂದಿದಾರೇನು ?"

" ಇಲ್ಲಿಗೆ ಹೇಗೆ ಬಂದಾರು ತಾಯಿ ಶಾನುಭೋಗರಿಗೆ ಹೇಳದೆ ! ದಾರೀಲಿ ತಲೆಗಿಲೆ ಒಡೆಸಿಕೊಳ್ಳೋಕೆ !"

"ಸಾವಿರ ರೂಪಾಯಿ ಸರ್ಕಾರದ ಸಂಬಳ ತಿನ್ನೋರಿಗೇ ಹೀಗಾದ ಮೇಲೆ ನಾವು ಹೆಣ್ಣು ಹೆಂಗಸರು ಚಿಕ್ಕ ಪುಟ್ಟ ಮಕ್ಕಳನ್ನು ಕಟ್ಟಿಕೊಂಡು ಹ್ಯಾಗೆ ಇರುವುದು? ನೋಡಪ್ಪ ಅರ್ಧರಾತ್ರಿಯಾಗಿದೆ, ಇನ್ನೂ ಶಾನುಭೋಗರು ಬಂದಿಲ್ಲ; ಒಂದೊಂದು ದಿನ ಬಂದರೆ ಬಂದರು ಇಲ್ಲದಿದ್ದರೆ ಇಲ್ಲ."

"ಅಷ್ಟಲ್ಲದೆ ಈ ಸಂಸಾರ ನಡೀತದೇನವ್ವಾ, ಆ ಶಾನುಭೋಗರಿಗೆ ತಕ್ಕ ಹೆಂಡತಿಯೇ ಕಣವ್ವ ನೀನೂವೆ, ಏನೂ ಅಡ್ಡಿ ಇಲ್ಲ."

ಲಕ್ಷ್ಮೀದೇವಮ್ಮನಿಗೆ ನಗು ಬಂತು, ಕೂಡಲೇ ಸ್ವಲ್ಪ ಗಂಭೀರವಾಗಿ

"ನಾನೇನು ಮಾಡುತೇನಪ್ಪ! ನಮ್ಮ ನಡೆ ನುಡಿ ಚೆನ್ನಾಗಿಟ್ಟುಕೊಂಡಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತಾನೆ."

೨

ಲಕ್ಷ್ಮೀದೇವಮ್ಮನು ಶಾನುಭೋಗ ರಾಮಣ್ಣನವರ ಹೆಂಡತಿ. ಈಗ ಶಾನುಭೋಗ ರಾಮಣ್ಣನವರು ಯಾರೋ ಯಾರೂ ಅರಿಯರು. ಅವರ ಮನೆತನವು ಈಗ ಸಿಡಿಲುಬಡಿದ ಮರದಂತೆ ಎಲ್ಲಾ ಬೋಳಾಗಿ ಎಲ್ಲೋ ಒಂದು ಕುಡಿ ಅಂಟಿಕೊಂಡಿದೆ. ಆದರೆ ಈಗ್ಗೆ ಸುಮಾರು ಮುವ್ವತ್ತು ನಲವತ್ತು ವರ್ಷಗಳ ಕೆಳಗೆ ನಮ್ಮ ಪ್ರಾಂತದಲ್ಲಿ ಅವರ ಹೆಸರನ್ನು ಕೇಳದಿದ್ದವರೇ ಇರಲಿಲ್ಲ ಸರ್ಕಾರದಲ್ಲಿ ಅವರ ಹೆಸರು ದಿವಾನರವರೆಗೂ ಪರಿಚಯವಾಗಿತ್ತು. ಅಮಲ್ದಾರರೂ ಡೆಪ್ಯುಟಿಕಮಿಷನರೂ ಅವರ ಗ್ರಾಮಕ್ಕೆ ಬರಬೇಕಾದರೆ ಮುಂಚೆ ರಾಮಣ್ಣನವರಿಗೆ ಹೇಳಿಕಳುಹಿಸಿದಲ್ಲದೆ ಬರುತ್ತಿರಲಿಲ್ಲ. ಏಕೆಂದರೆ ಆ ಸುತ್ತೆಲ್ಲಾ ಬಹು ಪುಂಡುಕೊಂಪೆ. ಹಗಲುಹೊತ್ತೇ ದರೋಡೆಗಳು ನಡೆದುಬಿಡುವುವು. ಸರ್ಕಾರದ ನೌಕರರು ವಸೂಲಿ ಹರಾಜು ಜಮಾಬಂದಿ ಮುಂತಾದವುಗಳಿಗೆ ಬರೋಣವೆಂದರೇನು! ಅಂಥ ಕೊಂಪೆಯನ್ನು ರಾಮಣ್ಣನವರು ನಯಭಯಗಳಿಂದ ತಮ್ಮ ಕೈಯಲ್ಲಿಟ್ಟುಕೊಂಡಿದ್ದರು. ಆದ್ದರಿಂದ ಸರ್ಕಾರದ ನೌಕರರು ಆತನನ್ನು ಬೆನ್ನಹಿಂದೆ ಇಟ್ಟುಕೊಳ್ಳದೆ ಅಲ್ಲಿಗೆ ಕಾಲಿಡುತ್ತಿರಲಿಲ್ಲ. ಆತನ ದರ್ಪವೂ ಧಾರಾಳವೂ ಅದಕ್ಕೆ ತಕ್ಕಂತೆಯೇ ಇದ್ದುವು. ಆದರೂ

ಸ್ವಲ್ಪ ಹಿಂದಿನ ವಾಂಛಲ್ಯ ಹೆಚ್ಚು; ಸ್ನಾನ ಆಹ್ನಿಕ ಪೂಜೆಗಳಿಲ್ಲದೆ ಹೊರಕ್ಕೆ ಹೊರಡುತ್ತಿರಲಿಲ್ಲ; ಸ್ನಾನಮಾಡಿ ದೇವರ ಮನೆಗೆ ಹೊರಟು ಹೋದನೆಂದರೆ ಡೆಪ್ಯುಟಿ ಕಮಿಷನರು ಹೇಳಿಕಳುಹಿಸಿದರೂ 'ಸ್ನಾನ ಮಾಡಿದ್ದಾರೆ, ಈಗ ಮಾತನಾಡುವುದಿಲ್ಲ' ಎಂದು ಉತ್ತರ ಬರುತ್ತಿತ್ತು. ಅವರೂ ಇಂಥ ಉತ್ತರಗಳಿಗೆ ಪರಿಚಿತರಾಗಿದ್ದರು. ಮನೆಯೂ ಮನೆಯ ನಡೆವಳಿಕೆಯೂ ಡೆಪ್ಯುಟಿ ಕಮಿಷನರುಗಳನ್ನು ಇಳಿಸಿಕೊಂಡು ಉಪಚಾರ ಮಾಡುವುದಕ್ಕೆ ಯೋಗ್ಯವಾದವುಗಳೇ ಆಗಿದ್ದುವು. ಮನೆಯಲ್ಲಿ ಯಾವಾಗಲೂ ಐವತ್ತು ದನಗಳಿರುತ್ತಿದ್ದುವು. ಈಗಿನ ಕಾಲದಲ್ಲಿ ಆದರೆ ಸಾವಿರ ರೂಪಾಯಿ ಸಂಬಳ ತರುವವನಾದರೂ ಅಷ್ಟು ಕರಾವನ್ನು ಮನೆಯಲ್ಲಿ ಕಾಣನು. ಅದು ಮನೆಯೇ? ಒಂದು ಛತ್ರ! ಹೋಗುವವರು ಬರುವವರು ಲೆಕ್ಕವೇ ಇಲ್ಲ. ಹೋಟೆಲುಗಳಿಲ್ಲದ ಆ ಕಾಲದಲ್ಲಿ ಹೋಟೆಲುಗಳಿಗೆ ಸುರಿಯುವುದಕ್ಕೆ ದುಡ್ಡು ಕೊಡಲಾರದ ಆ ಕಾಲದಲ್ಲಿ, ಹೋಟೆಲುಗಳಿಗೆ ಹೋದರೆ ಪ್ರಾಣಾಂತ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದಿದ್ದ ಆ ಕಾಲದಲ್ಲಿ, ಆ ಸತ್ರವು ಅಲ್ಲಿಗೆ ಒಂದು ಖಾಸಗಿ "ಪೂರ್ಣಯ್ಯನ ಛತ್ರ"ವಾಗಿತ್ತು ಮನೆಯಲ್ಲಿ ಅಡಿಗೆಯವರಾಗಲಿ ಪರಿಚಾರಕರಾಗಲಿ ಇಲ್ಲದಿದ್ದರೂ, ಬೀದಿಯಲ್ಲಿ ಹೋಗುವವರಿಗೆಲ್ಲ ಬೇಯಿಸಿ ಎಳೆಯಬೇಕಲ್ಲಾ ತಮಗೆ ಬಂಗಾರದ ಡಾಬೂ ವಜ್ರದ ಓಲೆಯೂ ಇಲ್ಲವಲ್ಲಾ ಎಂದು ಹೆಂಗಸರು ಸಂಕಟಪಡುತ್ತಿರಲಿಲ್ಲ. "ಸಾಸವೆ ಬಣ್ಣದ" ಸೀರೆ ಹೊರತು ಕುತ್ತಾಲದ ಸೀರೆಯನ್ನೂ ಅವರು ಕಂಡು ಅರಿಯರು. "ಈ ದೇಹವಿರುವುದು ಯಾಕೆ? ಗಂಧದ ಕೊರಡನ್ನು ತೆಯ್ದಂತೆ ತೆಯ್ದು ಸವೆಸುವುದಕ್ಕೆ ತಾನೆ?" ಎಂದು ಕೇಳುವರು ಒಂದು ದಿನವೂ ಒಬ್ಬರಾದರೂ ಮನೆಯಲ್ಲಾಗಲಿ ಹೊರಗಾಗಲಿ ಸಿಡುಕಿನಿಂದ ಮಾತನಾಡಿದುದಿಲ್ಲ, ಮನೆಯ ಯಜಮಾನಿಯು ಗೃಹಲಕ್ಷ್ಮಿಯಂತಿದ್ದಳು. ಆಕೆಯನ್ನು ಕಣ್ಣಾರ ಕಂಡಿದ್ದ ಮುದುಕರು ಒಬ್ಬಿಬ್ಬರು ಈಗಲೂ ಇದ್ದಾರೆ ಅವರು ಆಕೆಯನ್ನು ವರ್ಣಿಸುವ ಕ್ರಮವನ್ನು ನೋಡಿದರೆ ಈಗಿನ ಸ್ತ್ರೀವಿದ್ಯಾಭ್ಯಾಸವೂ ಅದರ ಪ್ರೋತ್ಸಾಹಕ್ಕಾಗಿ ಸ್ಕಾಲರ್‌ಷಿಪ್‌ಗಳೂ ಗಾಡಿಗಳೂ ಆಳುಕಾಳುಗಳೂ ಆಟಪಾಟಗಳೂ

ವೀಣೆ ಹಾರ್ಮೋನಿಯಂಗಳೂ ಬಿಂಕ ಬಿನ್ನಾಣಗಳೂ ಯಾಕೆ ಬರು ತ್ತಿವೆಯೋ ಎಂದು ಒಂದು ವಿಧವಾದ ಅಸಹ್ಯ-ಹೌದು, ಅಸಹ್ಯವೇ!- ಉಂಟಾಗುತ್ತದೆ. ಆಕೆಯು ಒಳ್ಳೆಯ ಲಕ್ಷಣವಂತೆ, ಅಗಲವಾದ ದುಂಡು ಮುಖ, ವಿಶಾಲವಾದ ಹಣೆ; ಹಣೆಯಲ್ಲಿ ಅಡ್ಡ ಕುಂಕುಮ ವಲ್ಲದೆ ಒಂದು ಸಲವಾದರೂ ಬೊಟ್ಟನ್ನು ಇಟ್ಟುಕೊಂಡಿದ್ದಾಗಲಿ ಬರಿಯ ಹಣೆಯಲ್ಲಿ ಇದ್ದದ್ದಾಗಲಿ ಇಲ್ಲವೇ ಇಲ್ಲ. ಕೆನ್ನೆ ಕೈಕಾಲುಗಳಲ್ಲಿ ಯಾವಾಗಲೂ ಹಚ್ಚಗೆ ಅರಿಸಿನ. ಕಿವಿಯಲ್ಲಿ ತಪ್ಪಲೆಯೋಲೆ; ಅವು ಗಳನ್ನು ಎತ್ತಿ ಕಟ್ಟಿರುವ ಮೂರೆಳೆಯ ಹಳೆಯಕಾಲದ ಸರಪಣಿ; ಇದು ಮತ್ತು ಮಾಂಗಲ್ಯ ಇವಿಷ್ಟೇ ಮೈಮೇಲಿದ್ದ ಚಿನ್ನ ನೋಡುವುದಕ್ಕೆ ಬಹು ಸೌಮ್ಯ ಮೂರ್ತಿ, ಮಾತನಾಡುವುದು ಬಹು ನಿಧಾನ; ಈಗಿನ ಗಡಿಬಿಡಿಯ ಅವಾಂತರದ ಕಾಲದಲ್ಲಿ ಯಾರಾದರೂ ಅಷ್ಟು ನಿಧಾನವಾಗಿ ಮಾತನಾಡಿದ್ದನ್ನು ನಾವು ಕೇಳಿದಗೆ "ಇದೇನು ನೀಲಾಂಬರೀ ರಾಗ ಎಳೆಯುತಾರಪ್ಪ!" ಎಂದುಕೊಳ್ಳುವೆವು. ಮನೆ ತುಂಬ ಮಕ್ಕಳು; ಆದರೂ ಮಕ್ಕಳ ಅವಾಂತರವಿಲ್ಲ; ಅವರು ಪರಸ್ಪರ ಜಗಳವಾಡಿಯರಿ ಯರು; ಗಟ್ಟಿಯಾಗಿ ಮಾತನಾಡಿಯರಿಯರು. ಸೊಸೆಯರೂ ಹೆಣ್ಣು ಮಕ್ಕಳೂ ಹಾಗೆಯೇ—ಆಕೆಯ ಪ್ರತಿಬಿಂಬದಂತಿದ್ದರು. ಶರತ್ಕಾಲದ ಬೆಳದಿಂಗಳಲ್ಲಿ ತಳತಳನೆ ಹೊಳೆಯುತ್ತ ಶಾಂತವಾಗಿ ಪ್ರವಹಿಸುವ ನದಿಯಂತೆ ಆ ಸಂಸಾರವು ನಡೆಯುತ್ತಿತ್ತು.

ಮನೆಯಲ್ಲಿ ಪ್ರತಿದಿನವೂ ಒಂದು ಹಬ್ಬದಂತಿರುವುದು, ತೃಪ್ತ ರಾದ ಜನರು, ಬೇಕಾದಷ್ಟು ಅತಿಥಿ ಅಭ್ಯಾಗತರು; ಸಂತೋಷವಾಗಿ ರುವ ಹುಡುಗರು ಮಕ್ಕಳು; ಹಾಲುತುಪ್ಪಗಳ ಸೂರೆ. ಇದಕ್ಕಿಂತ ಹಬ್ಬ ಬೇಕೆ? ಸಾಲಸೂಲಗಳನ್ನು ಮಾಡಿ ಮನಸ್ಸಿಲ್ಲದಿದ್ದರೂ ತುಪ್ಪ ಸಕ್ಕರೆ ಬೆಲ್ಲಗಳನ್ನು ಕೊಂಡುತಂದು ಖರ್ಚುಮಾಡಿ ಹೊತ್ತು ಮೀರಿ ಮಿತಿಮೀರಿ ತಿಂದು ಸಂಕಟ ಪಡುವುದು ಹಬ್ಬವೇ? ಅದಿರಲಿ; ರಾಮಣ್ಣ ನವರ ಮನೆಯಲ್ಲಿ ನಿತ್ಯವೂ ಒಂದೊಂದು ಹಬ್ಬದಂತೆ ವಿಜೃಂಭಣೆ ನಡೆ ಯುತ್ತಿದ್ದರೆ ಹಬ್ಬದ ದಿನಗಳಲ್ಲಿ ಕೇಳಬೇಕೆ? ಆದರೆ ಅವರಲ್ಲಿ ದೀಪಾ ವಳಿ ಹಬ್ಬ ಮಾಡುವ ಪದ್ಧತಿಯಿಲ್ಲ; ಏಕೆಂದರೆ ಇದೇ ಮನೆತನದಲ್ಲಿಯೇ

ಹಿಂದೆ ಶಾನುಭೋಗರಾಗಿದ್ದವರು ಒಬ್ಬರು ಯಾವುದೋ ಒಂದು ಹಳ್ಳಿ ಯಿಂದ ಬರುತ್ತಾ ದಾರಿಯಲ್ಲಿ ಕೆಲವು ಪುಂಡರ ಕೈಗೆ ಸಿಕ್ಕಿ ಆ ದಿವಸ ತಲೆ ಒಡೆಸಿಕೊಂಡು ಸತ್ತರಂತೆ, ಅಂದಿನಿಂದ ದೀವಳಿಗೆ ಹಬ್ಬದ ದಿವಸ ಮನೆಯಲ್ಲಿ ಎಳ್ಳು ಹಬ್ಬಕ್ಕೆ ಆರಂಭವಾಯಿತು. ಹೀಗೆ ಒಂದು ಸಲ ನಿಂತುಹೋದ ಹಬ್ಬವು ಉದ್ದಕ್ಕೂ ನಿಂತೇ ಹೋಯಿತು. ಈಗಲೂ ಅದೇ ಮನೆತನ, ಅದೇ ಶಾನುಭೋಗತನ, ಅದೇ ಪುಂಡುಕೊಂಪೆ; ಅಂಥಾದ್ದೇ ಒಂದು ಕೊಲೆಯೂ ಹಬ್ಬದ ದಿವಸ ಆಗಬೇಕಾಗಿತ್ತು; ಆದರೆ ಲಕ್ಷ್ಮೀದೇವಮ್ಮನ ಮಾಹಾತ್ಮ್ಯೆಯಿಂದ ಅದು ನಿವಾರಣೆಯಾಯಿತು. ಈಗ ಅಂಥ ಹೆಂಗಸರನ್ನೂ ಕಾಣೆ, ಅಂಥ ಶಾನುಭೋಗರನ್ನೂ ಕಾಣೆ; ಶಾನುಭೋಗರ ಮಾತಿರಲಿ, ಆಕೆಯು ತನ್ನ ಗಂಡನ ಪ್ರಾಣವನ್ನು ಕಾಪಾಡಿದ ಸಂಗತಿಯನ್ನು ಇಲ್ಲಿ ತಿಳಿಸುತ್ತೇನೆ, ಅದನ್ನು ಆಕೆಯ ಮಾಹಾತ್ಮ್ಯೆಯೆಂದು ಬೇಕಾದರೂ ಎನ್ನಿ, ಬುದ್ಧಿವಂತಿಕೆಯೆಂದು ಬೇಕಾದರೂ ಎನ್ನಿ, ಸದ್ಗುಣವೆಂದು ಬೇಕಾದರೂ ಎನ್ನಿ.

೩

ಪುಷ್ಯಶುದ್ಧ ಹುಣ್ಣಿಮೆ, ಆ ದಿವಸ ಬನಶಂಕರಿಯ ಪೂಜೆ ಮಾಡು ವುದು ಈಗಲೂ ಅನೇಕರಲ್ಲಿ ಆಚರಣೆಯಲ್ಲಿದೆ ಆ ಪೂಜೆಯನ್ನು ರಾಮಣ್ಣನವರ ಮನೆಯಲ್ಲಿ ಬಹು ಕಟ್ಟುನಿಟ್ಟಿನಿಂದ ನಡೆಸುತ್ತಿದ್ದರು. ಬನಶಂಕರಿಯು ಅವರ ಮನೆದೇವತೆ, ಆಕೆಯು ಅವರ ಮನೆಯಲ್ಲಿ ಸಶರೀರಳಾಗಿ ಓಡಿಯಾಡುತ್ತಿದ್ದಳಂತೆ. ಇದನ್ನೆಲ್ಲಾ ನಮ್ಮ ತಾಯಿ ಒಂದು ದಿನ ಹೇಳಿದರು. ನಾನು, "ದೇವತೆಯೆಲ್ಲಾದರೂ ಮನುಷ್ಯರ ಹಾಗೆ ಓಡಾಡುವದುಂಟೆ? ಎಲ್ಲಾ ಕಥೆ! ಇಲ್ಲ, ಯಾರನ್ನು ನೋಡಿ ಹೀಗೆ ಹೇಳಿದರೋ!!" ಎಂದೆ. ಅದಕ್ಕೆ ನಮ್ಮ ತಾಯಿಯು "ಇಲ್ಲ ಮಗೂ, ನಿಜವಾಗಿಯೂ ಓಡಿಯಾಡುತ್ತಿದ್ದಳಂತೆ!" ಎಂದರು.

"ನೀನು ನೋಡಿದ್ದೆಯೋ?"

"ನಾನು ನೋಡಿರಲಿಲ್ಲಪ್ಪ!"

"ಸರಿ ಮತ್ತೆ, ದೇವರುಗಳು ಪಿಶಾಚಿಗಳು ಇವೆಲ್ಲಾ ನೋಡಿ ದವರೊಬ್ಬರನ್ನೂ ಕಾಣೆ; ಅವರು ನೋಡಿದರು ಇವರು ನೋಡಿದರು

ಎಂದು ಎಲ್ಲರೂ ಹೇಳುವವರೇ ಹೊರತು ' ನಾನು ನೋಡಿದೆ ' ಎಂದು ಹೇಳುವವರು ಒಬ್ಬರೂ ಇಲ್ಲ."

" ಹಾಗಾದರೆ ನಮ್ಮ ಅಜ್ಜಿ ನೋಡಿದ್ದದ್ದು ಸುಳ್ಳೇನೋ ? ನಾನು ಕಂಡ ಹಾಗೇ ಮನೆಗೆ ಬೆಂಕಿಬಿದ್ದು ಎಲ್ಲಾ ಸುಟ್ಟು ಹೋಗುವವರೆಗೂ ದೇವರ ಸಂಪುಟದಲ್ಲಿ ಅಮ್ಮನವರ ಸೀರೆಯ ಸೆರಗನ್ನು ಇಟ್ಟು ಪೂಜೆ ಮಾಡುತಿದ್ದದ್ದೂ ಸುಳ್ಳೇ ? "

ಅದೊಂದು ನಣ್ಣ ಉಪಕಥೆ; ಒಂದು ದಿನ ಅವರ ಅಜ್ಜಿಯು ಹುಡುಗರಿಗೆಲ್ಲಾ ಬೆಳಗ್ಗೆ ಅನ್ನ ಬಡಿಸಿ ಸಾರುಹಾಕಿ ಅವರು ಅದನ್ನು ಊಟಮಾಡುವವರೊಳಗಾಗಿ ನೀರು ತೆಗೆದುಕೊಂಡು ಬರುತ್ತೇನೆಂತ ಕೊಡವನ್ನು ಕೊಂಕಳಿಗೆ ಹಾಕಿಕೊಂಡು ಬಾವಿಗೆ ಹೋದರಂತೆ; ಅಲ್ಲಿ ಯಾರ ಕೈಯಲ್ಲೋ ಮಾತಿಗೆ ನಿಂತು, ಬರುವುದು ಸ್ವಲ್ಪ ಹೊತ್ತಾಯಿ ತಂತೆ; ಇಷ್ಟು ಹೊತ್ತಿಗೆ ಮಕ್ಕಳು ಊಟಮಾಡಿ " ಅಮ್ಮಾ ಮಜ್ಜಿಗೆ! ಅಮ್ಮಾ ಮಜ್ಜಿಗೆ!! ಎಂದು ಕೂಗಿಕೊಳ್ಳುವುದಕ್ಕೆ ಹಿಡಿದರಂತೆ. ಆಗ ಆಕೆಯು ಹಾಗೇ ಇದ್ದ ಒಬ್ಬ ಹೆಂಗಸು ಮನೆಯಲ್ಲಿ ಬನಶಂಕರೀ ಹಬ್ಬ ಕ್ಕೆಂದು ಮೀಸಲುಮಾಡಿಟ್ಟಿದ್ದ ಹಾಲು ಮೊಸರನ್ನೆಲ್ಲಾ ತೆಗೆದುಕೊಂಡು ಬಂದು ಕೇಳಿದಷ್ಟು ಬಡಿಸುತ್ತಿದ್ದಳಂತೆ, ಎಲೆಯಲ್ಲಿ ಹಾಲು ಮೊಸರು ಕೋಡಿ ಹರಿಯುತ್ತಿತ್ತಂತೆ, ಹುಡುಗರು ಇನ್ನಷ್ಟು ಇನ್ನಷ್ಟು ನನ್ನ ಕೈಗೆ ಅಷ್ಟು ತನ್ನ ಕೈಗೆ ಅಷ್ಟು ಎಂದು ಹೇಳಿ ಸುರಿದುಕೊಳ್ಳುತ್ತಿದ್ದ ರಂತೆ, ಅಷ್ಟು ಹೊತ್ತಿಗೆ ಅವರ ಅಜ್ಜಿ ಬಂದು ನೋಡಿ " ಯಾರದು ! " ಎಂದು ಕೂಗಲು, ಬಡಿಸುತ್ತಿದ್ದಾಕೆಯು ದೇವರ ಮನೆಗೆ ಹೋಗಿ ಬಾಗಿಲ ಹಿಂದೆ ಅವಿತು ಕೊಂಡಳಂತೆ, ಮನೆಯ ಯಜಮಾನಿಯು ಓಡಿಹೋಗಿ ಬಾಗಿಲ ಹಿಂದಿನಿಂದ ಸರಿಗೆಯ ಸೆರಗು ಕಾಣುತ್ತಿರಲು ಅದನ್ನು ಹಿಡಿದು ಎಳೆದು ಕೊಂಡಳಂತೆ, ಅದಷ್ಟೇ ಹರಿದು ಕೈಗೆ ಬಂದು ಬಿಟ್ಟಿತಂತೆ, ಬಾಗಿಲು ತೆಗೆದು ನೋಡಲು ಹಿಂದೆ ಯಾರೂ ಇರಲಿಲ್ಲ ವಂತೆ; ಅವತ್ತಿನ ರಾತ್ರಿ ಬನಶಂಕರೀ ದೇವಿಯೇ ಅವರ ಕನಸಿನಲ್ಲಿ ಬಂದು, ತಾನೇ ಆ ಕೆಲಸ ಮಾಡಿದಳೆಂತಲೂ, ಮಕ್ಕಳು ಗಂಟಲು ಒಣ ಗುವಂತೆ ಕೂಗುತ್ತಿದ್ದದ್ದನ್ನು ಕೇಳಿ ಸುಮ್ಮನೆ ಇರಲಾರದೆ ಆ ಕೆಲಸ

ಮಾಡಿದಳೆಂತಲೂ, ಮಿಕ್ಕ ಹಾಲು ಮೊಸರುಗಳನ್ನೇ ಹಬ್ಬದಲ್ಲಿ ಉಪ ಯೋಗಿಸಬಹುದೆಂದೂ ಧೈರ್ಯ ಹೇಳಿದಳಂತೆ. ಅಲ್ಲಿಂದಾಚೆಗೆ ಅವರ ಮನೆಯಲ್ಲಿ ಆ ಸೆರಗನ್ನು ದೇವರ ಸಂಪುಟದಲ್ಲಿ ಇಟ್ಟು ಪೂಜೆ ಮಾಡು ತ್ತಿದ್ದರಂತೆ . ಈಚೆಗೆ ಮನೆಮನೆಗೇ ಬೆಂಕಿಬಿದ್ದು ಎಲ್ಲಾ ಸುಟ್ಟುಹೋಯಿ ತಂತೆ.

"ದೇವರೇ ಓಡಾಡುವ ಮನೆ ಯಾಕೆ ಸುಟ್ಟುಹೋಯಿತು ಮತ್ತೆ?" ಎಂದು ನಾನು ಕೇಳಿದೆ.

" ಶ್ವಪಚರು, ಮಗು ! ಶ್ವಪಚರು ; ಮಡಿಯಿಲ್ಲ, ಮೈಲಿಗೆ ಇಲ್ಲ ; ದಾನವಿಲ್ಲ, ಧರ್ಮವಿಲ್ಲ ; ನಿಮ್ಮ ಮಾವ ಇದಾನೆ ನೋಡು, ಅವನ ಮುಖ ನೋಡಬಹುದೇ ? ಕೈಬಿಟ್ಟು ಕೊಟ್ಟರೆ ಬರುತ್ತೋ ಕೂಡಿಟ್ಟರೆ ಬರುತ್ತೋ ಮಗು ? ಬರುವದು ಹ್ಯಾಗೋ ಹೋಗುವುದೂ ಹಾಗೇ ! ಮೂರು ಹೊತ್ತೂ ತಾರಾತಂಟಲು, ತಗರು ಬುಗರು, ಸುಳ್ಳು, ತಟವಟ, ಜೂಜು, ದುರ್ಮಾರ್ಗತನ, ಮನೆಹಾಳುತನ ಇವೆಲ್ಲಾ ಕಲಿತುಕೊಂಡರೆ ದೇವರು ಹ್ಯಾಗಿರುತಾನೋ ಮನೇಲಿ ? "

" ಮತ್ತೆ ದೇವರಲ್ಲಿ ಅಷ್ಟು ಮಹತ್ವವಿದ್ದರೆ, ಇದನ್ನೆಲ್ಲಾ ಮಾಡದ ಹಾಗೆ ಬುದ್ಧಿ ಕೊಡಬೇಕು "

" ನೀವೆಲ್ಲಾ ಇಂಗ್ಲಿಷ್ ಓದಿದ ಹುಡುಗರಪ್ಪ ! ನಿಮಗೆ ನಾನು ಜವಾಬು ಕೊಡುವುದಕ್ಕಾಗುವುದಿಲ್ಲ."

೪

ಉಪಕಥೆ ಸ್ವಲ್ಪ ದೊಡ್ಡದಾಯಿತು ಬನಶಂಕರಿ ಹಬ್ಬದ ಪ್ರಸ್ತಾಪ ಬಂದದ್ದರಿಂದಲೂ ಲಕ್ಷ್ಮೀದೇವಮ್ಮನಲ್ಲಿ ಬನಶಂಕರಿಯು ಅಂಶ ವಿತ್ತೆಂದು ಈಗಲೂ ಆಕೆಯ ಹೆಸರಿನಲ್ಲಿ ನಮ್ಮ ಬಂಧು ಬಳಗದವರ ಮನೆಯಲ್ಲೆಲ್ಲಾ ಆಕೆಯು ಹುಟ್ಟಿದ ದಿವಸ ಪೂಜ್ಯವನ್ನು ಮಾಡುವುದ ರಿಂದಲೂ ಈ ವಿಚಾರವನ್ನು ಸಂದರ್ಭ ಬಂದಾಗ ಸ್ವಲ್ಪ ವಿಸ್ತಾರವಾಗಿ ಹೇಳಬೇಕಾಯಿತು.

ಪುಷ್ಯ ಶುದ್ಧ ಹುಣ್ಣಿಮೆ ; ಬನಶಂಕರಿಯ ಹಬ್ಬ ; ಮನೆಯಲ್ಲಿ ಬೇಕಾದಷ್ಟು ಸಂಭ್ರಮ ; ಒಳ್ಳೆಯ ಮಧ್ಯಾಹ್ನ ಹನ್ನೆರಡು ಗಂಟೆ

ಹೊತ್ತು ; ಲಕ್ಷ್ಮೀದೇವಮ್ಮನು ಒಳಗೆ ಅಡಿಗೆ ಮಾಡುತ್ತಿದ್ದಾಳೆ. ದೇವರ ಕೋಣೆಯಲ್ಲಿ ಸಹಸ್ರನಾಮ ಪೂಜೆಯಾಗುತ್ತಿದೆ. ಹುಡುಗರೆಲ್ಲಾ ಸಾಲಾಗಿ ಕೈಕಟ್ಟಿಕೊಂಡು ಪೂಜೆಯನ್ನು ನೋಡುತ್ತ ಕುಳಿತಿದ್ದಾರೆ. ಆಗ ಹತ್ತು ಹದಿನೈದು ಜನ ರೈತರು ಆ ಮನೆಯ ಕಡೆಗೆ ಬಹು ಕ್ಷುಭಿತರಾಗಿ ದುಡುದುಡನೆ ಬರುತ್ತಿದ್ದರು. ಅದನ್ನು ಅಡಿಗೆಯಮನೆ ಯಲ್ಲಿದ್ದ ಲಕ್ಷ್ಮೀದೇವಮ್ಮನು ಕಿಟಕಿಯಿಂದ ನೋಡಿ ಸ್ವಲ್ಪಗಾಬರಿ ಪಟ್ಟಳು. ಕೂಡಲೆ ಯಾರಿಗೂ ಏನೂ ಹೇಳದೆ ಕೆಂಪಗೆ ಶುಭ್ರ ವಾಗಿ ಬೆಳಗಿದ ಒಂದು ಕೊಡವನ್ನು ಕಂಕುಳಲ್ಲಿ ಇಟ್ಟುಕೊಂಡು ಇನ್ನೊಂದು ಕೈಯಲ್ಲಿ ಎರಡು ಚೆಂಬುಗಳನ್ನು ಹಿಡಿದುಕೊಂಡು ನೀರಿಗೆ ಹೋಗುವವಳಂತೆ ಹೊರಟಳು. ಅದನ್ನು ನೋಡಿ ಆಕೆಯ ಅತ್ತಿಗೆಯು "ಇದ್ಯಾಕೆ ಅತ್ತಿಗೆ ಈಗ ನೀರಿಗೆ ಹೊರಟೆ! ನೀರು ಇನ್ನೂ ಈ ಹಂಡೆಯ ತುಂಬ ಇದೆಯಲ್ಲ, ಊಟ ಮಾಡಿಕೊಂಡು ಹೋಗಿ ಎಲ್ಲರೂ ಒಂದೊಂದು ದಾರಿ ತಂದರಾಯಿತು ; ಮಂಗಳಾರತಿಯಾಗುವ ಹೊತ್ತು, ಈಗ ಎಲ್ಲಿಗೆ ಹೋಗುತೀಯೆ" ಎಂದಳು. ಲಕ್ಷ್ಮೀದೇವಮ್ಮನು ಯಾವ ಮಾತನ್ನೂ ಆಡದೆ ಪಾತ್ರೆಗಳನ್ನು ತೆಗೆದುಕೊಂಡು ಬಾಗಿಲಿಗೆ ಬಂದಳು. ಅಷ್ಟು ಹೊತ್ತಿಗೆ ಸರಿಯಾಗಿ ರೈತರು ಬಾಗಿಲಿಗೆ ಬಂದು ಒಳಗೆ ನುಗ್ಗುವವರಲ್ಲಿದ್ದು ಆಕೆಯನ್ನು ಕಂಡು ತಟ್ಟನೆ ನಿಂತರು. ಅವರು ಬಂದ ರಭಸದಲ್ಲಿ ಮತ್ತಾರಾದರೂ ಬಾಗಿಲಲ್ಲಿ ನಿಂತಿದ್ದರೆ ಅವರನ್ನು ತಳ್ಳಿಕೊಂಡು ಒಳಕ್ಕೆ ನುಗ್ಗಬೇಕು ಆದರೆ ಆಕೆಯ ಮುಖವನ್ನು ನೋಡಿದ ಕೂಡಲೆ ಅವರೆಲ್ಲರೂ ಅರ್ಧ ತಣ್ಣಗಾಗಿ ಹೋದರು. ಯಾರಿಗೂ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವರಲ್ಲಿ ಒಬ್ಬನು "ಶಾನುಭೋಗರೆಲ್ಲಮ್ಮ?" ಎಂದು ಕೇಳಿದನು. ಆಕೆಯು ಎಲ್ಲವನ್ನೂ ಮೊದಲೇ ಊಹಿಸಿಕೊಂಡಿದ್ದವಳು ಬಾಗಿಲಲ್ಲಿಯೇ ನಿಂತುಕೊಂಡು "ಇನ್ನೂ ಮನೆಗೆ ಬಂದಿಲ್ಲಪ್ಪ, ಬರ್ತಾರೆ, ಬನ್ನಿ ಒಳಗೆ ; ಏನಾಗಬೇಕು ? ಪಾಪ! ಒಳ್ಳೆಯ ಬಿಸಿಲಲ್ಲಿ ಬಂದರಲ್ಲಪ್ಪಾ, ಬನ್ನಿ ಒಳಗೆ, ದಿವಾನಖಾನೆಯೊಳಗೆ ಕೂತುಕೊಳ್ಳಿ ; ನೀರಿಗೆ ಹೋಗೋಣ ಅಂತ ಇದ್ದೆ, ಅದಿರಲಿ," ಎಂದು ಪಾತ್ರೆಗಳನ್ನು

ಅಲ್ಲಿಯೇ ಇಟ್ಟು ದಿವಾನಖಾನೆಯೊಳಕ್ಕೆ ಹೋಗಿ ಒಂದೆರಡು ಮಂದಲಿಗೆಗಳನ್ನು ಹಾಸಿ "ಬನ್ನಿ ಗೌಡರೇ ಕೂತುಕೊಳ್ಳಿ" ಎಂದಳು. ಇಷ್ಟು ಹೊತ್ತೂ ಸೆಡೆತು ನಿಂತುಕೊಂಡಿದ್ದವರು ಈಗ ಹಿಂದು ಮುಂದು ನೋಡುತ್ತ ಒಬ್ಬರ ಮುಖವನ್ನು ಒಬ್ಬರು ನೋಡುತ್ತ ಒಬ್ಬೊಬ್ಬರಾಗಿ ಒಳಗೆ ಬಂದು ಕುಳಿತುಕೊಂಡರು.

ಲಕ್ಷ್ಮೀದೇವಮ್ಮ—"ಏನು ಪಟೇಲರೇ, ನಿಮ್ಮ ಮನೆಯಲ್ಲಿ ಮಕ್ಕಳುಮರಿ ಎಲ್ಲಾ ಚೆನ್ನಾಗಿದ್ದಾರೆಯೇ?—"

ಉತ್ತರವಿಲ್ಲ; ತಿರುಗಿ

"ಪಾಪ, ಬಹಳ ಆಯಾಸ ಪಟ್ಟಿರುವ ಹಾಗಿದೆ; ಬೀಸಣಿಗೆ ತಂದುಕೊಡುತ್ತೇನೆ."

ಹೀಗೆಂದು ಹೇಳಿ ಲಕ್ಷ್ಮೀದೇವಮ್ಮನು ಒಳಕ್ಕೆ ಹೋಗಿ ಕೂಡಲೆ ಒಂದು ತಟ್ಟೆಯೊಳಗೆ ಒಂದು ಸೇರಿನಷ್ಟು ಹುರಿಗಾಳು ಒಂದು ಚಿಪ್ಪು ಬಾಳೆಯ ಹಣ್ಣು ಹತ್ತು ಹದಿನೈದು ಹೋಳಿಗೆ, ಒಂದು ಚಂಬು ನೀರು ಎರಡು ಬೀಸಣಿಗೆ ಇವುಗಳನ್ನು ಅವರ ಮುಂದೆ ತಂದಿಟ್ಟು ಬಾಗಿಲಿನ ಹತ್ತಿರವೇ ಕುಳಿತುಕೊಂಡಳು.

"ಸ್ವಲ್ಪ ಫಲಾಹಾರ ಮಾಡುತ ಇರಿ; ಯಜಮಾನರು ಬಂದ ಕೂಡಲೆ ತಿಳಿಸುತ್ತೇನೆ. ಪಾಪ ಏನು ಕೆಲಸವಾಗಿ ಬಂದಿರೋ ಏನೋ?" ಹೀಗೆಂದು ಹೇಳಿ ಪುನಃ ಒಬ್ಬೊಬ್ಬರನ್ನಾಗಿ ಹೆಸರುಹಿಡಿದು ಅವರ ಮನೆ ಬಾಗಿಲು ಹೆಂಡತಿ ಮಕ್ಕಳು ಮಳೆ ಬೆಳೆ ಇವುಗಳ ವಿಚಾರಗಳನ್ನೆಲ್ಲಾ ಕೇಳುವುದಕ್ಕೆ ಮೊದಲು ಮಾಡಿದಳು. ಆಕೆಯ ಸೌಮ್ಯವಾದ ಮಾತುಗಳನ್ನು ಕೇಳುತ್ತಾ ಕೇಳುತ್ತಾ ಒಬ್ಬೊಬ್ಬರಾಗಿ ತಟ್ಟೆಗೆ ಕೈಚಾಚಿ ಅದನ್ನು ಬರಿದು ಮಾಡುತ್ತ ಬಂದರು; ಅದು ಮುಗಿದ ಕೂಡಲೆ ಆಕೆಯು "ಇಲ್ಲದಿದ್ದರೆ, ಯಜಮಾನರು ಬರುವ ಹೊತ್ತಿಗೆ ನೀವೆಲ್ಲರೂ ಊಟಮಾಡಿಬಿಡಿ; ಪಾಪ! ಹಸಿದುಕೊಂಡು ಯಾಕೆ ಕಾದುಕೊಂಡಿರಬೇಕು?" ಎಂದು ಹೇಳಿ, ಬೇಕು ಬೇಡ ಎಂದು ಹೇಳುವಷ್ಟರೊಳಗಾಗಿ ಸೊಗಸಾದ ದೊಡ್ಡ ದೊಡ್ಡ ಬಾಳೆಯ ಎಲೆಗಳನ್ನು ತಂದು ಹಾಕಿಯೇ ಬಿಟ್ಟಳು. ಒಳಗೆ ಹಬ್ಬಕ್ಕೆಂದು ಮಾಡಿದ್ದ ಅಡಿಗೆಗಳೆಲ್ಲಾ

ಒಂದೊಂದಾಗಿ ಅವರ ಎಡೆಗೆ ಬಂದುವು. ತಾನೇ ಸ್ವಂತವಾಗಿ ನಿಂತು ಸ್ವಲ್ಪವೂ ಕಳವಳ ತೋರಿಸದೆ ಶಾಂತಳಾಗಿ ಉಪಚಾರದ ಮಾತನಾಡುತ್ತ ಭಕ್ಷ್ಯಭೋಜ್ಯಗಳನ್ನೆಲ್ಲಾ ತಂದು ಬಡಿಸಿದಳು. ಸಂಕೋಚಪಡುತ್ತಾ ಕೈಹಾಕಿ ಅವರೆಲ್ಲರೂ ಊಟಕ್ಕೆ ಕುಳಿತರು; ಅದಕ್ಕೆ ಮುಂಚೆ ಒಬ್ಬನು "ಏನಮ್ಮ ಇವತ್ತು ಬಂದಹುಣ್ಣಿಮೆ; ಶಾನುಭೋಗರು ಇಳಿಪೊತ್ತಾದರೂ ಇನ್ನೂ ಬಂದಿಲ್ವಾ?'' ಎಂದು ಕೇಳಿದನು. ಆಕೆಯು ಅದಕ್ಕೆ ಉತ್ತರ ಕೊಡದೆ, ಅದು ತನ್ನ ಕಿವಿಗೇ ಬೀಳದಂತೆ ಬಡಿಸುತ್ತಿದ್ದಳು. ಅವನೂ ಪುನಃ ಆ ಮಾತನ್ನೆತ್ತಲಿಲ್ಲ.

ಈ ಮಧ್ಯೆ ಈ ಸಂಗತಿಗಳ ಸುಳಿವೆಲ್ಲಾ ಒಳಗೆ ಗೊತ್ತಾಗಿ ಪೂಜೆ ಊಟಗಳೆಲ್ಲವೂ ಸದ್ದಿಲ್ಲದೆ ನಡೆದು ಹೋದುವು. ರಾಮಣ್ಣನು ಹಿಂದಿನ ಮನೆಯ ಕೊಟಡಿಯಲ್ಲಿ ಅವಿತುಕೊಂಡನು. ಹೊರಗೂ ಊಟವಾಯಿತು. ಎಲೆಯಡಿಕೆ ಹೊಗೆಸೊಪ್ಪು ಎಲ್ಲವನ್ನೂ ಅಗಿದದ್ದಾಯಿತು. ಗಂಟು ಹಾಕಿಕೊಂಡಿದ್ದ ಮುಖಗಳೆಲ್ಲವೂ ನಗುಮುಖಗಳಾದುವು; ಧಾರಾಳವಾದ ಮಾತಿಗೆ ಆರಂಭವಾಯಿತು. ಆಮೇಲೆ ಒಬ್ಬೊಬ್ಬರಾಗಿ ಎದ್ದು ಹೊರಟು ಬಂದು ಹೊರಗೆ ನಿಂತು ಮುಚ್ಚಿಟ್ಟುಕೊಂಡಿದ್ದ ಮಚ್ಚುಗಳನ್ನು ಹೊರಕ್ಕೆ ತೆಗೆದು ತೋರಿಸಿ "ಅಮ್ಮ, ಇವತ್ತು ನಿನ್ನ ಗಂಡನ್ನ ಬದುಕಿಸಿಕೊಂಡೆ; ಹೋಗು, ನಿನ್ನ ತಾಳೀ ಪುಣ್ಯ ಚೆನ್ನಾಗಿತ್ತು. ಹಾಲು ತುಪ್ಪ ಇಟ್ಟು ನಮ್ಮನ್ನು ಕೊಂದೆ'' ಎಂದರು.

ಲಕ್ಷ್ಮೀದೇವಮ್ಮನು ಮೊದಲೇ ಇಂಥ ಅನಾಹುತವನ್ನು ಊಹಿಸಿಕೊಂಡಿದ್ದಳಾದ್ದರಿಂದ ಅವರ ಮಾತು ಆಕೆಗೆ ಅಷ್ಟೇನೂ ಆಶ್ಚರ್ಯವನ್ನು ಉಂಟುಮಾಡಲಿಲ್ಲ. ಅನಂತರ

"ಏನೋಪ್ಪ, ಸರ್ಕಾರದ ನೌಕರಿಯೇ ಕೆಟ್ಟದು; ಹಿಂದೆ ಕೆರೆ ಮುಂದೆ ಬಾವಿ; ನಿಮ್ಮ ಕಡೆ ಸೇರಿದರೆ, ಸುಬೇದಾರರು ಎಳಕೊಂಡು ಬಾ ಶಾನಭೋಗನ್ನ ಅಂತಾರೆ; ಅವರಿಗೆ ಸಹಾಯವಾದರೆ ನೀವು, ಬನ್ನಿ ಒಡೆಯೋಣ ಶಾನುಭೋಗನ ತಲೇನ ಅಂತೀರಿ. ಶಾನುಭೋಗರಿಲ್ಲದಿದ್ದರೆ ಒಂದುಗಳಿಗೆ ನಡೆಯುವಹಾಗಿಲ್ಲ; ಶಾನುಭೋಗರು ನಿಮಗೂ ಬೇಕು, ಸರ್ಕಾರಕ್ಕೂ ಬೇಕು; ಸರ್ಕಾರದ ಕೆಲಸ ಹುಟ್ಟುವದು ನಡೆಯು

ವದು ಮುಗಿಯುವದು ಎಲ್ಲಾ ಶಾನುಭೋಗರಿಂದಲೇ; ಆದರೂ ಅವರು ಮಾತ್ರ ಯಾವಾಗ ಏನೋ ಎಂತ ಎಡಗೈಲಿ ಜೀವ ಹಿಡಿದುಕೊಂಡು ಕೆಲಸಮಾಡಬೇಕು. ಇಷ್ಟಾದರೂ ಶಾನುಭೋಗರು ಸುಲುಕೊಂಡು ತಿಂತಾರೋ ಅಂತ ದೂರು ಮಾತ್ರ ತಪ್ಪುವುದಿಲ್ಲ. ನಿಮ್ಮ ಹತ್ತಿರವೆಲ್ಲಾ ಸುಲುಕೊಂಡು ತಿಂದು ನಾವು ಮನೆಯಮೇಲೆ ಹಾಕಿಕೊಂಡಿರುವ ಬಂಗಾರದ ಕಳಶಗಳನ್ನು ನೀವು ಕಾಣಿರಾ? ನನಗೇನು ನಿಮ್ಮ ಮೇಲೆ ಹೊಟ್ಟೆಯುಕಿಚ್ಚೇನಪ್ಪ? ನಮ್ಮ ಕಿಟ್ಟಪ್ಪ ಬೇರೆಯೇ ನೀವು ಬೇರೆಯೇ? ನಾನು ನಿಮಗೆ ಹಾಲು ತುಪ್ಪ ಇಟ್ಟೆ ಅಂದಿರಿ. ಹಾಲು ತುಪ್ಪಕ್ಕೆ ಏನು ಕಮ್ಮಿ ಅಪ್ಪಾ! ನಿಮ್ಮ ಮನೆಗೆ ಈಗ ನಾನು ಬಂದರೆ ನನಗೆ ನೀವು ಒಬ್ಬೊಬ್ಬರೂ ಹತ್ತುಹತ್ತು ಸೇರು ಹಾಲು ಕೊಡಬಲ್ಲಿರಿ" ಎಂದಳು. ಈ ಮಾತು ಕೇಳಿ ಅವರಲ್ಲೆಲ್ಲಾ ಮುದುಕನಾದವನೊಬ್ಬನು ಕಣ್ಣಿನಲ್ಲಿ ನೀರು ತಂದುಕೊಂಡು "ಇಲ್ಕಣಮ್ಮಾ ಇನ್ನು ಹೀಗೆ ಮಾಡಾಕಿಲ್ಲ; ನಾನು ಬದುಕಿರೋಗಂಟ ನಿನ್ನ ಗಂಡನ್ನ ಕೊಲ್ಲಾಕಿಲ್ಲ; ಅವನು ಏನಾನ ಮಾಡ್ಕಳ್ಳಿ!'' ಎಂದು ಹೇಳಿದನು. ಬದಲು ಮಾತಾಡದೆ ಎಲ್ಲರೂ ಹೊರಟುಹೋದರು.

ಹೀಗೆ, ಬಂದ ಗಂಡಾಂತರವು ತಪ್ಪಿತು. ರಾಮಣ್ಣನವರ ಕಾಲ ದಲ್ಲಿಯೇ ಪುಂಡರು ಬಹಳ ಮಟ್ಟಿಗೆ ನಯ ಭಯಗಳಿಂದ ಸಾಭ್ಯಸ ರಾದರು; ಲಕ್ಷ್ಮೀದೇವಮ್ಮನು ಬನಶಂಕರಿ ಹಬ್ಬದ ದಿನ ಅವರ ಮುಖಂಡರಿಗೆ ಊಡಿದ ಅಮೃತವು ಎಲ್ಲರಿಗೂ ಮಂಗಳವನ್ನು ಉಂಟು ಮಾಡಿತು.

* * *

ಈಗ ಆವೂರು ಪಾಳುಬಿದ್ದಿದೆ; ಹಾಲು ಮೊಸರುಗಳ ಕೋಡಿ ಹರಿಯುತ್ತಿದ್ದ ಕಡೆ ಕಣ್ಣೀರು ಹೊರತು ಬೇರೆ ನೀರು ಸಹ ಇಲ್ಲ. ಅಲ್ಲಿ ಇದ್ದ ದೊಡ್ಡ ದೊಡ್ಡ ಕುಳಗಳೆಲ್ಲರೂ ಸತ್ತು ಕೆಟ್ಟು ಹೋದರು. ಹಿಂದೆ ಹೇಳಿದಂತೆ ರಾಮಣ್ಣನ ಮಗನ ಕಾಲಕ್ಕೆ ಆ ಮನೆಗೆ ಬೆಂಕಿ ಬಿದ್ದು ಎಲ್ಲ ಸುಟ್ಟುಹೋಯಿತು; ದನಕರುಗಳೆಲ್ಲವೂ ಸತ್ತು ಹೋದುವು; ಸಾಲವಾಗಿ ಹೊಲಗದ್ದೆಗಳೆಲ್ಲವೂ ಸಾಲಗಾರರ ಪಾಲಾ

ದುವು. ರಾಮಣ್ಣನ ವಂಶಸ್ಥರು ಮನೆಮಾರಿಕೊಂಡು ಆವೂರನ್ನೇ ಬಿಟ್ಟು ಬೇರೆ ಎಲ್ಲಿಯೋ ಸೇರಿಕೊಂಡಿದ್ದಾರೆ; ಆ ವಂಶಕ್ಕೆ ಈಗ ಇರುವವನು ಒಬ್ಬ ಮಗ; ಅವನ ಹೊಟ್ಟೆಯಲ್ಲಿ ಮಕ್ಕಳಿಲ್ಲ; ಹತ್ತಾರು ಮಕ್ಕಳು ಹಾಲು ಮೊಸರಿನಲ್ಲಿ ಕೈತೊಳೆಯುತ್ತಿದ್ದ ಮನೆಯಲ್ಲಿ ಮಕ್ಕಳೂ ಇಲ್ಲ, ಹಾಲೂ ಇಲ್ಲ, ಮೊಸರೂ ಇಲ್ಲ; ತಿನ್ನುವುದಕ್ಕೆ ಅನ್ನ ಹುಟ್ಟಿಸಿಕೊಳ್ಳುವುದೂ ಕಷ್ಟವಾಗಿದೆ. ನಿರ್ಭಾಗ್ಯ ದೇವತೆಯು ಮನೆಯಲ್ಲಿ ಓಡಿಯಾಡುತ್ತಿದ್ದಾಳೆ.

ಜನರು ಕಾಲ ಕೆಟ್ಟುಹೋಯಿತು ಕಾಲ ಕೆಟ್ಟುಹೋಯಿತು ಎನ್ನುತ್ತಾರೆ. ಕಾಲ ಕೆಟ್ಟುಹೋಯಿತೋ ನಾವೇ ಕೆಟ್ಟುಹೋದೆವೋ! "ನಮ್ಮ ನಡೆ ನುಡಿ ಚೆನ್ನಾಗಿದ್ದರೆ ಕಾಪಾಡುವ ದೇವರು ಹ್ಯಾಗೋ ಕಾಪಾಡುತಾನೆ." ಅದನ್ನು ಕೆಡಿಸಿಕೊಂಡರೆ?—

೧೯೨೪ ಶ್ರೀಪತಿ.

---

# " ದೇವರು ಇದ್ದಾನೆ"

ಎಷ್ಟೋ ದಿವಸಗಳ ಕೆಳಗೆ ನೋಡಿದ ನೆಂಟರಿಷ್ಟರನ್ನೋ ಸ್ನೇಹಿ ತರನ್ನೋ ನೋಡಬೇಕಾದರೆ ನಮ್ಮ ದೇಶದಲ್ಲಿ ಎರಡು ಸ್ಥಳಗಳಿವೆ. ಮೊದಲನೆಯದು—ನವರಾತ್ರಿಯಲ್ಲಿ ಮೈಸೂರು ಅರಮನೆಯ ಹತ್ತಿರದ ಪ್ರದೇಶ; ಎರಡನೆಯದು—ಬೆಂಗಳೂರಿನ ಉಡುಪಿ ಹೋಟಲಿನ ಮುಂದಿರುವ ಚೌಕ; ಇದಕ್ಕೆ ಮೊದಲನೆಯ ಸ್ಥಳದಂತೆ ಇಂಥ ಕಾಲ ವೆಂಬ ನಿಯಮವಿಲ್ಲ; ಮುನ್ನೂರ ಅರವತ್ತು ಹಗಲೂ ಮುನ್ನೂರ ಅರವತ್ತು ರಾತ್ರಿಯೂ ಒಂದೇ. ಏನೋ ಕೆಲಸವನ್ನು ಇಟ್ಟುಕೊಂಡು ಆತುರದಲ್ಲಿ ಓಡಿ ಹೋಗುವುದನ್ನು ಬಿಟ್ಟು ಒಂದು ಕಾಲುಗಂಟೆಯ ಹೊತ್ತು ಅದೇ ಉದ್ದೇಶದಿಂದ ಆ ಹೋಟಲಿನ ಮುಂದೆ ನಿಂತರೆ ಅಲ್ಲಿ ಕಣ್ಣಿಗೆ ಬೀಳದಿರುವವರು ಯಾರು? ನಾನು ನಮ್ಮ ವೆಂಕಟೇಶಯ್ಯ ನನ್ನು ಬಹಳ ದಿನದ ಮೇಲೆ ಅಕಸ್ಮಾತ್ ಕಂಡದ್ದು ಅಲ್ಲಿಯೇ. ಅವನೂ ನಾನೂ ಸಹಪಾಠಿಗಳು; ಆದರೆ ಕಾಲೇಜನ್ನು ಬಿಟ್ಟಮೇಲೆ ಒಬ್ಬರ ನ್ನೊಬ್ಬರು ನೋಡಿರಲಿಲ್ಲ. ಅವನು ಎಲ್ಲಿದ್ದನೋ ಅದೂ ನನಗೆ ಗೊತ್ತಿರ ಲಿಲ್ಲ. ಆದ್ದರಿಂದ ಅವನನ್ನು ನೋಡಲು ಸ್ವಲ್ಪ ಆಶ್ಚರ್ಯವೇ ಆಯಿತು. ಅದೇ ಶಿಸ್ತುಗಾರ ಪುಟ್ಟಸಾಮಿ; ಈಗ ಫೆಲ್ಟ್‌ಕ್ಯಾಪ್‌ಗೆ ಬದಲಾಗಿ ಪೂರ್ತಿ ಎರಡು ಬೆಟ್ಟು ಅಗಲ ಕಲಾಪತ್ತು ಇರುವ ರುಮಾಲು; ಕಸಿ ಮಾಡಿದ ಮೀಸೆ; ಅದಕ್ಕೆ ತಕ್ಕ ಹಾಗೆ ಮಿಕ್ಕದ್ದೆಲ್ಲಾ; ಸಾಲದ್ದಕ್ಕೆ ಲಾಯರು;—ಕಕ್ಷಿಗಾರರ ಕಣ್ಣಿಗೆ ಮಣ್ಣು ಹುಯ್ಯಬೇಕೋ ಬೇಡವೋ!

" ಓಹೋ! ಏನಯ್ಯಾ ವೆಂಕಟೇಶ, ಯಾವಾಗ ಬಂದೆ?"

" ಏನು ಶ್ರೀಪತಿ!"

ಪರಸ್ಪರ ಯೋಗಕ್ಷೇಮವು ಹೀಗೆ ಏಕಕಾಲದಲ್ಲಿ ಚಿಕ್ಕದಾಗಿ ಮುಗಿಯಿತು. ಆಮೇಲೆ,—ಆಮೇಲೆ ಗೊತ್ತೇಯಿದೆ ಹೋಟಲಿನ ಹತ್ತಿರ ಸ್ನೇಹಿತರು ಸಿಕ್ಕಿದರೆ! ಹೋಟಲಿನವನಿಗೆ ತೆರಬೇಕಾದ ದಂಡ ವನ್ನು ತೆತ್ತು ಹಾಲುಕುಡಿದ ಬೆಕ್ಕುಗಳಂತೆ ನಾಲಗೆಯಿಂದ ತುಟಿಗಳನ್ನು

ಸವರಿಕೊಳ್ಳುತ್ತ ಹೊಸ ಜೀವ ಬಂದವರಂತೆ ಹೊರಟೆವು. ಏನೇನೋ ಹರಟೆ ಹರಟುತ್ತ ಲಾಲಬಾಗಿನ ಮೇಲೆ ಹೊರಟು ಮನೆಯ ಕಡೆಗೆ ಬಂದೆವು. ಬಸವನಗುಡಿಯ ಚೌಕದ ಹತ್ತಿರ ವೆಂಕಟೇಶನು ಒಬ್ಬ ಹುಡುಗನನ್ನು ನೋಡಿ ಯಾಕೋ! ಉಪವಾಸ ಹೋಗುತ್ತೀಯೇನೋ ಸ್ಕೂಲಿಗೆ?" ಎಂದು ಕೇಳಿದನು.

"ಇಲ್ಲ, ನನಗೆ ಊಟವಾಯಿತು. ನೀವೂ ಬರುತಾರೇನೋ ತಾಳು ನೋಡೋಣ ಎಂದು ಇಷ್ಟು ಹೊತ್ತಿನ ತನಕ ನೋಡಿದರು; ನೀವು ಬರಲಿಲ್ಲ ಸ್ಕೂಲಿಗೆ ಹೊತ್ತಾಯಿತು ಅಂತ ಅಮ್ಮ ನನಗೆ ಅನ್ನ ಹಾಕಿಬಿಟ್ಟಳು."

"ನಿಮ್ಮ ತಾತನಿಗೂ ಊಟವಾಯಿತೇ?"

"ಇಲ್ಲ, ನಿಮಗೋಸ್ಕರ ಕಾದುಕೊಂಡಿದ್ದಾರೆ."

"ಊಟವಾಗಿದ್ದರೆ ಹಣೆಗೆ ಯಾಕೆ ಏನೂ ಇಟ್ಟುಕೊಳ್ಳಲಿಲ್ಲ?"

ಅದಕ್ಕೆ ಹುಡುಗನು ಯಾವ ಉತ್ತರವನ್ನೂ ಕೊಡಲಿಲ್ಲ; ಅದೇನೂ ಅಷ್ಟು ಲಕ್ಷ್ಯಕೊಡತಕ್ಕ ವಿಷಯವಲ್ಲವೆಂಬಂತೆ ಒಂದುಸಾರಿ ಲೊಚಗುಟ್ಟಿ ತುಟಿ ತೋರಿಸಿ ತಲೆ ಅಲ್ಲಾಡಿಸಿ ಪುಸ್ತಕದ ಚೀಲವನ್ನು ಹೆಗಲ ಮೇಲೆ ಹಾಕಿಕೊಂಡು ಓಡಿಹೋದನು.

ಹುಡುಗನು ಒಳ್ಳೆಯ ಪಟುವಾಗಿಯೂ ಸುಂದರನಾಗಿಯೂ ಇದ್ದನು; ನನಗೆ ಅವನ ಪರಿಚಯವಿಲ್ಲದಿದ್ದರೂ ಅವನು ಹೋದ ಕೂಡಲೆ "ಹೊರಟುಹೋದನಲ್ಲಾ!" ಎನ್ನಿಸಿತು. ಆದ್ದರಿಂದ

"ಆ ಹುಡುಗ ಯಾರಯ್ಯ?" ಎಂದು ನನ್ನ ಸ್ನೇಹಿತನನ್ನು ಕೇಳಿದೆ.

"ವೆಂಕಟಸುಬ್ಬಯ್ಯನವರ ಮಗನೋ!"

"ಯಾವ ವೆಂಕಟಸುಬ್ಬಯ್ಯನವರು?"

"ಮದರಾಸಿನಲ್ಲಿ ನಾನಿದ್ದಾಗ ನನ್ನ ಜೊತೆಯಲ್ಲಿ ಇದ್ದರಲ್ಲ, ಅವರು."

"ಅವರು ಯಾರೋ ಗೊತ್ತಿಲ್ಲ."

"ಸರಿಸರಿ, ನಿನಗೆ ಗೊತ್ತಿಲ್ಲ; ನಾನು ಮೈಸೂರು ಬಿಟ್ಟು ಹೋದ

ಮೇಲೆ ನಾವು ಪುನಃ ಒಬ್ಬರನ್ನೊಬ್ಬರು ನೋಡಿಯೇ ಇಲ್ಲ.—ನಿಮ್ಮ ರಾಮಚಂದ್ರಯ್ಯನವರಿದ್ದಾರಲ್ಲ ಅವರ ಅಣ್ಣ ಒಬ್ಬರಿದ್ದರು."

"ಹೌದು ಹೌದು, ಅವರಣ್ಣ ಯಾರೋ ಉತ್ತರದೇಶದಲ್ಲಿ ಇದ್ದಾರೆಂದು ಹೇಳುತ್ತಿದ್ದರು."

"ಅವರು ಬೇರೆ; ಅವರು ಎಲ್ಲರಿಗಿಂತಲೂ ಹಿರಿಯವರು; ವೆಂಕಟಸುಬ್ಬಯ್ಯನವರು ನಡುಕಲವರು."

"ನೀನೂ ಅವರೂ ಬಿ.ಎಲ್. ಕ್ಲಾಸಿನಲ್ಲಿ ಒಟ್ಟಿಗೆ ಓದುತ್ತಿದ್ದಿರೇನು?"

"ಇಲ್ಲ"

"ಮತ್ತೆ! ನಿನಗೆ ಅವರ ಪರಿಚಯವಾದದ್ದು ಹ್ಯಾಗೆ?"

"ಅಯ್ಯೋ! ಅದು ಒಂದು ದೊಡ್ಡ ಕಥೆ. ಅವರು ಸತ್ತಮೇಲೆ ಅವರ ಪರಿಚಯವಾದದ್ದು."

"ಸತ್ತಮೇಲೆ ಪರಿಚಯವಾದದ್ದೆಂದರೇನೋ?"

"ಹೌದು; ಅದನ್ನು ಇನ್ನೊಂದುಸಲ ಹೇಳುತ್ತೇನೆ; ಈಗ ಊಟಕ್ಕೆ ಹೋಗಬೇಕು ಹೊತ್ತಾಯಿತು, ಅವರೆಲ್ಲರೂ ಕಾದುಕೊಂಡಿದ್ದಾರಂತೆ."

"ಯಾಕೆ? ನಮ್ಮ ಮನೆಗೇ ಬಂದುಬಿಡು ಹೋಗೋಣ. ಅವರ ಮೇಲೆ ಅಷ್ಟೊಂದು ಅಭಿಮಾನವೇನು?"

"ಇಲ್ಲಪ್ಪ; ನನಗೆ ಅವರ ಪರಿಚಯವಾದಂದಿನಿಂದ ನಾನು ಇನ್ನೆಲ್ಲಿಗೂ ಹೋಗುವದಿಲ್ಲ; ಬೆಂಗಳೂರಿಗೆ ಬಂದಾಗೆಲ್ಲಾ ಅವರ ಮನೆಗೇ ಹೋಗುವುದು; ಅಲ್ಲಿ ಇಲ್ಲಿ ಊಟ ಮಾಡಿದೆನೆಂದು ತಿಳಿದರೆ ಅವರು ನನ್ನನ್ನು ಸುಮ್ಮನೆ ಬಿಡುವುದಿಲ್ಲ!"

"ಊಟಮಾಡಿಕೊಂಡಾದರೂ ಮನೆಯಕಡೆ ಬರುತ್ತೀಯೋ?"

"ಇನ್ನೇನು ಕೆಲಸ?"

"ಮನೆಯಲ್ಲಿಯೇ ಇರಲೊ?"

"ಹುಂ"

ಲಾಯರುಗಳನ್ನು ನೋಡಿದರೆ, ಹೊರಗಿನ ವೇಷದಿಂದ ಅವರ

ನಿಜವಾದ ಕಷ್ಟಸುಖಗಳನ್ನು ಹೇಳುವಂತಿರುವುದಿಲ್ಲ. ವೆಂಕಟೇಶಯ್ಯನೂ ಆ ಗುಂಪಿಗೆ ಸೇರಿದವನೇ; ಆದರೆ ಅವನಲ್ಲಿ ಬರಿಯ ಬಟ್ಟೆಬರಿಗಳ ಆಡಂಬರವಷ್ಟೇ ಗಮನಿಸತಕ್ಕದ್ದೆಂದು ಹೇಳುವಹಾಗಿಲ್ಲ; ಅವನು ಎಂದೂ ಮನಸ್ಸಿಗೆ ಯಾವುದನ್ನೂ ವಿಶೇಷವಾಗಿ ಹತ್ತಿಸಿಕೊಂಡು ಕೊರಗಿದವನಲ್ಲ; ಯಾವಾಗ ನೋಡಲಿ, ಅವನು ನಗು ನಗುತ್ತ ಇರದೆ ಮುಖ ಗಂಟು ಹಾಕಿಕೊಂಡಿದ್ದದ್ದನ್ನು ಯಾರೂ ಅರಿತೇ ಅರಿಯರು; ಅದೂ ಒಂದು ಪುಣ್ಯ.

ನನಗೆ ಊಟವೇನೋ ಆಯಿತು; ಆದರೆ, ಸತ್ತಮೇಲೆ ಪರಿಚಯವಾಗುವುದೆಂದರೇನು—ಎಂಬ ಸಂಗತಿಯು ಬಹುವಾಗಿ ಬಾಧಿಸುತ್ತಿತ್ತು. ಪಿಶಾಚಿಯು ಕಾಣಿಸಿಕೊಂಡಿರಬಹುದೇ? ಈಗ ಕೋನರ್‌ಡಾಯಲ್, ಆಲಿವರ್‌ಲಾಡ್ಜ್ ಇವರೆಲ್ಲಾ ಹೇಳುತ್ತಿರುವುದು ನಿಜವಿರಬಹುದೇ?—ಎಂದು ಬಗೆಬಗೆಯಾಗಿ ಯೋಚಿಸುತ್ತ ನನ್ನ ಸ್ನೇಹಿತನಿಗಾಗಿ ಕಾಯುತ್ತಿದ್ದೆ. ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ನನ್ನ ಸ್ನೇಹಿತನು ನೇರಿಲೆಹಣ್ಣಿನ ಬಣ್ಣದ ಒಂದು ಅಂಗಿಯನ್ನು ತೊಟ್ಟು ಅದರ ಮೇಲೆ ಮಲ್ಲಿಗೆ ಹೂವಿನಂತೆ ಶುಭ್ರವೂ ಹಗುರವೂ ಆದ ಒಂದು ಕಲಾಪತ್ತಿನ ವಲ್ಲಿಯನ್ನು–ಮೈಮೇಲೆ ಬಿದ್ದಿದೆಯೋ ಇಲ್ಲವೋ ಎಂಬಹಾಗೆ–ಹೊದ್ದು ಪೂನಾ ಜೋಡುಗಳನ್ನು ಮೆಟ್ಟಿ ತಾಂಬೂಲವನ್ನು ಮೆಲ್ಲುತ್ತ ಬಂದು ಕೈಲಿದ್ದ ಕೋಲಿನಿಂದ ಬಾಗಿಲನ್ನು ಕುಟ್ಟಿ 'ಶ್ರೀಪತಿ' ಯೆಂದು ಕೂಗಿದನು ಅವನನ್ನು ಬರಮಾಡಿಕೊಂಡು, ಒಳಗೆ ಕರೆದುಕೂರಿಸಿ 'ಸುಶೀಲಾ, ಟೀ ತಗೊಂಡುಬಾರೇ!' ಎಂದು ಕೂಗಿದೆ. ಟೀ ಬಂತು. ಅವನೇನೋ ಮಧ್ಯಾಹ್ನದ ನಿದ್ರೆಮಾಡಿ ಎದ್ದು ತೃಪ್ತಿಯಾಗಿ ತಿಂಡಿ ತಿಂದು ಟೀ ಕುಡಿದು ಎಲೆ ಅಡಿಕೆ ಹಾಕಿಕೊಂಡಿದ್ದನು. ಆದರೂ ಪುನಃ ತೆಗೆದುಕೊಳ್ಳುವುದಕ್ಕೆ ಹೆಚ್ಚು ಸಂಕೋಚವನ್ನೇನು ತೋರಿಸಲಿಲ್ಲ. ಅದಾದ ಕೂಡಲೆ ನಾನು ಕಥೆಯನ್ನು ಜ್ಞಾಪಿಸಿದೆ.

'ಯಾವ ಕಥೆ?'

ಅವನಿಗೆ ಆಗಲೆ ಬೆಳಗ್ಗೆ ಮಾತನಾಡಿದ ಸಂಗತಿಯೆಲ್ಲಾ ಮರೆತು ಹೋಗಿತ್ತು; ಪುನಃ ಜ್ಞಾಪಿಸಿದೆ.

' ಅದೇ ? ಅದು ಕಥೆಯೂ ಅಲ್ಲ ಏನೂ ಅಲ್ಲ; ನಡೆದ ಸಂಗತಿ ಯಯ್ಯಾ ! "

' ಏನಾದರೂ ಆಗಲಿ, ಸತ್ರಮೇಲೆ ಪರಿಚಯವಾಯಿತು ಎಂದೆ ಯಲ್ಲ ಅದು ಹೇಗೆ ಹೇಳು.'

೨

[ವೆಂಕಟೇಶಯ್ಯನು ಹೇಳಿದ ಕಥೆ]

" ನಾನು ಬಿ. ಎಲ್. ಪರೀಕ್ಷೆಗೆ ಓದುತ್ತಿದ್ದಾಗ ನನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗಿ ಮದ್ರಾಸಿನಲ್ಲಿ ಸಂಸಾರ ಮಾಡುತ್ತಿದ್ದೆ. ಲಾ ಕಾಲೇಜಿಗೆ ಹತ್ತಿರವಾಗಲೆಂದು ತಂಬೂಚೆಟ್ಟಿ ರಸ್ತೆಯಲ್ಲಿ ಮನೆ ಮಾಡಿದ್ದೆ ; ನಾನಿದ್ದದ್ದು ಒಂದು ದೊಡ್ಡ ಮಹಡಿಯಮನೆ . ."

" ನೀನು ಬಿಡಪ್ಪ ! ಸಣ್ಣಕ್ಕಿ ಅನ್ನ ಬೆಣ್ಣೆ ಕಾಯಿಸಿದ ತುಪ್ಪ ಕಲಾಪತ್ತಿನ ಪಂಚೆ ಮಹಡಿ ಮನೆ ಇವು ಇಲ್ಲದ್ದು ಯಾವಾಗ ? "

ಒಂದು ಸಾರಿ ಗಟ್ಟಿಯಾಗಿ ನಕ್ಕು,

" ಹಾಗಲ್ಲವೋ ಮಹಾರಾಯ ! ಅಲ್ಲಿ ಮೇಲಿನ ಅಂತಸ್ತಿಗೆ ಹೋಗುತ್ತ ಹೋಗುತ್ತ ಬಾಡಿಗೆ ಕಮ್ಮಿ; ಅದಕ್ಕೋಸ್ಕರ ಅಲ್ಲಿದ್ದೆ. ದೊಡ್ಡ ವಠಾರದ ಮನೆ, ಆ ಮನೆಗಳಲ್ಲಿ ಎಷ್ಟು ಸಂಸಾರಗಳಿದ್ದುವೋ ದೇವರೇ ಬಲ್ಲ ; ಮನೆಗಳನ್ನು ಕಟ್ಟಬೇಕಾದರೆ ಮದರಾಸು ಬೊಂಬಾಯಿಗಳ ಕಟ್ಟಡಗಳನ್ನು ನೋಡಿ ಕಟ್ಟಬೇಕು ; ಎಷ್ಟು ಸಣ್ಣ ಜಾಗದಲ್ಲಿ ಎಷ್ಟು ಅನುಕೂಲವಿರುತ್ತದೆ ಬಲ್ಲೆಯಾ ? ನಿಮ್ಮ ಈ ಇಷ್ಟು ದೊಡ್ಡ ಮನೆಯಲ್ಲಿರುವ ನಾನೂನನ್ನೆಲ್ಲಾ—ಇದರ ನಾಲ್ಕರಲ್ಲಿ ಒಂದು ಪಾಲು ಇರಲಾರದು—ಅಷ್ಟು ಸಣ್ಣ ಮನೆಯಲ್ಲಿ ಇಟ್ಟುಕೊಳ್ಳಬಹುದು. ಅಲ್ಲಿ ಯಾವ ಯಾವ ಜಾತಿಯವರೋ ಇದ್ದರು. ಅವರಲ್ಲಿ ಕನ್ನಡ ಮಾತಾಡುವ ಮೈಸೂರ ಕಡೆಯವರೂ ಒಬ್ಬರು ಇದ್ದರು. ಆಗೊಂದು ಈಗೊಂದು ಕನ್ನಡ ಮಾತು ಕಿವಿಗೆ ಬೀಳುತ್ತಿತ್ತು. ಅಷ್ಟು ಹೊರತು ಅವರು ಯಾರೋ ನಾನು ನೋಡಿರಲಿಲ್ಲ—ವಿಚಾರಿಸಿಯೂ ಇರಲಿಲ್ಲ. ಒಬ್ಬರನ್ನೊಬ್ಬರು ನೋಡುವುದು ಹೇಗೆ ? ಅದೇನು ಮೈಸೂರೇ ?— ಅಪ್ಪ ಸಂಪಾದಿಸಿಟ್ಟ ಜಮೀನಿನಿಂದ ಬಂದ ಭತ್ತವನ್ನು ಸ್ವಂತಮನೆ

ಯಲ್ಲಿ ತುಂಬಿಟ್ಟುಕೊಂಡು ಮೊಗರುಬದನೇಕಾಯಿನ ವಾಂಗಿಭಾತು ಗಳನ್ನು ತಿಂದುಕೊಂಡು ಚಿಗುರು ವಿಳ್ಳೇದೆಲೆಯನ್ನು ಮೆಯ್ಯುತ್ತಾ ಜಡಭರತರಂತೆ ಹರಟೆ ಹೊಡೆಯುತ್ತ ಕಾಲ ಕಳೆಯುವುದಕ್ಕೆ? ಬೆಳಕುಹರೆಯುವುದಕ್ಕೆ ಮುಂಚೆ ಸ್ನಾನ ಪಾನಗಳನ್ನು ಮುಗಿಸಿ ಕೊಳ್ಳದಿದ್ದರೆ ಆಮೇಲೆ ನೀರು ಸಿಕ್ಕೀತೇ ಅಲ್ಲಿ? ಒಂದು ದಿವಸ ವೇನಾದರೂ ನಾಟಕಕ್ಕೆ ಹೋಗಿದ್ದು ಎಚ್ಚರವಾಗುವುದು ಹೊತ್ತಾದರೆ ಅವತ್ತು ಸ್ನಾನಕ್ಕೆ ಸೊನ್ನೆಯೇ! ಇಷ್ಟು ಮಾಡಿಕೊಂಡು ಏಳು ಗಂಟೆಯ ಒಳಗಾಗಿ ಟ್ರಿಪ್ಲಿಕೇನಿಗೆ ಹೋಗಿ ತಲಪಬೇಕಾಗಿತ್ತು.... ನೀನು ಮದ್ರಾಸು ನೋಡಿದ್ದೀಯೋ ಇಲ್ಲವೋ? ನೀನೊಬ್ಬ ಮನೆಯ ಮುಸುಂಡಿ.''

"ಅಷ್ಟುಮಟ್ಟಿಗೆ ನೋಡಿದ್ದೇನೆ ಹೇಳಪ್ಪ! ನೀನು ಮಹಾ ದೇಶಾಂತರಗಳನ್ನು ತಿರುಗಿರುವುದಕ್ಕೆ ಮಿಕ್ಕವರನ್ನೆಲ್ಲಾ ಬೈಯುತೀಯೆ!"

"ಬೆಳಗಾಗಿ ಏಳುತ್ತಿದ್ದ ಹಾಗೇ ಟ್ರಿಪ್ಲಿಕೇನ್‌ಗೆ ಹೋಗಬೇಕಾ ಗಿತ್ತು. ಅಲ್ಲಿ ಏನೋ ಒಂದು ಕೆಲಸವನ್ನು ಗಂಟುಹಾಕಿಕೊಂಡು ನಾಲ್ಕುಕಾಸು ಸಂಪಾದಿಸುತ್ತಿದ್ದೆ. ಹಾಗೇ ಸಾಯಂಕಾಲವೂ ಒಂದು ಕಡೆ ಕೆಲಸ; ಯಾವ ಯಾವ ರೀತಿ ಎಷ್ಟೆಷ್ಟು ಸಂಪಾದಿಸಿದರೂ ಸಾಲುತ್ತಿರಲಿಲ್ಲ. ಹೀಗೆ ನಾನು ಮನೆಗೆ ಸೇರುವುದೇ ಕಷ್ಟವಾಗಿತ್ತು; ಅವರ ಹಣೆಯುಬರಹವೂ ಅಷ್ಟೆ! ಇಂಥಾದ್ದರಲ್ಲಿ ನನಗೂ ಅವರಿಗೂ ಪರಿಚಯ ಹೇಗಾಗಬೇಕು? ಆದರೂ ನಮ್ಮವರೊಬ್ಬರಿದ್ದಾರೆಂದು ಯಾವಾಗಲೂ ಒಂದು ವಿಧವಾದ ಸುಖವೂ ಧೈರ್ಯವೂ ಇರುತ್ತಿತ್ತು. ನಮ್ಮವರು ತಮ್ಮವರು ಎಂಬ ನೆಂಟನ ಬೆಲೆಯನ್ನು ಅರಿಯಬೇಕಾದರೆ ಪರಸ್ಥಳಕ್ಕೆ ಹೋಗಬೇಕು ನೋಡು—ಅದರಲ್ಲಿಯೂ ಪರದೇಶಕ್ಕೆ ಹೋಗಬೇಕು, ಅಲ್ಲಿ ನಮ್ಮ ದೇಶದ ಜನರು ನಮ್ಮ ದೇಶದ ಉಡುಪು ನಮ್ಮ ದೇಶದ ಮಾತು ಯಾವುದೂ ಇರಬಾರದು! ಅಂಥ ಕಡೆಗೆ ಹೋದರೆ ನಾಲ್ಕು ದಿವಸಗಳಲ್ಲಿ ನಮ್ಮದೇಶದ ಭಿಕ್ಷುಕನನ್ನು ಕಂಡರೂ ಅವನಲ್ಲಿಯೂ ಏನೋ ಮಮತೆಯುಂಟಾಗುವುದು.

ಪರೀಕ್ಷೆಯ ಕಾಲ; ಅದುವರೆಗೂ ಸೋಮಾರಿತನದಲ್ಲಿಯೂ ಸಂಸಾರ ತಾಪತ್ರಯಗಳಲ್ಲಿಯೂ ಕಾಲ ಕಳೆದುಬಿಟ್ಟದ್ದು ಆಗ್ಗೆ ಎರಡು

ಮೂರು ದಿವಸಗಳಿಂದ ರಾತ್ರಿ ಬಹು ಹೊತ್ತಿನವರೆಗೂ ಓದುತ್ತಿದ್ದೆ. ಅದೆಂಥ ಓದು! ಹಗಲೆಲ್ಲಾ ದುಡಿದು ದುಡಿದು ಹಾಸಿಗೆ ಕಂಡೇನೇ ಎಂದು ಮನೆಗೆ ಬಂದು ಕೈಗೆ ಪುಸ್ತಕ ಹಿಡಿದುಕೊಂಡು ಕೂತರೆ ವ್ಯಾಸಂಗ ನಡೆಯುವುದು ಗೊತ್ತೇ ಇದೆ; ಸಾಲದ್ದಕ್ಕೆ ಓದುವ ಕೊಠಡಿ ಬೇರೆಯಾಗಿ ಇರಲಿಲ್ಲ; ಇದ್ದದ್ದು ಒಂದೇ ಕೊಠಡಿ; ಅದರಲ್ಲಿ ಹಾಸಿಗೆಯನ್ನು ಹಾಸಿಬಿಟ್ಟಿರುತ್ತಿತ್ತು. ತಿಂಡಿ, ಮಾತು, ಎಲೆಯಡಿಕೆ. . .''

"ಸರಿ ಮತ್ತೆ! ಎಷ್ಟು ದುಡ್ಡು ಸಂಪಾದನೆ ಮಾಡಿದರೆ ತಾನೇ ಹೇಗೆ ಸಾಕಾಗುತ್ತೆ?''

"ಸಂಪಾದನೆ ಸಾಲದೆಂದು ಉಪವಾಸ ಒರಗುವುದಕ್ಕಾಗುತ್ತದೆಯೇ? ನನ್ನಿಂದಾಗುವದಿಲ್ಲ; ಮನೆಯಲ್ಲಿ ತಿಂಡಿ ಬೀಳದಿದ್ದ ದಿವಸ ಹೊರಗೆ ಎಲ್ಲಾದರೂ ಹೋಗಿ ತಿಂದು ಬಿಡುವುದೇ!"

"ದುಡ್ಡಿಲ್ಲದಿದ್ದರೆ?''

"ದುಡ್ಡಿಲ್ಲದಿದ್ದರೆ, ಯಾರಾದರೂ ಕೊಡಿಸುತ್ತಾರೆ!''

"ಹಾಗಾದರೆ ಸರಿ! ಉಪವಾಸವೂ ಇಲ್ಲ ವನವಾಸವೂ ಇಲ್ಲ; ಮುಂದೆ?"

"ಏನು ಹೇಳುತಿದ್ದೆ? ಹುಂ, ಹಾಸಿಗೆಯ ಮೇಲೆ ಮಲಗಿಕೊಂಡು ಓದುವುದು; ವ್ರತವಿಲ್ಲ ಸುಖವಿಲ್ಲ; ಓದಿದ ಹಾಗಲ್ಲ, ನಿದ್ರೆ ಮಾಡಿದ ಹಾಗಲ್ಲ; ಎಷ್ಟು ಸಲ ತೂಕಡಿಸಿ ಪುಸ್ತಕ ಕೆಳಗೆ ಹಾಕುತ್ತಿದ್ದೆನೋ, ಎಷ್ಟು ಸಲ ತೆಗೆದುಕೊಳ್ಳುತ್ತಿದ್ದೆನೋ! ಅಂತೂ ಇಂತೂ, ಓದೂ ಇಲ್ಲದೆ ನಿದ್ರೆಯೂ ಇಲ್ಲದೆ ಬಹಳ ಹೊತ್ತು ಕಳೆದು ದೇವರ ಮೇಲೆ ಭಾರ ಹಾಕಿ ಪುಸ್ತಕ ಮುಚ್ಚಿ ದೀಪ ಸಣ್ಣದು ಮಾಡಿ ಮಲಗಿ ಬಿಡುತ್ತಿದ್ದೆ; ಒಂದು ದಿವಸ ಹೀಗೇ ಮಲಗಿದ್ದೆ. ನಿದ್ರೆ ಹತ್ತಿತ್ತೋ ಇಲ್ಲವೋ, ಆಗ ಯಾರೋ ಕನಸಿನಲ್ಲಿ 'ರಾಯರೇ, ರಾಯರೇ' ಎಂದ ಹಾಗಾಯಿತು. ನನಗೆ ನಿದ್ರೆಯಲ್ಲಿಯೇ ನಗು; ನನ್ನನ್ನು ಅದುವರೆಗೆ ಯಾರೂ ರಾಯರೇ ಎಂದು ಕರೆದಿರಲಿಲ್ಲ. ಸ್ವಲ್ಪ ಎಚ್ಚರವಾದ ಹಾಗಾಯಿತು. ಪುನಃ "ರಾಯರೇ, ರಾಯರೇ!" ಎಂದ ಹಾಗಾಯಿತು; ಚೆನ್ನಾಗಿ ಎಚ್ಚರಮಾಡಿಕೊಂಡು ಕೇಳಿದೆ. ಮತ್ತೆ "ರಾಯರೇ

ರಾಯರೇ '' ಎಂದು ಮೆಲ್ಲಗೆ ಯಾರೋ ಬಾಗಿಲಿನ ಹೊರಗಿನಿಂದ ಕೂಗುತ್ತಿದ್ದಂತೆ ಕೇಳಿಸಿತು ; ಇದು ಯಾರು ಅರ್ಧರಾತ್ರಿಯಲ್ಲಿ ಕೂಗುವರು—ಎಂದುಕೊಂಡು, ಪುನಃ ಸ್ವಲ್ಪ ಹೊತ್ತು ಹಾಗೇ ಹಾಸಿಗೆಯ ಮೇಲೆ ಕಿವಿಕೊಟ್ಟು ಕೇಳುತ್ತ ಕುಳಿತುಕೊಂಡೆ ; ಪುನಃ ಅದೇ ಮಾತು ಕೇಳಿಸಿತು ; ನೋಡಿದರೆ ದೊಡ್ಡವರ ಧ್ವನಿಯಾಗಿ ತೋರಲಿಲ್ಲ ; ಒಬ್ಬ ಹುಡುಗನೋ ಹುಡುಗಿಯೋ ಇರಬಹುದೆಂದು ತೋರಿತು. ಕೂಡಲೆ ಎದ್ದು ಹೋಗಿ ಹೊರಬಾಗಿಲನ್ನು ತೆಗೆದು ನೋಡಲು ಒಂದು ಲಾರ್ಟೀ ದೀಪವನ್ನು ಹಿಡಿದುಕೊಂಡು ಒಬ್ಬ ಹುಡುಗಿ ನಿಂತಿದ್ದಾಳೆ. ಸುಮಾರು ಏಳೆಂಟು ವರ್ಷ ವಯಸ್ಸಿರಬಹುದು. ಮುಖವು ಸುಂದರವಾದ ಮುಖ ; ಮುಖಕ್ಕೆಲ್ಲ ದೊಡ್ಡ ದೊಡ್ಡ ಎರಡು ಕಣ್ಣು ; ನಾನು ಬಂದ ಕೂಡಲೆ ಹುಡುಗಿ ಸ್ವಲ್ಪ ಹಿಂದಕ್ಕೆ ಸರಿದು ಆ ಕಣ್ಣುಗಳನ್ನು ಎತ್ತಿ ನನ್ನ ಮುಖವನ್ನು ನೋಡಿತು. ನನಗೆ ಆಶ್ಚರ್ಯವಾಯಿತು ! ಈ ಹುಡುಗಿ ಯಾರು? ಎಲ್ಲಿಂದ ಬಂದಳು ? ದಾರಿತಪ್ಪಿ ಬಂದಿದ್ದಳೋ ಏನೋ ಎಂದುಕೊಂಡು ಮನಸ್ಸಿನಲ್ಲಿ ಬಹು ಕಳವಳವಾಯಿತು. ನಮ್ಮ ಶಾರದೆಯು ಜ್ಞಾಪಕಕ್ಕೆ ಬಂದು ಅವಳೆಲ್ಲಾದರೂ ಈ ಊರಿನಲ್ಲಿ ತಪ್ಪಿಸಿಕೊಂಡು ಹೋದರೆ ಏನು ಗತಿ ಎಂದು ಮೈಜುಮ್ಮೆಂದಿತು. ಒಡನೆಯೇ

"ನೀನೇ ಅಮ್ಮ, 'ರಾಯರೇ' ಎಂದು ಕೂಗಿದವಳು ?" ಎಂದು ಕೇಳಿದೆ.

"ಹುಂ"

"ಯಾರಮ್ಮ ನೀನು ? ಯಾರ ಮಗಳು ?''

ಹುಡುಗಿಯು ಅತ್ತಲಾಗಿ ಇತ್ತಲಾಗಿ ನೋಡಿತು. ಮಾತು ಹೊರಡಲಿಲ್ಲ.

"ಒಬ್ಬಳೆ ಬಂದಿದ್ದೀಯಾ ಅಮ್ಮ ? ''

"ಇಲ್ಲ ಅಮ್ಮ ಬಂದಿದಾಳೆ ''—ಎಂದು ಉತ್ತರ ದಿಕ್ಕಿನ ಕಡೆಗೆ ನೋಡಿತು. ಆ ಮನೆಯ ಮೂಲೆಯ ಹತ್ತಿರ ಆ ಹುಡುಗಿಯ ತಾಯಿ ಕತ್ತು ಬಗ್ಗಿಸಿಕೊಂಡು ನಿಂತುಕೊಂಡಿದ್ದರು. ನನಗೆ ಏನೂ ತೋರದೆ ಸ್ವಲ್ಪ ಹೊತ್ತು ದಿಗ್ಭ್ರಮೆಯಾಯಿತು. ಅನಂತರ

"ಏನು ತಾಯಿ ?" ಎಂದು ಕೇಳಿದೆ.

"ಅಪ್ಪಾ, ಸ್ವಲ್ಪ ಮನೆಯತನಕ ಬನ್ನಿ ಅಪ್ಪ! ಯಜಮಾನರು ಹ್ಯಾಗೆ ಹ್ಯಾಗೋ ಆಡುತ್ತಾರೆ; ಹೆದರಿಕೆಯಾಗುತ್ತೆ.—ನೀನೇ ಎನ್ನುವವರು ದಿಕ್ಕಿಲ್ಲ; ಕನ್ನಡ ಮಾತು ಆಡಿದರೆ ತಿಳಿದುಕೊಳ್ಳೋರೂ ಮತ್ತೊಬ್ಬರಿಲ್ಲ."

ನನಗೆ ಗಾಬರಿಯಾಯಿತು. ಕೂಡಲೆ ಬದಲು ಮಾತನಾಡದೆ ಅವರ ಹಿಂದೆ ಹೋದೆ. ಮನೆಯಲ್ಲಿ ಎಲ್ಲವೂ ನಿಶ್ಶಬ್ದ. ಒಂದು ಹಾಸಿಗೆಯ ಮೇಲೆ ಒಂದು ಮಗುವು ಮಲಗಿ ನಿದ್ದೆಮಾಡುತ್ತಿದೆ; ಇನ್ನೆರಡು ಹಾಸಿಗೆಗಳು ಬರಿದಾಗಿವೆ; ಮೂರನೆಯದರಲ್ಲಿ ಒಬ್ಬ ಗಂಡಸು ಮಲಗಿದ್ದಾನೆ. ಮೈಮೇಲೆ ಜ್ಞಾನವಿಲ್ಲ ಜ್ಞಾನಾಜ್ಞಾನದ ಮಾತು; ಬಾಯಿ ತೊದಲು. ಆಯಾಸ; ಹೊರಳಾಟ. ಹತ್ತಿರ ಕೂತುಕೊಂಡು ಕೈಹಿಡಿದು ನೋಡಿದೆ; ಮೈ ಕುದಿಯುತ್ತಿದೆ; ಕಣ್ಣು ಕೆಂಡದಹಾಗಿದೆ.

"ಜ್ವರ ಬಂದಿದೆಯಮ್ಮ; ಎಷ್ಟು ದಿವಸದಿಂದ ಹೀಗಿದೆ? ಏನು ಔಷಧಿ ಕೊಟ್ಟಿರಿ ?"

"ಈಗಾಗಲೇ ನಾಲ್ಕೈ—ಎರಡು ಮೂರು ದಿನವಾಯಿತಪ್ಪ; ಔಷಧಿ ಯಾರು ತಂದುಕೊಡೋರು ? ಕಸ್ತೂರಿಮಾತ್ರೆ ಇತ್ತು, ಅದನ್ನು ಒಂದೆರಡು ಹೊತ್ತು ಕೊಟ್ಟಿದ್ದೆ ಅಷ್ಟೆ."

"ಹೊಟ್ಟೆಗೆ ಏನಾದರೂ ಆಹಾರ ಕೊಟ್ಟಿದ್ದೀರಾ ?"

"ಇವತ್ತು ಬೆಳಿಗ್ಗೆ ಸ್ವಲ್ಪ ಗಂಜಿ ತಗೊಂಡಿದ್ದರು, ಸಾಯಂಕಾಲದಿಂದ ಹೀಗಾಗಿಬಿಟ್ಟಿದೆ, ಮಾತನಾಡಿಸಿದರೆ ಮಾತನಾಡುವುದಿಲ್ಲ; ಏನೇನೋ ಮಾತನಾಡುತ್ತಾರೆ; ನನಗೆ ಗಾಬರಿಯಾಗಿದೆ; ಮಕ್ಕಳು ಹೆದರಿಕೊಂಡಿವೆ."

ನನಗೆ ಪರಸ್ಥಳದ ಕಷ್ಟಗಳೆಲ್ಲಾ ಒಟ್ಟಿಗೆ ಅನುಭವಕ್ಕೆ ಬಂದುವು; ನಮ್ಮ ಜನರಲ್ಲಿ ತಮಿಳರ ಹಾಗೆ ಸಾಹಸವಿಲ್ಲ, ಚಾಲೂಕು ಇಲ್ಲ, ಎಲ್ಲೆಂದರೆ ಅಲ್ಲಿ ಹೋಗಿ ಅನ್ನ ಹುಟ್ಟಿಸಿಕೊಳ್ಳುವ ಛಾತಿ ಇಲ್ಲ, ಅಪ್ಪ ಹಾಕಿದ ಆಲದ ಮರ ಎಂದು ಮೈಸೂರಲ್ಲೋ ಬೆಂಗಳೂರಲ್ಲೋ ಅರೆ ಗಂಜಿ ಕುಡಿದುಕೊಂಡಾದರೂ ಪ್ರಾಣ ಬಿಡುತ್ತಾರೆ—ಎಂದು ನಮ್ಮವರು

ಕೂಗಿದರೆ ಕೂಗಿಕೊಳ್ಳಲಿ, ಈ ಪರಸ್ಥಳದ ಜೀವನ ಸಾಕು, ಪರೀಕ್ಷೆ ಆಗದೆ ಹೋದರೆ ಪ್ರಪಂಚ ಮುಳುಗಿಹೋಗುವುದಿಲ್ಲ, ಊರಿಗೆ ಹೊರಟು ಹೋಗಿ ಬಿಡೋಣ ಎನ್ನಿಸಿತು. ಅದು ಮುಂದಿನ ಮಾತು. ಈಗ ಇವರ ಗತಿಯೇನು? "ಅಮ್ಮಾ ನೀವು ಹೆದರ ಬೇಡಿ; ಈ ರಸ್ತೆಯಲ್ಲಿಯೇ ಒಬ್ಬ ಡಾಕ್ಟರು ಇದ್ದಾನೆ, ಅವನ ಮನೆಗೆ ಹೋಗಿ ಔಷಧಿ ತಂದು ಕೊಡುತ್ತೇನೆ" ಎಂದು ಧೈರ್ಯ ಹೇಳಿ ಅದೇ ಲಾರ್ಟೆ ದೀಪವನ್ನು ತೆಗೆದುಕೊಂಡು ಮನೆಗೆ ಬಂದು ನಡೆದ ಸಂಗತಿಯನ್ನು ಸಂಕ್ಷೇಪವಾಗಿ ತಿಳಿಸಿ ಬಾಗಿಲು ಹಾಕಿಕೊಳ್ಳುವಂತೆ ಹೇಳಿ ಹೊರಟೆನು. ಆ ರಸ್ತೆಯಲ್ಲಿ ಸುಮಾರು ಹತ್ತು ಮಾರಿನ ಆಚೆ ಒಬ್ಬ ಡಾಕ್ಟರು ಇದ್ದನು. ಆತನ ದೊಡ್ಡ ಬೋರ್ಡು ಅಲ್ಲಿ ತಿರುಗಾಡುವಾಗೆಲ್ಲಾ ಕಣ್ಣಿಗೆ ಬೀಳುತ್ತಿತ್ತು. ಅವನು ಎಂ. ಡಿ. ಮುಂದುಗಡೆ ಷಾಪು, ಹಿಂದುಗಡೆ ಮನೆ. ಆದರೆ ಅದೂ ಮಹಡಿಯಮೇಲೆ, ಸರಿ ರಾತ್ರಿಯ ಹೊತ್ತು; ಆದ್ದರಿಂದ ಅವನನ್ನು ಕೂಗಿ ಎಬ್ಬಿಸುವುದು ಸ್ವಲ್ಪ ಶ್ರಮವೇ ಆಯಿತು. ಆದರೆ ಆತನು ಹೊರಡುವುದೇನು ತಡವಾಗಲಿಲ್ಲ. ಡಾಕ್ಟರು ಯಾವಾಗಲೂ ಸಿದ್ಧರೆ! ಒಂದು ಓವರ್‌ಕೋಟು ತಗಲುಹಾಕಿಕೊಂಡು ಕೈಯಲ್ಲಿ ಒಂದು ಚೀಲವನ್ನು ಹಿಡಿದುಕೊಂಡು "ನಡಿಯಿರಿ" ಎಂದನು. ನಮ್ಮ ವಟಾರದ ಮೆಟ್ಟಿಲುಗಳನ್ನು ಹತ್ತಿಹತ್ತಿಯೇ ಕಾಲು ಬಿದ್ದು ಹೋಗುತ್ತಿತ್ತು. ಆದರೆ ಈಗ ಅದೊಂದೂ ಗಮನಕ್ಕೆ ಬರುತ್ತಿರಲಿಲ್ಲ. ನೀನೇ ಎನ್ನುವವರು ಇಲ್ಲದೆ ದಿಕ್ಕು ತೋಚದಂತಿದ್ದ ಆ ಹೆಣ್ಣು ಹೆಂಗಸು, ಆ ಅರಿಯದ ಹುಡುಗಿ, ಸಂಸಾರದ ಕಷ್ಟಗಳಿಗೆಲ್ಲಾ ಒಬ್ಬನೇ ಎದೆ ಗೊಟ್ಟು ದುಡಿಯುತ್ತಿದ್ದು ಈಗ ಅಸಹಾಯನಾಗಿ ಪ್ರಜ್ಞೆ ಇಲ್ಲದೆ ಬಿದ್ದಿರುವ ಆತ—ಇವರ ಮುಖಗಳೇ ಮನಸ್ಸಿನಲ್ಲಿ ತುಂಬಿಕೊಂಡಿದ್ದುವು.

ಡಾಕ್ಟರು ಸ್ವಲ್ಪ ಹೊತ್ತು ರೋಗಿಯನ್ನು ಪರೀಕ್ಷಿಸಿದನು; ಅವನ ಮುಖಭಾವದಲ್ಲಿ ಶುಭ ಸೂಚನೆಯೇನೂ ತೋರಲಿಲ್ಲ, ಇನ್ನೂ ಪರೀಕ್ಷಿಸುತ್ತಿದ್ದ ಹಾಗೆಯೇ, "ಮೈಯಲ್ಲಿ ಎಲ್ಲಿಯಾದರೂ ಗಡ್ಡೆಯಾಗಿದೆಯೇ?" ಎಂದು ಕೇಳಿದನು. "ಇಲ್ಲ" ಎಂದು ಆಕೆ ಉತ್ತರ ಕೊಟ್ಟರು.

ಡಾಕ್ಟರು ಸ್ವಲ್ಪ ಸಂದೇಹಗ್ರಸ್ತನಾದವನಂತೆ ಮುಖವನ್ನು ದೃಷ್ಟಿಸಿ ನೋಡಿ ಅನಂತರ ಸಂದಿಸಂದಿಗಳನ್ನೆಲ್ಲಾ ಮುಟ್ಟಿ ನೋಡಿ ತೊಡೆಯಲ್ಲಿ ಗಡ್ಡೆಯಾಗಿದೆ ಎಂದು ತೋರಿಸಿದನು. ಇನ್ನು ಮುಂದೆ ನೋಡುವುದು ಅನಾವಶ್ಯಕವೆಂದು ತೋರಿತು. ಆತನು ಎದ್ದುನಿಂತು ಕೊಂಡು "ಇದು ಪ್ಲೇಗು; ಕೈಮೀರಿ ಹೋಗಿದೆ; ಆಗಲೇ ಶ್ವಾಸವು ಕಾಣಿಸಿಕೊಂಡಿದೆ" ಎಂದನು.

"ಹಾಗೆಂದರೆ ಹ್ಯಾಗೆ! ತಾವು ಹ್ಯಾಗಾದರೂ ಮಾಡಿ ಬದುಕಿಸಿ ಕೊಡಬೇಕು; ಇಲ್ಲದಿದ್ದರೆ ಹೆಂಗಸರು ಮಕ್ಕಳು ಅನಾಥರಾಗುತ್ತಾರೆ."

"ಏನು ಸ್ವಾಮಿ! ಓದಿದವರೆನ್ನಿಸಿಕೊಂಡವರು ನೀವೂ ಹೀಗೆ ಹೇಳುತ್ತೀರಿ; ಸಾಧ್ಯವಾದದ್ದಲ್ಲ, ಕೈಮೀರಿಹೋಗಿದೆ ಎಂದು ಹೇಳು ತ್ತಿದ್ದೇನೆ!—ನನಗೆ ಕೊಡಬೇಕಾದ ಫೀಜನ್ನು ಕೊಡುತ್ತೀರಾ?"

ನಾನು ಸುಬ್ಬಮ್ಮನವರ ಮುಖ ನೋಡಿ ಇವರ ಫೀಜನ್ನು ಕೊಡ ಬೇಕೆಂದು ಹೇಳಿದೆ; ಆಕೆಗೆ ಇಂಗ್ಲಿಷ್ ಬಾರದೆ ಅವನು ಹೇಳಿದ್ದು ಪೂರ್ತಿಯಾಗಿ ಅರ್ಥವಾಗದಿದ್ದರೂ ಅಶುಭವನ್ನು ಊಹಿಸಿ ತಿಳಿದು ಕೊಂಡು ಅಳುವುದು ಒಂದು ಉಳಿದಿತ್ತು; ಆ ಸಮಯದಲ್ಲಿ ದುಡ್ಡಿಗೆ ತಗಾದೆ ಬಂತು. ಯಜಮಾನನ ಟ್ರಂಕನ್ನು ತೆಗೆದು ನೋಡಲು ಏಳೆಂಟು ಬಿಡಿಗಾಸುಗಳೂ ಸ್ವಲ್ಪ ಚಿಲ್ಲರೆ ದುಡ್ಡೂ ಇದ್ದುವು. ಒಂದು ರೂಪಾಯಿ ಕೂಡ ಸಿಕ್ಕುವಂತಿರಲಿಲ್ಲ. ಇನ್ನು ಆಕೆಗೆ ಅಳು ತಡೆಯ ಲಾಗಲಿಲ್ಲ; ಬೀಗದ ಕೈಯನ್ನು ಕೆಳಗೆ ಹಾಕಿ ಗೋಳೋ ಎಂದು ಅಳುತ್ತ ಕುಳಿತಳು; ಮಲಗಿದ್ದ ಮಗುವು ಎದ್ದು ಅಳುತ್ತ ಕುಳಿತಿತು. ಇವರಿಬ್ಬರ ಅಳುವನ್ನು ನೋಡಿ ನನ್ನನ್ನು ಕರೆಯುವುದಕ್ಕೆ ಬಂದಿದ್ದ ಹುಡುಗಿಯೂ ಅಳುವುದಕ್ಕೆ ತೊಡಗಿದಳು.

ಇದನ್ನು ನೋಡಿ ಡಾಕ್ಟರು ನಾನು ಅವರಿಗೇನಾಗಬೇಕೆಂದು ಕೇಳಿದನು. ನನಗೇನೂ ಅವರು ಸಂಬಂಧವಿಲ್ಲವೆಂಬುದನ್ನೂ ಅಂದು ರಾತ್ರಿ ನಡೆದ ಸಂಗತಿಯನ್ನೂ ತಿಳಿಸಿದ ಮೇಲೆ ಆತನಿಗೆ ಸಂಬಳವೆಷ್ಟು ಬರುತ್ತಿತ್ತೆಂದು ಕೇಳಿದನು.

"ಐವತ್ತು ರೂಪಾಯಿ."

"ಐವತ್ತು ರೂಪಾಯಿನಲ್ಲಿ ಸಂಸಾರಮಾಡಿಕೊಂಡು ನೀವು ಡಾಕ್ಟರಿಗೆ ಏನು ಕೊಟ್ಟೀರಿ! ಚಿಂತೆಯಿಲ್ಲ, ನಾನು ಫೀಜು ತೆಗೆದು ಕೊಳ್ಳುವ ಜನರು ಬೇರೆ ಇದ್ದಾರೆ." ಎಂದು ಹೇಳಿ ಹೊರಟು ಹೋಗುತ್ತ ನನ್ನ ಕಡೆಗೆ ತಿರುಗಿ "ಇದು ಪ್ಲೇಗು ಎಂದು ತಿಳಿದರೆ ಶವವನ್ನು ಸಾಗಿಸುವುದು ಕಷ್ಟವಾಗುತ್ತದೆ; ಯಾರೂ ದಿಕ್ಕಿಲ್ಲ ಪಾಪ! ಹುಷಾರು! ಹುಡುಗರು ಮಕ್ಕಳಿದ್ದಾರೆ'' ಎಂದು ಹೇಳಿ ಹೊರಟು ಹೋದನು.

ಅಷ್ಟು ಹೊತ್ತಿಗೆ ಬೆಳಕು ಹರಿಯುತ್ತ ಬಂತು. ಸೂರ್ಯ ಉದಯ ವಾಗುವುದಕ್ಕೆ ಸ್ವಲ್ಪ ಮುಂಚೆ ವಸ್ತುವು ಹೋಗಿಬಿಟ್ಟಿತು. ನಾನು ಅದುವರೆಗೂ ಅಲ್ಲಿಯೇ ಇದ್ದು ಸುಬ್ಬಮ್ಮನವರಿಗೆ ಗಲಾಟೆ ಮಾಡದಂತೆ ವಿವೇಕ ಹೇಳಿ ಪುನಃ ಡಾಕ್ಟರ ಹತ್ತಿರಕ್ಕೆ ಹೋದೆನು.

"ಸ್ವಾಮಿ, ನನಗೆ ಈ ಊರಿನ ನಡೆವಳಿಕೆ ಸರ್ಕಾರಿ ರೂಲ್ಸು ಒಂದೂ ಗೊತ್ತಿಲ್ಲ; ಆತನು ತೀರಿ ಹೋದ; ಮುಂದೆ ಶವಸಂಸ್ಕಾರ ಹೇಗೆ ನಡೆಯಬೇಕೋ ತಿಳಿಯದು, ಆಕೆಗೆ ಯಾರೂ ಹತ್ತಿರ ದಿಕ್ಕಿಲ್ಲ, ನನ್ನ ಮನೆಯಲ್ಲಿ ನಾನು ಒಬ್ಬೊಂಟಿಗ. ಹೆಲ್ತ್ ಆಫೀಸಿನಿಂದ ಅಪ್ಪಣೆ ಯಾಗಬೇಕೋ ಏನೋ! ನನಗೆ ಏನೂ ತೋರುವುದಿಲ್ಲ. ತಾವೇ ಈ ಸಮಯದಲ್ಲಿ ಸಹಾಯ ಮಾಡಬೇಕು ''ಎಂದು ಕೇಳಿಕೊಂಡೆನು. ನನ್ನ ದೈನ್ಯವನ್ನು ನೋಡಿ ಆತನಿಗೆ ಮನಸ್ಸು ಕರಗಿತು ಎಂದು ತೋರುತ್ತದೆ. ದೊಡ್ಡ ಪಟ್ಟಣಗಳಲ್ಲಿ ದೊಡ್ಡ ಮನಸ್ಸಿನವರು ದೊರಕುವದು ಅಪರೂಪ. ದೊರಕಿದರೆ ದೇವರಂಥವರೇ ಸಿಕ್ಕುತ್ತಾರೆ. ಆತನು ಈ 'ರೋಗಿಯು ನನ್ನ ಹತ್ತಿರ ಔಷಧಿ ತೆಗೆದುಕೊಳ್ಳುತ್ತಿದ್ದು ಪ್ರಬಲವಾದ ಹೊಟ್ಟೆಯ ನೋವಿನಿಂದ ಮೃತನಾದನು' ಎಂದು ಸರ್ಟಿಫಿಕೇಟನ್ನು ಬರೆದು ಕೊಟ್ಟನು. ಅದಕ್ಕಾದರೂ ಆತನಿಗೆ ಫೀಜು ಕೊಡಬೇಕಾಗಿತ್ತು. ಆದರೆ ಎಲ್ಲಿ ತರುವುದು? ನಾನು ಯಾವಾಗಲೂ ಒಂದೇ! ದುಡ್ಡು ಬಂದ ಮಾರನೇ ದಿವಸವೇ ಪುರಂದರ ವಿಠಲ!

"ನಿನ್ನ ರುಮಾಲು ಅಡವು ಇಡಬೇಕಾಗಿತ್ತು!"

"ನನ್ನ ರುಮಾಲಿನ ಮೇಲೆ ನಿನಗೆ ಒಳ್ಳೆಯ ಕಣ್ಣಾಯಿತಲ್ಲ! ಆಗ ಇನ್ನೂ ರುಮಾಲೆಲ್ಲಿತ್ತೊ? ಫೆಲ್ಟ್ ಕ್ಯಾಪು.''

"ನೀನು ಟೋಪಿ ಹಾಕಿಕೊಳ್ಳುತ್ತಿದ್ದಾಗ ತಾನೇ ಕಡಮೆ ಖರೀದಿಯ ಟೋಪಿಯನ್ನು ಯಾವಾಗ ಹಾಕಿಕೊಳ್ಳುತ್ತಿದ್ದೆ? ಅದಿರಲಿ —ಆಮೇಲೆ?"

ಅದಕ್ಕೂ ಆತನು ಫೀಜು ಕೊಡಬೇಡವೆಂದೇ ಬಾಯಿಬಿಟ್ಟು ಹೇಳಿದ; ಆಮೇಲೆ ಅದನ್ನು ತೆಗೆದುಕೊಂಡು ಹೋಗಿ ಹೆಲ್ತಾಫೀಸಿನಲ್ಲಿ ತೋರಿಸಿ ಅಲ್ಲಿ ಕಾದು ತೆರಬೇಕಾದ ಋಣಗಳನ್ನು ತೆತ್ತು ಅವರ ಸರ್ಟಿಫಿಕೇಟನ್ನು ತಂದಾಯಿತು ಅಷ್ಟು ಹೊತ್ತಿಗೆ ಆಗಲೇ ಹತ್ತು ಗಂಟೆಯ ಸಮಯ; ಟ್ರಾಮ್ಯಂ ಗಾಡಿಗಳಲ್ಲಿ ಸ್ಕೂಲಿಗೆ ಹೋಗುವ ಹುಡುಗರೂ ಕಛೇರಿಗೆ ಹೋಗುವ ಜನರೂ ಗರುಡವಾಹನ ಮಾಡಿಕೊಂಡು ಹೋಗುತ್ತಿದ್ದಾರೆ—ಟ್ರಾಮ್ಯಂ ಗಾಡಿಗಳ ಹೊರಗಿನ ಕಟ್ಟೆಯ ಮೇಲೂ ನಿಲ್ಲುವುದಕ್ಕೆ ಜಾಗವಿಲ್ಲ. ಅವರ ಸಂದಣಿಯಲ್ಲೇ ನಾನೂ ನುಸಿದುಕೊಂಡು ಬರುತ್ತಾ ಆ ಗಾಡಿಯಲ್ಲಿ ಚೀಫ್‌ಕೋರ್ಟಿನ ಗುಮಾಸ್ತರೊಬ್ಬರನ್ನು ನೋಡಿದೆ. ಆತನಿಗೂ ನನಗೂ ಪರಿಚಯವೇನೂ ಇರಲಿಲ್ಲ; ಆತನನ್ನು ಹಿಂದೆ ಎಲ್ಲಿಯೋ ಮೈಸೂರು ದೇಶದಲ್ಲಿ ನೋಡಿದ ಜ್ಞಾಪಕ; ಆತನಿಗೂ ಅದೇ ಅನುಭವವಿರಬಹುದು; ಆದ್ದರಿಂದ ಕೋರ್ಟಿನಹತ್ತಿರ ಒಬ್ಬರನ್ನು ಒಬ್ಬರು ಕಂಡಾಗ ಒಬ್ಬರನ್ನೊಬ್ಬರು ದೃಷ್ಟಿಸಿ ನೋಡುತ್ತಿದ್ದೆವು. ಆತನನ್ನು ಕಂಡು ಮೊದಲು ಒಂದು ರಜದ ಚೀಟಿಯನ್ನು ಬರೆದುಕೊಟ್ಟು ಅಂದು ನಡೆದ ಸಂಗತಿಯನ್ನು ಸೂಕ್ಷ್ಮವಾಗಿ ತಿಳಿಸಿದೆ; ನನ್ನ ಮಾತನ್ನು ಕೇಳುತ್ತ ಕೇಳುತ್ತ ಆತನ ಮುಖವು ಇಳಿದು ಹೋಗಿ ಕೊನೆಗೆ "ಇರಲಿ ನೀವು ಮನೆಗೆ ಹೋಗಿ; ಆಕೆಗೆ ಸಮಾಧಾನ ಹೇಳುತ್ತಿರಿ; ಹೆಂಗಸರು ಮಕ್ಕಳು ಹೆದರಿಕೊಂಡಾರು; ನಾನು ಏರ್ಪಾಡುಮಾಡಿಕೊಂಡು ಬರುತ್ತೇನೆ" ಎಂದು ಹೇಳಿ ನನ್ನನ್ನು ಕಳುಹಿಸಿದನು. ನಾನು ಎಂದೂ ಇಂಥ ಕಷ್ಟಕ್ಕೆ ಸಿಕ್ಕಿದವನಲ್ಲ; ಅಲ್ಲಿಯವರೆಗೂ ಒಬ್ಬರೂ ಸತ್ತದ್ದನ್ನೇ ಕಣ್ಣಾರ ಕಂಡಿರಲಿಲ್ಲ; ಸಾಲದ್ದಕ್ಕೆ ಸ್ಥಳಪರಿಚಯ ಸಾಲದು. ನನ್ನ ಮಕ್ಕಳು ಹೆದರಿಕೊಂಡು ಹೊರಕ್ಕೆ ತಲೆಹಾಕದೇ ಕುಳಿತಿದ್ದು 'ಇವತ್ತು ನೀನೆಲ್ಲಿಯೂ ಹೋಗಬೇಡ ಅಣ್ಣ!' ಎಂದು ಕೇಳಿಕೊಳ್ಳುತ್ತಿದ್ದುವು.

ಪಾಪ, ಅವಕ್ಕೆ ತಿಳಿಯಹೇಳುವುದು ಹೇಗೆ? ಧೈರ್ಯಹೇಳುವುದು ಹೇಗೆ?

ಸುಮಾರು ಹನ್ನೆರಡು ಗಂಟೆಯ ಹೊತ್ತಿಗೆ ನಮ್ಮ ಕೋರ್ಟಿನ ಸ್ನೇಹಿತರು ಇಬ್ಬರ ಕೈಯಲ್ಲಿ ಶವಸಂಸ್ಕಾರಕ್ಕೆ ಬೇಕಾದ ಸಾಮಾನು ಗಳನ್ನು ತೆಗೆಸಿಕೊಂಡು ಬಂದರು. ದುಡ್ಡು ಒಂದು ಇಟ್ಟುಕೊಂಡಿದ್ದರೆ ಒಳ್ಳೆಯದಕ್ಕಾಗಲಿ ಕೆಟ್ಟದಕ್ಕಾಗಲಿ ದೊಡ್ಡ ಪಟ್ಟಣಗಳಲ್ಲಿ ಇರುವ ಅನುಕೂಲವು ಸಣ್ಣ ಹಳ್ಳಿಗಳಲ್ಲಿರುವುದಿಲ್ಲ. ಮೈಸೂರಿನಲ್ಲಿ ಪ್ಲೇಗು ಹೆಚ್ಚಾಗಿದ್ದಾಗ 'ಕನಕ ಬಟ್ಟನ ಕಂಪೆನಿ' ಎಂದು ಇಂಥ ಕೆಲಸಗಳಿಗೆ ಒಂದು 'ಕಂಪೆನಿಯು' ಏರ್ಪಾಡಾಗಿತ್ತು. . . .

"ಅದೇನು ಜಾಯಿಂಟ್ ಸ್ಟಾಕ್ ಕಂಪೆನಿಯೋ ಕೋ ಆಪರೇಟಿವ್ ಸೊಸೈಟಿಯೋ?"

"ನಿನ್ನ ಹುಡುಗಾಟ ಯಾವಾಗಲೂ ಒಂದೇ; ಹಾಸ್ಯಕ್ಕೆ ಹೊತ್ತೂ ವೇಳೆ ಯಾವುದೂ ಇಲ್ಲ ನಿನಗೆ!"

"ನೀನೇ ಅಲ್ಲವೋ ಕನಕಭಟ್ಟನ ಕಂಪೆನಿ ಎಂತ ಲೇವಡಿ ಮಾಡಿದವನು? ಆತ ನಿಜವಾಗಿಯೂ ಕಂಪೆನಿ ಇಟ್ಟದ್ದನೇ? ಪಾಪ ಆತನಿಂದ ಜನಕ್ಕೆ ಎಷ್ಟು ಉಪಕಾರವಾಯಿತು ಕಷ್ಟಕಾಲದಲ್ಲಿ!"

"ಅದು ಹೋಗಲಪ್ಪ—ಸರ್ವಾಪರಾಧಂ ಕ್ಷಮಸ್ವ! ಮದರಾಸಿನಲ್ಲಿಯೂ ಅಂಥ ಒಂದು ಕಂಪೆನಿಯಿತ್ತಂತೆ. ಯಾವಾಗ ಹೋದರೂ ಜನಗಳು ಸಿದ್ಧರಾಗಿರುತ್ತಿದ್ದರು. ನಮ್ಮ ಸ್ನೇಹಿತರು ಅಲ್ಲಿಗೆ ವರ್ತಮಾನವನ್ನು ಕೊಟ್ಟಕೂಡಲೆ ಇಬ್ಬರು ಮಾತ್ರ ಸಿಕ್ಕಿದರು ; ಅವರು ಬರುತ್ತಾ ಪೇಟೆಯಲ್ಲಿ ಸಾಮಾನನ್ನು ತೆಗೆದುಕೊಂಡು ಬಂದರು. ಇನ್ನಿಬ್ಬರಿಗಾಗಿ ಎಲ್ಲೆಲ್ಲೋ ಹುಡುಕಿದ್ದಾಯಿತು, ಯಾರೂ ಸಿಕ್ಕಲಿಲ್ಲ; ಕೊನೆಗೆ ನಮ್ಮ ಸ್ನೇಹಿತರು (ಅವರ ಹೆಸರು ಇಂದಿಗೂ ನನಗೆ ಗೊತ್ತಿಲ್ಲ) ಬಹಳ ಹೊತ್ತು ಯೋಚಿಸಿ 'ಗಾಡಿಯಲ್ಲಿ ಹಾಕುವ ಯೋಚನೆ ಬೇಡಿ ಸಾರ್! ನೀವೂ ಸ್ವಲ್ಪ ದೊಡ್ಡ ಮನಸ್ಸು ಮಾಡಿದರೆ ಬ್ರಾಹ್ಮಣನ ಶವವನ್ನು ಇತರರ ಕೈಲಿ ಮುಟ್ಟಿಸದ ಹಾಗೆ ಒಪ್ಪ ಮಾಡಿಬಿಡೋಣ!' ಎಂದರು. ನನಗೆ ಒಂದಕ್ಕಿಂತ ಒಂದು ವಿಚಿತ್ರವಾದ ಹೊಸ ಹೊಸ

ಅನುಭವ. ಅಂಥ ಅಪರಿಚಿತ ಮನುಷ್ಯ ಅಷ್ಟು ಮುಂದಾಳಾಗಿ ಬಂದರೆ ನಾನು ಹಿಂಜರಿಯುವುದಕ್ಕಾಗುತ್ತದೆಯೆ ?''

" ಈ ಇಬ್ಬರಲ್ಲಿ ಯಾರಿಗಾದರೂ ಮಂತ್ರಾಗ್ನಿ ಮಾಡಿಸುವುದಕ್ಕೆ ಬರುತ್ತದೆಯೋ?" ಎಂದು ನಾನು ಕೇಳಿದೆ.

" ಇಲ್ಲ, ಅವರು ಬರಿಯ ವಾಹಕರು; ವಡ್ಡರ ಗಾಡಿಯನ್ನು ಎಳೆಯುವ ಎತ್ತುಗಳ ಹಾಗೆ."

" ಯಾರಾದರೂ ಪುರೋಹಿತರು ಸಿಕ್ಕಿದರೆ ಮಂತ್ರಾಗ್ನಿಯನ್ನು ಮಾಡಿಸಿ ಬಿಡೋಣ ಸ್ವಾಮಿ ! ಅಲ್ಲಿಗೆ ನಮ್ಮ ಕೆಲಸ ಸಾಂಗವಾಗುತ್ತದೆ. ಮುಂದೆ ಅವರ ಜನರು ಬರುತ್ತಾರೆ; ಆಗ ಅವರ ಪಾಡು ! "

ಆತನು ಅದಕ್ಕೆ ಒಪ್ಪಿ ಪುನಃ ಹೊರಟನು ; ಬರುವುದಕ್ಕೆ ನಾಲ್ಕು ಗಂಟೆಯಾಯಿತು. ಟ್ರಿಪ್ಲಿಕೇಣಿಗೆ ಹೋಗಿ ಅಲ್ಲಿ ಇಲ್ಲವೆನ್ನಿಸಿಕೊಂಡು ಮೈಲಾಪುರಕ್ಕೆ ಹೋಗಿ ಅಲ್ಲಿ ಯಾರ ಮನೆಗೋ ಎಳ್ಳು ಹಬ್ಬಕ್ಕೆ ಸಿಕ್ಕಿಕೊಂಡಿದ್ದ ಪುರೋಹಿತರನ್ನು ಎಳೆದುತರಬೇಕಾಯಿತು. ಅವರು ಬರಲೊಲ್ಲರು, ಈತ ಬಿಡಲೊಲ್ಲ. ಅಂತು ಆತ ಬಂದು ಮಂತ್ರಪೂರ್ವಕವಾಗಿ ಬೆಂಕಿಯನ್ನು ಹಾಕಿಸಿಬಿಟ್ಟ.!

" ಅದನ್ನು ಮಾಡಿದವರು ಯಾರು ? "

" ನಾವೇ ! ಪರಸ್ಥಳದಲ್ಲಿ ಮತ್ತಾರನ್ನು ತರೋಣ ? ಇಷ್ಟೆಲ್ಲಾ ಮಾಡಿದವರು ಅಷ್ಟು ಮಾಡಬಾರದೇನು ?''

" ಹತ್ತಿರ ಯಾರಾದರೂ ನೆಂಟರಿಷ್ಟರಿದ್ದರೆ ಟೆಲೆಗ್ರಾಂ ಕೊಟ್ಟು ಕರೆಸಬೇಕಾಗಿತ್ತು ! "

" ಟೆಲಗ್ರಾಂ ಏನೋ ಬೆಳಗ್ಗೆಯೇ ಕೊಟ್ಟುಬಿಟ್ಟಿದ್ದೆ : ಆದರೆ ಹತ್ತಿರ ಯಾರೂ ಇರಲಿಲ್ಲ; ಅವರೆಲ್ಲ ಮೂರನೇ ದಿನ ಬಂದರು ; ಕಷ್ಟಕಾಲಕ್ಕೆ ಯಾರೂ ಇಲ್ಲ ಶ್ರೀಪತಿ ! ಇಲ್ಲಿ ನೋಡುತ್ತಿದ್ದೇನಲ್ಲಾ, ಅವರ ಬಳಗವೋ ಇರುವೆ ಗೂಡಿನ ಹಾಗಿದೆ. ಕಷ್ಟಕಾಲಕ್ಕೆ ಮಾತ್ರ ಅಣ್ಣನೂ ಇಲ್ಲ, ತಮ್ಮನೂ ಇಲ್ಲ; ತಾಯಿಯೂ ಇಲ್ಲ, ತಂದೆಯೂ ಇಲ್ಲ; ಅದಕ್ಕೂ ಋಣಾನುಬಂಧ ಬೇಕು ! ಅಂತು ಅವತ್ತು ಅದನ್ನೆಲ್ಲಾ ನೋಡಿ " ದೇವರು ಇದ್ದಾನೆ '' ಎನ್ನಿಸಿಬಿಟ್ಟಿತು !

" ಅದು ಸರಿ, ಡಾಕ್ಟರಿಗೆ ಕೊಡುವುದಕ್ಕೇ ದುಡ್ಡಿಲ್ಲವೆಂದೆಯಲ್ಲ, ಇದೆಲ್ಲಾ ಹ್ಯಾಗೆ ನಡೆಯಿತು ?''

" ಹೌದು ಹೌದು ನೋಡಿದೆಯಾ! ಮುಖ್ಯವಾದದ್ದನ್ನೇ ಮರೆತೆ; ನಮ್ಮ ಕೋರ್ಟಿನ ಸ್ನೇಹಿತರು ಮನೆಗೆ ಹೋಗಿಬರುತ್ತ, ನಲವತ್ತು ರೂಪಾಯಿಗಳನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಬಂದು ನನ್ನ ಕೈಲಿ ಹಾಕಿದರು. ನಿಮ್ಮ ಹತ್ತಿರ ದುಡ್ಡು ಇದೆಯೇ ಇಲ್ಲವೇ ಎಂದು ಕೂಡ ಕೇಳಲಿಲ್ಲ. ನನಗೆ ಆಶ್ಚರ್ಯವಾಯಿತು; ಆತನೇನು ಪೂರ್ವಜನ್ಮದಲ್ಲಿ ಅಣ್ಣನೋ ತಮ್ಮನೋ ಆಗಿದ್ದನೆಂದು ತೋರುತ್ತದೆ!"

"ಭಲೆ!....ಆಮೇಲೆ ನೀನು ಮದರಾಸಿನಲ್ಲಿ ಎಷ್ಟು ದಿವಸವಿದ್ದೆ?"

" ಆಗ ಪರೀಕ್ಷೆಯ ಕಾಲವೆಂತ ಹೇಳುತೇನೆ! ಎಷ್ಟು ದಿವಸ ವಾದರೂ ಯಾಕೆ ಇರಬೇಕಾಗಿತ್ತು? ಬೆಳಗೆದ್ದರೆ ಪರೀಕ್ಷೆ; ಆದ್ದರಿಂದ ಬಿಟ್ಟು ಎಲ್ಲಿಗೂ ಹೋಗುವದಕ್ಕೆ ಆಗಲಿಲ್ಲ. ಆಮೇಲೆ ನಮ್ಮ ಮನೆ ಯಲ್ಲಿಯೂ ಇಲಿಗಳು ಬೀಳುವುದಕ್ಕೆ ಆರಂಭವಾದುವು; ನಿಂತ ನಿಂತ ಹಾಗೆ ಹೆಂಗಸರು ಮಕ್ಕಳನ್ನು ಊರಿಗೆ ಕಳುಹಿಸುವುದಕ್ಕಾಗಲಿಲ್ಲ; ಮನೆಯನ್ನು ಬಿಟ್ಟುಹೋಗುವದಕ್ಕೆ ಅವಕಾಶವಿಲ್ಲ; ಈ ಮನಸ್ಸಿನ ಕಳವಳದಲ್ಲಿ ಓದೂ ಸಾಗಲಿಲ್ಲ; ಏನೋ ಆದದ್ದು ಆಗಲಿ ಎಂದು ದೇವರ ಮೇಲೆ ಭಾರಹಾಕಿ ಮೊಂಡಾಟ ಮಾಡಿಕೊಂಡು ಅಲ್ಲಿಯೇ ಇದ್ದುಬಿಟ್ಟೆ; ಪರೀಕ್ಷೆಗೆ ಹೋಗಲೇ ಬೇಡವೇ ಎಂದು ಯೋಚನೆ ಮಾಡಿ ಕೊನೆಗೆ ಹೋಗಿ ಕುಳಿತೆ; ಪ್ಯಾಸೇನೋ ಆಯಿತು! ನನ್ನ ಪರೀಕ್ಷೆ ಮುಗಿಯುವುದರೊಳಗಾಗಿ ಅಲ್ಲಿ ಖಾಯಿಲೆ ಇಲ್ಲಿ ಖಾಯಿಲೆ ಎಂದು ಖಾಯಿಲೆಯು ಹರಡಿಕೊಂಡು ಸಾವುಗಳು ಹೆಚ್ಚಿಹೋಗಿದ್ದುವು. ನಾವು ಮಾತ್ರ ಒಂದು ತಲೆನೋವು ಮೂಗುನೋವೆನ್ನದೆ ಪಾರಾ ದೆವು; ದೇವರು ಅಂದಿಗೆ ಕೈಹಿಡಿದು ಕಾಪಾಡಿದ! ಪರೀಕ್ಷೆ ಮುಗಿದ ಮಾರನೇ ದಿನವೇ ಊರಿಗೆ ಹೊರಟುಬಿಟ್ಟೆವು.''

ಕಥೆಯನ್ನು ಕೇಳಿದಾಗ '' ದೇವರು ಇರುವುದಕ್ಕೂ ಇದೆಲ್ಲಕ್ಕೂ ಏನು ಸಂಬಂಧ" ಎಂಬ ತರ್ಕವು ನನಗೆ ತೋರಲಿಲ್ಲ. ಸಂಬಂಧವಿದ್ದರೆ ಇರಲಿ ಇಲ್ಲದಿದ್ದರೆ ಹೋಗಲಿ, ಇಂಗ್ಲಿಷ್ ಓದಿದವರ ಬಾಯಲ್ಲಿ ಅಷ್ಟು

ಹೊರಡುವುದೂ ಹೆಚ್ಚೇ; ಅಷ್ಟುಮಟ್ಟಿಗೆ ಹೃದಯದಲ್ಲಿ ಅನುಭವವಾದರೆ ಅದು ದೇವರನ್ನು ನೋಡಿದ್ದಕ್ಕಿಂತ ಹೆಚ್ಚೂನೂವೆ !

ಪ್ರಾಯಶಃ ಅದನ್ನೂ ಆಗಲೇ ಪ್ರಶ್ನೆಮಾಡಿ ವೆಂಕಟೇಶಯ್ಯನನ್ನು ಕೆಣಕಿ ಸ್ವಲ್ಪ ರೇಗಿಸುತ್ತಿದ್ದೆ, ಆದರೆ ಅಷ್ಟು ಹೊತ್ತಿಗೆ ಬೀದಿಯಲ್ಲಿ 'ಚಪ್ಪರದ ದ್ರಾಕ್ಷೇ ಹಣ್ಣೋ!' ಎಂಧು ಒಬ್ಬ ಹಣ್ಣಿನವನು ಕೂಗುತ್ತ ಬಂದನು. ನನ್ನ ತಂಗಿ ಲಲಿತೆ ಎಲ್ಲಿಯೋ ಆಡುತ್ತಿದ್ದವಳು ಅದನ್ನು ಕೇಳಿ ಓಡಿ ಬಂದು 'ಅಣ್ಣಯ್ಯ, ಚಪ್ಪರದ್ರಾಕ್ಷೀ ಹಣ್ಣು ಬಂದಿದೆ ಕೊಡಿಸು ಅಣ್ಣಯ್ಯ' ಎಂದು ಹಟಮಾಡಿಕೊಂಡು ಹಾಂ ಎಂದು ಹೂಂ ಎಂದು ಅತ್ತು ಕರೆದು ಹೆಗಲಿನ ಮೇಲೆ ಗುದ್ದಿ ಬೆನ್ನ ಮೇಲೆ ಹೊಡೆದು ತೊಡೆಯ ಮೇಲೆ ಬಿದ್ದು ಚಾಪೆಯಮೇಲೆ ಹೊರಳಾಡಿ ರಗಳೆಯೋ ರಗಳೆ ಮಾಡಿ ಬಿಟ್ಟಳು. ವಿಧಿಯಿಲ್ಲದೆ ಎದ್ದುಬಿಡಬೇಕಾಯಿತು.

೧೯೨೬. ಶ್ರೀಪತಿ.

---

# ನಾಗರ ಪಂಚಮಿ

ನಾಗರಪಂಚಮಿಯಾದ ಬೆಳಗ್ಗೆ ಅಗ್ರಹಾರದ ಕಡೆಗೆ ಹೋಗ ಬೇಕಾಗಿತ್ತು. ಅಗ್ರಹಾರದಲ್ಲಿಯೇ ನನ್ನ ತಂಗಿಯ ಮನೆ. ಆದ್ದ ರಿಂದ ಹಾಗೇ ಅವಳನ್ನೂ ನೋಡಿಕೊಂಡು ಬರೋಣವೆಂದು ಹೋದೆ. ನನ್ನನ್ನು ಕಂಡದ್ದೇ ತಡ, ಅವಳು ಕಣ್ಣೀರು ತಂದುಕೊಂಡಳು. ಹೆಂಗ ಸರ ಜನ್ಮವೇ ಹೀಗೆಂದು ತೋರುತ್ತದೆ. ಇದ್ದರೆ ದೇವಿಯರಂತೆ ಸ್ವರ್ಗ ಸುಖದಲ್ಲಿರುತ್ತಾರೆ, ಇಲ್ಲದಿದ್ದರೆ ಅವರ ಬಾಳು ನಾಯಿಯ ಬಾಳು! ಅದೂ ಅಲ್ಲದಿದ್ದರೆ, ಅನುಕೂಲವಿದ್ದರೂ ಅನುಭವಿಸುವುದಕ್ಕೆ ಪ್ರಾಪ್ತಿ ಯಿಲ್ಲದೆ ಅಶಿಕ್ಷೆಯಿಂದಲೂ ಅವಿವೇಕದಿಂದಲೂ ಮುಳ್ಳುಪೊದೆಯಂತೆ ಇರುತ್ತಾರೆ. ತಮಗೆ ಹಿತವಿಲ್ಲ, ಮತ್ತೊಬ್ಬರಿಗೆ ಸುಖವಿಲ್ಲ; ಅಂತೂ ಯಾವಾಗಲೂ ಗೋಳಾಡುತ್ತಿರುವವರೇ ಹೆಚ್ಚು ಜನ.

ನನ್ನ ತಂಗಿಯು ಅದೃಷ್ಟವಂತೆಯಲ್ಲ. ಅವಳ ಜೀವನದಲ್ಲಿ ಅರುಣೋದಯವಾಗಿ ಸೂರ್ಯನು ಹುಟ್ಟುವ ಸೂಚನೆಗಳು ಕಂಡು ಅಕಸ್ಮಾತ್ತಾಗಿ ಮಧ್ಯರಾತ್ರಿ ಬಂದುಬಿಟ್ಟಿತು. ಅವಳನ್ನು ಒಳ್ಳೆಯ ಕಡೆಗೇ ಕೊಟ್ಟಿತ್ತು. ಗಂಡನು ಬಿ.ಎ. ಆನರ್ಸ್ ಪ್ಯಾಸುಮಾಡಿ ಕೆಲಸ ಸಿಕ್ಕದೆ ಲಾ ಪರೀಕ್ಷೆಯನ್ನು ಪ್ಯಾಸುಮಾಡಿ ಬಂದು ಲಾಯರಾಗ ಬೇಕೆಂದು ಬೊಂಬಾಯಿಗೆ ಹೋಗಿ ಕ್ಷಯರೋಗಕ್ಕೆ ತುತ್ತಾದನು. ಮನೆ ಯಲ್ಲಿ ಅತ್ತೆ ಮಾವಂದಿರು ಯಾರೂ ಇಲ್ಲ. ಒಂದು ಮನೆ, ಸ್ವಲ್ಪ ಜಮೀನು, ಅಲ್ಪ ಸ್ವಲ್ಪ ಒಡವೆ, ಇಷ್ಟು ಮಾತ್ರ ಇತ್ತು. ಅರಿಸಿನ ಕುಂಕುಮವೂ ಅದೃಷ್ಟವೂ ಮಾತ್ರ ಇರಲಿಲ್ಲ. ಜನ, ಇನ್ನೇನು ಅಣ್ಣನ ಮನೆ ಸೇರಿಕೋತಾಳೆ ಎಂದರು. ನಮ್ಮ ದೇಶದ ವಿಧವೆಯರ ಹಣೆಯಬರಹವೇ ಹೀಗಾಗಿದೆ. ಗಂಡನೆಂಬ ವಸ್ತು ಇರುವವರೆಗೂ ಅವನು ಹೇಗೋ ದುಡಿದು ತಂದು ಹಾಕುತ್ತಾನೆ. ಆಗ ಅವರ ಹೆಮ್ಮೆ ಹಿಡಿಯುವಂತಿರುವುದಿಲ್ಲ. ಅವನು ಕಣ್ಣು ಮುಚ್ಚಿಕೊಂಡನೆಂದರೆ ಅವರ ಪಾಡು ಅಡಿಗೆಯ ಪರಿಚಾರಿಕೆ. ಹೀಗೆಯೇ ಇದ್ದರೆ ಎಲ್ಲರೂ

ಬದುಕಿಯಾರೇ? ಯಜಮಾನಿಕೆಯೋ ಅಂತಃಕರಣವೋ ಏನೋ ಒಂದು ಹತ್ತಿಕೊಂಡು ಅವರಿಗೆ ಈ ಭಾವವು ಯಾವಾಗಲೂ ಇರುವುದಿಲ್ಲ. ಹೀಗೆ, ನನ್ನ ತಂಗಿಯೂ ನಮ್ಮ ಮನೆ ಸೇರುತ್ತಾಳೆಂದು ಎಲ್ಲರೂ ಅಂದುಕೊಂಡಿದ್ದರು. ಆದರೆ ಅವಳು ಅಣ್ಣನ ಮನೆ ಸೇರಿ ಅತ್ತಿಗೆ ಕೈಲಿ ಅನುಭವಿಸುವದಕ್ಕಿಂತ ದೂರ ಇದ್ದು ದುರ್ಜನವಾಗುವುದು ಒಳ್ಳೇದೆಂತ ಕಂಡುಕೊಂಡು ತನ್ನ ಮನೆಯಲ್ಲಿಯೇ ಇದ್ದುಬಿಟ್ಟಳು. ಈಗ ಮನೆಯನ್ನು ಬಾಡಿಗೆಗೆ ಕೊಟ್ಟು ಒಂದು ಕೊಟಡಿಯಲ್ಲಿ ತಾನು ಇದ್ದುಕೊಂಡಿದ್ದಾಳೆ. ಮನೆಯಲ್ಲಿರುವವರು, ಪುಣ್ಯಕ್ಕೆ, ಯೋಗ್ಯರು. ಹೆಂಗಸರೂ ಹುಡುಗರೂ ಹಿತವಾಗಿದ್ದಾರೆ. ನಾನು ಆಗಾಗ್ಯೆ ಆಕಡೆಗೆ ಹೋಗಿ ನೋಡಿಕೊಂಡು ಇಲ್ಲದ್ದು ಉಂಟಾದ್ದು ವಿಚಾರಿಸಿಕೊಂಡು ಬರುವುದುಂಟು.

ಎಂದಿನಂತೆ ಇವೊತ್ತೂ ಹೋಗಲು ನನ್ನನ್ನು ಕಂಡಕೂಡಲೆ ಅವಳಿಗೆ ಹಿಡಿಸಲಾರದಷ್ಟು ದುಃಖ ಬಂದುಬಿಟ್ಟಿತು. ದುಃಖವನ್ನು ತಡೆದುಕೊಂಡಳು. ಅದರಿಂದ ಕಣ್ಣೀರು ಸುರಿಯದೆ ಕಣ್ಣು ಕೆಂಪಾಯಿತು. ಮಾತೇ ಹೊರಡದು. "ಯಾಕಮ್ಮಾ ಅಳುತ್ತೀಯೆ? ಏನಾಯಿತು?" ಎಂದು ಕೇಳಿದೆ. ಹುಡುಗಿ ಚಿಕ್ಕವಳಾದರೂ ಬಹು ತಿಳಿವಳಿಕೆಯ ಹುಡುಗಿ. ನನ್ನ ತಂಗಿಯೆಂಬ ಅಭಿಮಾನದಿಂದ ಹೇಳುವ ಮಾತಲ್ಲ; — 'ನನ್ನ ಪ್ರಾಪ್ತಿ ಇಷ್ಟು, ದೇವರ ಇಚ್ಛೆ ಹೀಗಿತ್ತು' ಎಂದು ಹೇಗೋ ಹಾಗೆ ಸೈರಿಸಿಕೊಂಡಿರುವುದೇ ಹೊರತು ಬಾಯಿಬಿಟ್ಟು ಒಬ್ಬರ ಕೈಲಿ ತನ್ನ ಅವಸ್ಥೆ ಹೀಗಾಯಿತೆಂದಾಗಲಿ ಮತ್ತೊಬ್ಬರು ತನಗೆ ಸಹಾಯ ಮಾಡಲಿಲ್ಲವೆಂದಾಗಲಿ, ಆಕ್ಷೇಪಿಸಿದರೆಂದಾಗಲಿ, ಅವಳು ಹೇಳಿಕೊಂಡವಳಲ್ಲ; ಮತ್ತೊಬ್ಬರೆದುರಿಗೆ ಅತ್ತವಳೂ ಅಲ್ಲ. ಆದರೆ ಅಷ್ಟೊ ಅಷ್ಟು ಅವಳಿಗೆ ದುಃಖವಿತ್ತೆಂದೂ ಅದರಿಂದ ಅವಳು ದಿನೇ ದಿನೇ ಕಂದಿ ಹೋಗುತ್ತಿದ್ದಳೆಂದೂ ನನಗೆ ಗೊತ್ತು. ಅಳುವನ್ನಾದರೂ ಕೇಳಬಹುದು, ಈ ಸೊರಗಾಟವನ್ನು ನೋಡುವುದು ಕಷ್ಟ. (ಹೂವನ್ನು ಹರಿದಾದರೂ ಹಾಕಬಹುದು ಅದು ಕಂದಿ ಹೋಗುವದನ್ನು ನೋಡುವುದು ಕಷ್ಟ.)

"ಯಾಕಮ್ಮಾ?" ಎಂದು ಕೇಳಿದೆ.

"ಏನೂ ಇಲ್ಲಪ್ಪ. ಬಾ ಕೂತುಕೋ" ಎಂದು ಕಣ್ಣೀರನ್ನು ಒರಸಿಕೊಂಡು ಒಳಕ್ಕೆ ಕರೆದಳು. ಅಡಿಗೆಮನೆ ಉಗ್ರಾಣ ನಡುಮನೆ ಮಲಗುವ ಮನೆ ಎಲ್ಲಾ ಅದು ಒಂದು ಕೋಣೆಯೇ. ಹೋಗಿ ಕುಳಿತು ಕೊಂಡೆ; ಆದರೆ ಅವಳ ದುಃಖಕ್ಕೆ ಏನು ಕಾರಣವಿರಬಹುದೆಂದು ಯೋಚಿಸಲಾರದೆ ಹೋದೆ; ಆ ವಯಸ್ಸಿನ ಹೆಂಗಸಿಗೆ ಎಷ್ಟು ಕಷ್ಟ ಬರಬಹುದೋ ಅದೆಲ್ಲವೂ ಅವಳಿಗೆ ಒಟ್ಟಿಗೆ ಬಂದುಬಿಟ್ಟಿತ್ತು. ಆಗಲೂ ಅವಳು ಹೀಗೆ ಅತ್ತದ್ದನ್ನು ನೋಡಿರಲಿಲ್ಲ. ಮುಖವನ್ನು ಸ್ವಲ್ಪ ಮುಚ್ಚಿಕೊಂಡು ಉಗುಳು ನುಂಗುತ್ತ ನಿಂತುಕೊಂಡಿದ್ದಳು. ನಾನು ಎದ್ದು ಹೋಗಿ ಕಣ್ಣೀರನ್ನು ಒರಸಿ ಹತ್ತಿರ ಕೂರಿಸಿಕೊಳ್ಳೋಣವೆನ್ನಿಸಿತು. ಆದರೆ ಆ ಕಾಲ ಹೋಯಿತು. ಅವೆಲ್ಲಾ ಹುಡುಗತನದಲ್ಲಿ ಕಚ್ಚಾಡುತ್ತ ಸಮಾಧಾನ ಮಾಡುತ್ತ ಇದ್ದ ಕಾಲಕ್ಕೇ ಆಗಿ ಹೋಯಿತು. ವಯಸ್ಸಾದಮೇಲೆ ನಮ್ಮಲ್ಲಿ ಅಣ್ಣತಂಗಿಯರು ಬೇರೆ; ಬೆನ್ನಲ್ಲಿ ಬಿದ್ದವರೂ ಅಲ್ಲ ಒಡಹುಟ್ಟಿದವರೂ ಅಲ್ಲ. ಒಬ್ಬರನ್ನೊಬ್ಬರು ಮುಟ್ಟು ವುದಕ್ಕುಂಟೇ? ಧಾರಾಳವಾಗಿ ಮಾತುಕಥೆಗಳಾಡುವುದಕ್ಕುಂಟೆ?

"ಇದ್ಯಾಕಮ್ಮ, ಎಂದೂ ಇಲ್ಲದ್ದು ಇವತ್ತು ಇಷ್ಟು ದುಃಖ?" ಎಂದು ಪುನಃ ಕೇಳಿದೆ.

"ಏನೂ ಇಲ್ಲ ಅಣ್ಣಯ್ಯ; ಸುಮ್ಮನೆ." ಎಂದಳು. ಇಂಥ ಸಂದರ್ಭ ಗಳಲ್ಲಿ ಕಾರಣವನ್ನು ಹೇಳದಿರುವುದು, ಕಾರಣವಿಲ್ಲದಿರುವುದರಿಂದಲ್ಲ, ಕಾರಣವು ಬಲವತ್ತರವಾಗಿ ಸಹಿಸಲಸಾಧ್ಯವಾಗಿ, ಹೇಳಲಾರದಂತಿರು ವುದರಿಂದ.

"ಸುಮ್ಮನೆ ಅಳುತೀಯಾ, ಏನೋ ಇರಬೇಕು; ಏನು ಸಮಾ ಚಾರ, ಹೇಳು".

"ಏನೂ ಇಲ್ಲಪ್ಪ, ನಿನ್ನ ನೋಡಬೇಕೆಂದಿದ್ದೆ; ಬಂದೆಯಲ್ಲ ಅಷ್ಟೇ."

"ನಾನು ಬಂದರೆ ಯಾಕೆ ಅಳಬೇಕು? ನೀನು ಹೇಳುವದೇನೋ ನನಗೆ ಗೊತ್ತಾಗುವದಿಲ್ಲ."

"ಹೌದಣ್ಣಯ್ಯ, ನಿನ್ನೆ ದಿನ ನೋಡಬೇಕೂಂತಿದ್ದೆ; ಇವತ್ತಾ

ದರೂ ನೋಡಿದ್ದಾಯಿತು; ನಾಗರಪಂಚಮಿಯುಲ್ಲದಿದ್ದರೆ ಶ್ರೀಯಾಳ ಷಷ್ಠಿಯಾಯಿತು; ಇದೂ ಗಂಡಸರ ಹಬ್ಬವೇ!"

"ಯಾಕಮ್ಮ, ನಿನ್ನೆ ನನ್ನಿಂದ ಏನು ಕೆಲಸವಾಗಬೇಕಾಗಿತ್ತು?"

"ಏನೂ ಇಲ್ಲಪ್ಪ, ನನಗೆ ಏನು ಕೆಲಸವಾಗಬೇಕು! ನಿನ್ನೆದಿನ ನಾಗರಪಂಚಮಿಯಾಯಿತಲ್ಲಾ, ಹಿಂದಿನದೆಲ್ಲಾ ಜ್ಞಾಪಕಕ್ಕೆ ಬಂತು. ಹೋದವರ್ಷ ಅಪ್ಪ ಇದ್ದ, ನಾನೂ ಹೀಗಿರಲಿಲ್ಲ. ಎಲ್ಲರೂ ಒಂದುಕಡೆ ಸೇರಿ ಹಬ್ಬಮಾಡಿದೆವು. ಈ ವರ್ಷ ಹೀಗಾಯಿತು. ಇದನ್ನು ನೆನಸಿ ಕೊಂಡು ಒಲೆಯಮೇಲೆ ಎಸರು ಇಟ್ಟಿದ್ದವಳು ಏನೂ ತೋರದೆ ಹಾಗೇ ತಲೇಮೇಲೆ ಕೈಹೊತ್ತುಕೊಂಡು ಕೂತು ಬಿಟ್ಟೆ. ಇದು ಒಡಹುಟ್ಟಿದವರ ಹಬ್ಬ; ಅಣ್ಣಯ್ಯನ ಮನೆಗಾದರೂ ಹೋಗಿ ನೋಡಿಕೊಂಡು ಬರಲೆ? ನನಗೆ ನೀನೇ ಎನ್ನುವರು ಮತ್ತೊಬ್ಬರು ಇಲ್ಲ ಎನ್ನಿಸಿತು..."

"ಹಾಗಾದರೆ ನಮ್ಮ ಮನೆಗೆ ನೆಟ್ಟಗೆ ಬಂದುಬಿಡಬೇಕಾಗಿತ್ತು! ನನಗೂ ತೋರಿತು ಶಾರದಾ, ನಿನ್ನನ್ನು ಕರೆದುಬರಬೇಕು ಅಂತ; ಹೇಳಿ ಕಳುಹಿಸೋಕೆ ಯಾರೂ ಸಿಕ್ಕಲಿಲ್ಲ; ಸಾಲದ್ದಕ್ಕೆ ಅವಳೂ ಒಳಗಿರ ಲಿಲ್ಲ. ಬೆಳಗ್ಗೆ ಬೇರೆ ಆಫೀಸು; ಹ್ಯಾಗೋ ಅವಕಾಶ ಮಾಡಿಕೊಂಡು ಬರಬಹುದಾಗಿತ್ತು.....ಆಮೇಲೆ ಇನ್ನೂ ಏನೇನೋ ಯೋಚನೆ ಬಂದು ಬಿಟ್ಟುಬಿಟ್ಟೆ."

"ನನಗೆ ಗೊತ್ತಿಲ್ಲವೇನಪ್ಪ! ನನ್ನ ಹಣೆಯ ಬರಹವಂತೂ ಇಲ್ಲದೆ ಹೀಗಾಯಿತು; ನಿನ್ನ ಅದೃಷ್ಟವು ಇದ್ದೂ ಹೀಗಾಗಿದೆ; ಯಾರಿಗೂ ಸುಖವಿಲ್ಲ; (ಸ್ವಲ್ಪಹೊತ್ತು ಸುಮ್ಮನಿದ್ದು) ಆ ಬೀದಿ ಯಿಂದ ಸುಬ್ಬಮ್ಮನವರು ಬಂದು ಹೇಳಿದರು, ಅತ್ತಿಗೆ ಒಳಗಿಲ್ಲ ಅಂತ...."

"ಯಾವ ಸುಬ್ಬಮ್ಮನವರು?"

"ಅಲ್ಲಿ ನಿಮ್ಮ ಮನೆಯ ಹಿಂದಿನ ಸಾಲಿನಲ್ಲಿದ್ದಾರೆ ಒಬ್ಬರು ಸುಬ್ಬಮ್ಮನವರು ಅಂತ; ತಾಯಿ ಮಕ್ಕಳು ಇಬ್ಬರು ಇದ್ದಾರೆ; ಹುಡುಗ ಓದುತಾನಂತೆ."

"ಯಾರೋ ನಾ ಕಾಣೆ."

" ಅವರು ಹೇಳಿದರು—ಅತ್ತಿಗೆನ್ನ್ಮ ಒಳಗಿಲ್ಲ ಅಂತ; ಆಮೇಲೆ ತೋರಿತು ಇಲ್ಲಿ ಅಡಿಗೆಮಾಡುವುದು ಅಲ್ಲಿಗೇ ಬಂದು ಮಾಡೋಣ; ನೀನು ಆಫೀಸಿನಿಂದ ಬಂದು ಹನ್ನೆರಡು ಗಂಟೆಯ ಮೇಲೆ ಸಾಮಾನು ಗಳನ್ನು ಸಂವರಿಸಿಕೊಂಡು ನಾಗಪ್ಪನ ಪೂಜೆ ಮಾಡಿ ಕೈಸುಟ್ಟುಕೊಂಡು ಅನ್ನ ತಿನ್ನಬೇಕಲ್ಲಾ; ಪಾಪ ಹುಡುಗರು ತಾನೇ ಅಷ್ಟು ಹೊತ್ತು ಉಣ್ಣದೆ ತಿನ್ನದೆ ಹ್ಯಾಗೆ ಇರುತ್ತವೆ—ಅಂತ. ಮಕ್ಕಳನ್ನು ನೋಡ ಬೇಕು ಅಂತ ಆಶೆಯಾಯಿತು ಅಣ್ಣಯ್ಯ! ಎದುರು ಮನೆ ಶೇಷಪ್ಪ ನವರ ಮನೆಗೆ ಅವರ ಭಾವ ಬಂದಿದಾರೆ; ಅವರಿಗೆ ಅಸಿಸ್ಟೆಂಟರ ಕೆಲಸವಂತೆ, ಐನೂರು ರೂಪಾಯಿ ಸಂಬಳವಂತೆ; ಇನ್ನೊಬ್ಬ ತಂಗೀನೂ ಈ ಊರಿಗೇ ಕೊಟ್ಟಿದೆ. ಅವಳನ್ನೂ ಕರೆಸಿಕೊಂಡಿ ದ್ದಾರೆ! ನಿನ್ನೆ ಒಂದು ದಿನ ರಜಾ ತೆಗೆದುಕೊಂಡು ಬೆಂಗಳೂರಿನಿಂದ ಇದೇ ಕೆಲಸಕ್ಕಾಗಿ ಬಂದಿದ್ದು ಮಧ್ಯಾಹ್ನವೇ ಹೊರಟುಹೋದರು. ನಾನೂ ಅಣ್ಣಯ್ಯನ್ನ ನೋಡಿಕೊಂಡೇ ಬರ್ತೇನೆ ಎಂದು ಬಿಟ್ಟಿದ್ದು ಬಿಟ್ಟು ಹೊರಟೆ."

" ಬಂದು ಬಿಡಬೇಕಾಗಿತ್ತು ಮತ್ತೆ."

" ಬಂದಿದ್ದೆ."

" ನಾನೆಲ್ಲಿ ಹೋಗಿದ್ದೆ ಮತ್ತೆ? ಒಳಗೆ ದೇವರ ಪೂಜೆ ಮಾಡು ತ್ತಲೋ ಅಡಿಗೆ ಮಾಡುತ್ತಲೋ ಇದ್ದೆ; ಬಾಗಿಲು ಹಾಕಿದ್ದರೆ ಕೂಗಿ ತೆಗೆಸಬಾರದಾಗಿತ್ತೇ? ಹೊರಗಿನ ಕೋಣೆಯಲ್ಲಿ ನಿಮ್ಮ ಅತ್ತಿಗೆಯೇ ಇದ್ದಳಲ್ಲಾ!"

" ಏನೋ ಹೋಗಲಿ ಬಿಡು; ನಿನ್ನೆ ನೋಡುವ ಋಣಾನುಬಂಧ ವಿರಲಿಲ್ಲ; ಇವತ್ತಾದರೂ ಬಂದೆಯಲ್ಲ; ಪ್ರಾಪ್ತಿಯಿಲ್ಲದ್ದು ಹ್ಯಾಗೆ ಬರು ತ್ತಪ್ಪ; ನಾನು ನಿನ್ನೆ ಬಂದು ಏನು ಮಾಡುವಹಾಗಿದ್ದೆ, ನಾನೇನು ತನಿ ಎರೆಯುವ ಹಾಗಿದ್ದೇನೆಯೇ, ಅಣ್ಣ ಅಂತ ನಮಸ್ಕಾರ ಮಾಡುವ ಹಾಗಿದ್ದೇನೆಯೇ?"

" ಏನು ಮಾಡುವದಮ್ಮ! ನೀನು ಹೇಳಿದ ಹಾಗೆ ಯಾವುದಕ್ಕೂ ಪ್ರಾಪ್ತಿ ಬೇಕು; ನೀನೂ ಹಿಂದೆ ತನಿ ಎರೆದೆ, ನಮಸ್ಕಾರ ಮಾಡಿದೆ, ಎಲ್ಲಾ

ಮಾಡಿದೆ. ಈಗ ಹೀಗಿದ್ದರೇನು ಅಣ್ಣ ಅಂತ ಅಂತಃಕರಣವೇನಾದರೂ ಕಡಿಮೆಯಾಗಿದೆಯೇನಮ್ಮಾ! ಅಮ್ಮ ಇದ್ದದ್ದು ನನಗೆ ಸ್ವಲ್ಪ ಸ್ವಲ್ಪ ಜ್ಞಾಪಕವಿದೆ; ನೀನು ಅವಳನ್ನು ಅರಿಯೆ; ಆಗ ನೀನು ಇನ್ನೂ ಹತ್ತು ತಿಂಗಳ ಮಗು; ಅಮ್ಮನನ್ನು ನೋಡದಿದ್ದಿದ್ದರೆ, ಹೆಂಗಸರಿಗೆ ಅಂತಃ ಕರಣ ಅನ್ನುವುದು ಇರುತ್ತೆಯೇ ಎನ್ನಿಸಿಬಿಡುತ್ತಿತ್ತು. ನಿನ್ನೆ ದಿವಸ ನಾನು ನಿನ್ನನ್ನು ಎಷ್ಟುಸಲ ಜ್ಞಾಪಿಸಿಕೊಂಡೆನೋ! ನೀನೂ ಜ್ಞಾಪಿಸಿಕೊಂಡೆ ಅಂತೀಯೆ, ಹೊರಟುಬಂದೆ ಅಂತೀಯೆ, ಹೊರಟವಳು ಹಿಂತಿರುಗಿ ಯಾಕೆ ಬಂದುಬಿಟ್ಟೆ? ಅಷ್ಟರಲ್ಲಿ ಏನು ಮನಸ್ಸು ಬದಲಾಯಿಸಿತು?"

"ಬದಲಾಯಿಸಿತು ಅಂದರೆ ಏನು ಅಣ್ಣಯ್ಯ? ಆಗ ಬಂದ ವಳೂ ಬಂದದ್ದೇ; ನಿನ್ನ ಯೋಚನೆಯೇ ಯೋಚನೆ; ಈಗಲಾದರೂ ಬಂದೆಯಲ್ಲ ಅಷ್ಟೇ ಸಂತೋಷ."

"ನೀನು ಏನೋ ಮನಸ್ಸಿನಲ್ಲಿಟ್ಟುಕೊಂಡು ಇರುವ ಹಾಗೆ ತೋರುತ್ತೆ; ಸರಿಯಾಗಿ ಹೇಳುವುದಿಲ್ಲವಲ್ಲ!"

"ಏನೂ ಇಲ್ಲ ಅಣ್ಣಯ್ಯ; ಇಲ್ಲೇ ಅಡಿಗೆ ಮಾಡುತ್ತೇನೆ ಏಳು; ಸ್ನಾನವಾಗಿದೆಯೇ?"

"ಇರಲಮ್ಮ ಹೊತ್ತಾಯಿತು; ಕಛೇರಿಗೆ ಹೋಗಬೇಕು."

"ಹಾಗೇ ಮಾಡಪ್ಪ; ಇದು ತಿಳಿಯಿತೆಂದರೆ 'ಅಲ್ಲಿಗೆ ಆಗಲೇ ಹೋಗಿದ್ದಿರೋ ಇಲ್ಲವೋ!' ಎಂದು ಅದಕ್ಕೂ ಆಕ್ಷೇಪಣೆ ಬಂದೀತು."

"ಅದು ನಿತ್ಯೋತ್ಸವ; ನಮ್ಮ ಮನೆಯಲ್ಲಿ ಇದ್ದೇ ಇದೆ; ಯೋಗಿ ಪಡೆದದ್ದು ಯೋಗಿಗೆ; ಜೋಗಿ ಪಡೆದದ್ದು ಜೋಗಿಗೆ; .... ನಿನ್ನೆ ದಿನ ನೀನು ಬಂದಾಗ ಹೊರಗಿಂದ ಹೊರಗೇ ನಿಮ್ಮ ಅತ್ತಿಗೆ ಏನಾದರೂ ಅಂದು ಕಳುಹಿಸಿದಳೇನು?"

"ಇಲ್ಲಪ್ಪ, ಏನೂ ಇಲ್ಲ."

"ಮತ್ತೆ ಹಾಗಾದರೆ ನೀನು ಬಂದವಳು ಯಾಕೆ ಹಾಗೇ ಹೊರಟು ಹೋದೆ? ಈಗ ಹೇಳು, ನನ್ನ ಮೇಲಿನ ಆಣೆ, ಎಲ್ಲಿಯತನಕ ಬಂದಿದ್ದೆ?"

"ಥು! ನೀನು ಆಣೆ ಗೀಣೆ ಎನ್ನಬೇಡಪ್ಪ," ಬಿಡ್ತು ಅನ್ನು."

"ಹುಂ, ಬಿಡ್ತು ಬಿಡ್ತು ; ಹೇಳು ಮತ್ತೆ."

"ಅದನ್ನು ಕೇಳಿ ಏನು ಪ್ರಯೋಜನ ಅಣ್ಣಯ್ಯ? ಅದನ್ನು ಕೇಳದಿದ್ದರೇ ವಾಸಿ ; ನೀನೆಲ್ಲಾದರೂ ಚೆನ್ನಾಗಿದ್ದೀಯೆ ಎಂದು ಕೇಳಿದರೆ ಸಾಕು ; ಏನೋ ಭ್ರಾಂತು, ನೋಡಬೇಕು ಎನ್ನಿಸಿತು ; ನೋಡಿದ್ದಾಯಿತಲ್ಲಾ. ನೀನು ಸುಖವಾಗಿರುವದನ್ನು ನೋಡುತ್ತಿದ್ದೇನಲ್ಲಾ. ಅದಿರಲಿ, ಎಲ್ಲಾದರೂ ನಿನಗೆ ದೇವರು ಆಯುಸ್ಸುಕೊಟ್ಟು ನೀನು ತಣ್ಣಗಿದ್ದರೆ ಸಾಕು ; 'ಅಣ್ಣಯ್ಯ' ಎನ್ನುವ ಪುಣ್ಯವನ್ನು ದೇವರು ಕೊಟ್ಟಿದ್ದರೆ ಸಾಕು."

"ಅದಕ್ಕೇನು ಬೇಕಾದಷ್ಟಿದೆ, ಆದರೆ ತಂಗಿ ಅಂತ ನನ್ನಿಂದ ನಿನಗೆ ಒಂದು ಚೂರು ಪ್ರಯೋಜನ ಮಾತ್ರ ಇಲ್ಲ. ಅದಿರಲಿ, ಅದೇನೋ ನಿನ್ನ ಮನಸ್ಸಿನಲ್ಲಿರುವದನ್ನು ಹೇಳುತೀಯೋ ಇಲ್ಲವೋ? ಹೇಳದಿದ್ದರೆ ನನ್ನಾಣೆ!"

"ನಾನು ಹೇಳಬಾರದು ಅಂತ ಇದ್ದದ್ದನ್ನು ನನ್ನ ಬಾಯಲ್ಲಿ ಹೊರಡಿಸಬೇಕು ಅಂತೀಯೆ ; ಆದರಿಂದ ಏನು ಸುಖ ಅಣ್ಣಯ್ಯ! ಹೇಳಿಬಿಡ್ತೀನಿ ಹೋಗಲಿ ; ಬಿಡ್ತು ಅನ್ನು."

"ಬಿಡ್ತು ಬಿಡ್ತು."

"ನಿಮ್ಮ ಮನೆಯತನಕ ಬಂದೆ ; ಹೊರಗಿನ ಕೊಠಡಿಯ ಬಾಗಿಲನ್ನು ತೆಗೆದುಕೊಂಡು ಅತ್ತಿಗೆಮ್ಮ ಕುಳಿತಿದ್ದಳು, ಮನೆಯ ಬಾಗಿಲು ಹಾಕಿತ್ತು. ನಾನು ಬಾಗಿಲ ಹತ್ತಿರ ಬಂದು ನಿಂತುಕೊಂಡು ಯಾರನ್ನಾದರೂ ಕೂಗಬೇಕು ಅಂತ ಇದ್ದೆ. ಅಷ್ಟು ಹೊತ್ತಿಗೆ ಅವಳು 'ಇದನ್ನು ಯಾರು ಕರೆಸಿದರೋ ಕಾಣೆ ಹಬ್ಬದ ದಿನ ; ಮುತ್ತೈದೆಯೇ ಸಾವಿತ್ರಿಯೆ? ಏನು ಅಗ್ಗ ಅಂತ ಇಲ್ಲಿಗೆ ಬಂದಳೋ ಕಾಣೆ ಕೈಬೀಸಿಕೊಂಡು! ಮಾವನವರು ಮಾಡಿಟ್ಟ ಆಸ್ತಿಯನ್ನು ಗಂಟು ಹಾಕಿಕೊಂಡು ಅಣ್ಣನ ಮನೆ ತೊಳೆಯುವದಕ್ಕೆ ಬಂದಳೇನೊ! ಇನ್ನೇನು, ಆಗಲೇ ಅಲ್ಲಿಗೆ ಹೋಗಿದ್ದರೇನೋ ಕರೆಯುವದಕ್ಕೆ ; ಬಾಮ್ಮ ತಂಗಿ, ಹೊಟ್ಟೆಬಿರಿಯ ಕಡುಬು ತಿಂದು ಹೋಗು ಅಂತ. ಇವರಿಗೆ ಬುದ್ಧಿಯಿದ್ದರೆ ಹೌದೋ ಅಲ್ಲವೋ ; ಮೂರು ಹೊತ್ತೂ

ತಮ್ಮಾವರು ತಮ್ಮಾವರು, ತಮ್ಮಾಬಳಗ ತಮ್ಮಾಬಳಗ ಅಂತ ಬಡಕೋತಾರೆ....' ಎಂದು ಒಂದು ನಿಮಿಷದಲ್ಲಿ ಪಟಪಟನೆ ನೂರುಮಾತ ನಾಡಿಬಿಟ್ಟಳು. ನನಗೆ ಯಾರನ್ನೂ ಕೂಗುವುದಕ್ಕೆ ಬಾಯಿಬರಲಿಲ್ಲ ಅಣ್ಣಯ್ಯ! ಹಬ್ಬದ ದಿನ ಲಕ್ಷಣವಾಗಿ 'ಬಡಕೋತಾರೆ' ಅನ್ನುವ ಮಾತು ಕೇಳಿದ ಕೂಡಲೆ ಯಾಕೋ ಬಹುಸಂಕಟವಾಗಿ ಎರಡು ಕಿವಿಗಳನ್ನೂ ಮುಚ್ಚಿಕೊಂಡು ಹಾಗೇ ಹಿಂತಿರುಗಿ ಬಂದುಬಿಟ್ಟೆ. ಇನ್ನು ಅಲ್ಲೇ ನಿಂತರೆ, ನೀನೆಲ್ಲಾದರೂ ಕಣ್ಣಿಗೆ ಬಿದ್ದೀಯೆ, ರಂಪು ರಾದ್ಧಾಂತವಾದೀತು ಎಂದು ಹೆದರಿ ಮನೆಗೆ ಹ್ಯಾಗೆ ಬಂದೆನೋ ಬಂದೆ . ..... .... ..''

"ಇದನ್ನು ಮುಚ್ಚಿಕೊಂಡಿದ್ದರಿಂದೇನಮ್ಮ! ನಮ್ಮ ಅದೃಷ್ಟವೇ ಹೀಗಾಯಿತು! ನನ್ನ ಪಾಡು ಹೋಗಲಿ; ಮುಂದೆ ಗಂಡನ ಮನೆಗೆ ಹೋಗಿ ಸಂಸಾರಮಾಡಬೇಕಾದ ಹೆಣ್ಣುಹುಡುಗರಿವೆಯಲ್ಲ, ಅವೂ ನೋಡಿ ನೋಡಿ ಹೀಗಾದರೆ ಏನುಗತಿ ಎನ್ನಿಸುತ್ತದೆ!"

"ನೀನು ನಿನ್ನ ಮಕ್ಕಳ ಯೋಚನೆ ಮಾಡುತ್ತಿರುವ ಹಾಗೇ ಅಪ್ಪನಿಗೂ ಯೋಚನೆಯಿತ್ತು, ಬಲ್ಲೆಯಾ? ಅವನಿಗೆ ಸಾಯುವಾಗ ಕೊನೆಗೂ ಅದು ಒಂದು ಕೊರಗು ನಿಂತುಹೋಗಿತ್ತು."

"ಯಾವುದು, ನಿನ್ನ ಸ್ಥಿತಿ? ಹೌದು, ನಾನೂ ಅಪ್ಪನೂ ಒಂದು ದಿನ ಪೇಟೆಕಡೆಗೆ ಹೋಗುತ್ತಿದ್ದಾಗ, ಮನೆಯಲ್ಲಿ ಮಾತನಾಡಿದರೆ ರಂಪವಾಗುತ್ತೆಂದು ಕಾಲುರಸ್ತೆಯ ಮೇಲೆ ನಿಂತು 'ಮಗು' ಎಂದನು.''

"ಏನು?" ಎಂದೆ.

"ನನಗೆ ಜಂಘಾಬಲವೇ ತಪ್ಪುತ್ತಿದೆ ನೋಡು; ಜಂಘಾಬಲವು ಹೋದಮೇಲೆ ಮನುಷ್ಯನ ಆಶೆ ತೀರಿತು. ಶಾರದೆಯ ಅವಸ್ಥೆ ಹೀಗಾಯಿತಲ್ಲೋ–ಎಂದುಕಣ್ಣೀರು ತುಂಬಿಕೊಂಡನು. ನಾನು ಅವನ ಮನಸ್ಸನ್ನು ತಿಳಿದುಕೊಂಡು, ನಾನಿರುವವರೆಗೂ ಆ ಜವಾಬುದಾರಿ ನನಗಿರಲಪ್ಪ ಎಂದು ಧೈರ್ಯ ಹೇಳಿದೆ.''

"ಅದಲ್ಲ."

" ಮತ್ತೇನು—ನಮ್ಮ ಮಗು ಹೋದದ್ದೇ ? "

" ಮಗು ಹೋದದ್ದಕ್ಕೇನೋ ಅಪ್ಪ ತುಂಬ ದುಃಖಪಟ್ಟ ; ಅಮ್ಮ ಹೋದಾಗಲೂ ಅಷ್ಟು ದುಃಖ ಬರಲಿಲ್ಲವಂತೆ; ಅದನ್ನು ಒಂದು ದಿನ ಅವನೇ ಹೇಳಿದ ; ತಾತ ತಾತ ಎಂತ ಮುದ್ದು ಮಾತನಾಡುತ್ತಾ ಅದು ಅಷ್ಟು ಮಮತೆ ಹತ್ತಿಸಿ ಬಿಟ್ಟಿತ್ತು. ಮಗನ್ನ ಕಾಣದ್ದು ಮೊಮ್ಮಗನ್ನ ಕಂಡರು ; ಮುದುಕರು ಪುಣ್ಯವಂತರು ಅಂತ ಎಲ್ಲರೂ ಅನ್ನು ತ್ತಿದ್ದರು. ಅದಕ್ಕೂ ಅವನು ಅಷ್ಟು ಕೊರಗಲಿಲ್ಲ."

" ಮತ್ತೆ ಇನ್ಯಾತಕ್ಕೆ ? "

" ಇನ್ಯಾತಕ್ಕೆ ಅಣ್ಣಯ್ಯ, ನಿನ್ನ ಸಂಸಾರ ಹೀಗಾಯಿತಲ್ಲಾ ಅಂತ."

" ಅದಕ್ಕೆ ಯಾರ ಯತ್ನ ಅಮ್ಮ!"

"ಅದೇನೋ ನಿಜ ; ಆದರೂ ಈಗಿನ ಕಾಲದವರ ಹಾಗೆ ನಿನ್ನನ್ನೇ ಮದುವೆ ಮಾಡಿಕೊ ಅಂತ ಬಿಟ್ಟಿದ್ದರೆ ಏನಾಗುತ್ತಿತ್ತೋ ಏನೋ."

" ಬರಿಯ ಭ್ರಾಂತು ಶಾರದಾ ! ಈಗಿನ ಕಾಲದಲ್ಲಿ ಓದಿ ಪ್ಯಾಸು ಮಾಡಿದ ಹುಡುಗಿಯರು ಸಿಕ್ಕುತ್ತಾರೆ. ಹಾರ್ಮೋನಿಯಂ ಕಲಿತವರು ವೀಣೆ ಕಲಿತವರು ಸಿಕ್ಕುತ್ತಾರೆ ; ಅಂತಃಕರಣ ಪಡುವ ಹುಡುಗಿಯರು ಸಿಕ್ಕುವುದು ಕಷ್ಟ, ಶಾರದಾ ! ಬರುತ್ತಿದ್ದ ಹಾಗೇ ಅಣ್ಣ ತಮ್ಮಂದಿರನ್ನೂ ತಾಯಿತಂದೆಗಳನ್ನೂ ತೊರಸಿ ಬಿಡುವವರೇ ಬಹಳ ಜನ. ಅಂಥವರನ್ನು ಮದುವೆ ಮಾಡಿಕೊಳ್ಳುವದು ದೇಹಕ್ಕೆ ಕೆಟ್ಟ ರೋಗ ತಂದುಕೊಳ್ಳುವ ಹಾಗೆ; ಔಷಧಿ ಕೊಟ್ಟರೆ ವಾಸಿಯಾಗುವುದಿಲ್ಲ ; ಬಿಡುವದಕ್ಕಿಲ್ಲ, ಅನುಭ ವಿಸುವದಕ್ಕಿಲ್ಲ. ಗುಣವಂತೆಯರನ್ನು ಕೈಹಿಡಿದವರು ಬಾಳುವದಕ್ಕೆ ಆಯುಸ್ಸನ್ನು ಪಡೆದು ಬಂದಿರುವದಿಲ್ಲ.—ಇಲ್ಲ ಗಂಡನೋ, ಇಲ್ಲ ಹೆಂಡತಿಯೋ ಎಡವಟ್ಟು."

" ಅಂತು ಅದೇನೋ ತುಂಬ ಕೊರಗು ಹತ್ತಿಬಿಟ್ಟಿತ್ತು ಅಪ್ಪನಿಗೆ. ಅದನ್ನು ನಿನ್ನ ಕೈಯಲ್ಲಿ ಹೇಳುವುದಕ್ಕೆ ಮನಸ್ಸಿಲ್ಲ. ಒಂದು ದಿನ, ಅಯ್ಯೋ ಹಾವು ತಂದು ಮನೆಗೆ ಸೇರಿಸಿಕೊಂಡಹಾಗಾಯಿತೆ ! ಎಂದ."

" ಆಗಲಿ, ಆಗಲಿ ; ನಾಗರ ಪಂಚಮಿಯ ಪೂಜೆಗೆ ಅನುಕೂಲವಾ

ಯಿತು ; ಜೀವದ ಹಾವೇ ಸಿಕ್ಕಿದಹಾಗಾಯಿತು. ''

" ನಿನ್ನ ಹಾಸ್ಯಕ್ಕೆ ಕಲ್ಲುಬಡಿದರು! ಯಾವಾಗಲೂ ಒಂದೇ."

" ಏನುಮಾಡುವದಮ್ಮ; ನೀನೂ ನೋಡುತ್ತಿದ್ದೆಯಲ್ಲಾ. ನನ್ನ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿದ್ದಾಯಿತು ; ಏನೋ ಹೇಳು ತಾರಲ್ಲ ಹಾಗೆ, ಅವರವರ ಹುಟ್ಟುಗುಣ ಅವರು ಬಿಡುವದಕ್ಕಾಗು ತ್ತೆಯೇನಮ್ಮ? ಅದೂ ಅಲ್ಲದೆ ನಾವು ಹುತ್ತ ಮಾಡಿಟ್ಟುಕೊಂಡು ಹಾವು ಬಂದು ಸೇರಿಕೊಂಡಿತು ಎಂದರೆ, ಅದು ಹಾವಿನ ತಪ್ಪೇ?"

" ಅಲ್ಲ ಅಣ್ಣಯ್ಯ, ಅವಳು ಮಾಡದಿದ್ದ ನೋವಿಯಿಲ್ಲ ವ್ರತವಿಲ್ಲ —ಪೌರ್ಣೋವಿ ಬಾಗಿನವಂತೆ, ದ್ವಾದಶೀ ಎಲೆ ಅಡಿಕೆಯಂತೆ, ದಂಪತಿ ವೀಳ್ಯವಂತೆ, ಫಲದಾನವಂತೆ. ಊರೆಲ್ಲಾ ಅವಳ ಸಮಾನ ಪುಣ್ಯವಂತೆ ಇಲ್ಲ ಧಾರಾಳವಂತೆ ಇಲ್ಲ ಅಂತ ಹೊಗಳುತ್ತಾರೆ; ಮೊನ್ನೆ ತಾನೆ ಅವರ ತಾಯಿಯನ್ನು ಕರೆಸಿ ತಾಯಿ ಬಾಗಿನ ಅಂತ ಕಲಾಪತ್ತಿನ ಸೀರೆ ಉಡಿಸಿ ಕಳುಹಿಸಿದಳು. ಅವಳಿಗೆ ಅಂತಃಕರಣಕ್ಕೆ ಕಮ್ಮಿಯೋ ಆಸ್ತಿಗೆ ಕಮ್ಮಿಯೋ? ಆದರೂ ಯಾಕೆ ಹೀಗೆ ಆಡುತ್ತಾಳೆ? ನನ್ನ ಕಂಡರಂತೂ ಹೋಗಲಿ; ಅತ್ತಿಗೆ ನಾದಿನಿಯ ದ್ವೇಷ; ತನ್ನ ಗಂಡ ಮಕ್ಕಳು ಇವರೊ ಡನೆಯಾದರೂ ಹಿತವಾಗಿರಬಾರದೇ? ''

" ಅದೆಲ್ಲಾ ನೋವಿ ವ್ರತ ಮಾಡಿದರೆ ಬರುತ್ತೆಯೇಮ್ಮ!— ಹೋಗಲಿ ಬಿಡು. ನಿನ್ನೇ ದಿನ, ಹಾಗಾದರೆ ಅಲ್ಲಿಂದ ಬಂದು ಅಡಿಗೆಯೋ ನಿನಗೆ?"

" ಅಡಿಗೆಯೂ ಇಲ್ಲ... .. .....ಹೂಂ ಹೂಂ,"

ನನಗೆ ಆಗ ಒಲೆಯ ಮೇಲೆ ದೃಷ್ಟಿ ಹೋಯಿತು. ನೆನ್ನೆಯ ದಿನ ಒಲೆಯ ಮೇಲೆ ಎಸರಿಟ್ಟ ತಪ್ಪಲೆ ಹಾಗೇ ಇದೆ; ಉರಿಯನ್ನು ಹೊರಕ್ಕೆ ಎಳೆದಿದ್ದಿದ್ದರಿಂದ ಸೌದೆ ಹೊರಗೆ ಉರಿದು ಬೂದಿಯಾಗಿದೆ. " ಅಯ್ಯೋ ತಾಯಿ, ಈ ನಿರ್ಭಾಗ್ಯನ್ನ ನೋಡಬೇಕು ಅಂತ ಹೋಗಿ ಎರಡು ದಿನ ಉಪವಾಸ ಮಾಡಿದೆಯಾ!" ಎಂದು ಕಣ್ಣಿನಲ್ಲಿ ನೀರು ತಂದುಕೊಂಡೆ.

" ನೀನು ನಿರ್ಭಾಗ್ಯ ಗಿರ್ಭಾಗ್ಯ ಎಂದು ಬೈದುಕೊಳ್ಳಬೇಡ ಅಣ್ಣಯ್ಯ; ದೇವರು ನಿನಗೇನು ಕಡಿಮೆ ಮಾಡಿದ್ದಾನೆ? ನಾನು

ಉಪವಾಸ ಮಾಡಿದರೆ ಯಾವ ಮಕ್ಕಳಿಗೆ ಹಾಲಿಲ್ಲದೆ ಹೋಗುತ್ತದೆ? ಊಟ ಎಲ್ಲಿ ತಪ್ಪುತ್ತೆ? ಇವೊತ್ತು ಅಡಿಗೆ ಮಾಡುತ್ತೇನೆ; ಊಟ ಮಾಡುವದು ಇದ್ದೇ ಇದೆ; ನೀನು ಎಲ್ಲಾದರೂ ಚೆನ್ನಾಗಿದ್ದರೆ ಸಾಕು; ಅದನ್ನು ನಾನು ಕೇಳಿದರೆ ಸಾಕು."

" ನನಗೆ ಏನೂ ಕಮ್ಮಿ ಇಲ್ಲಮ್ಮ: ದೇವರು ಹೊಟ್ಟೆತುಂಬ ಅನ್ನ ಕೊಟ್ಟಿದ್ದಾನೆ; ಆದರೆ ತುಪ್ಪ ಮಜ್ಜಿಗೆಯಿಲ್ಲದೆ ಬರಿಯ ಅನ್ನವನ್ನು ಮುಕ್ಕುವುದು ನನ್ನ ಅದೃಷ್ಟವಾಗಿದೆ.''

ಅವಳು ಇನ್ನೂ ಮಡಿಯನ್ನೇ ಉಟ್ಟಿರಲಿಲ್ಲ. ಇನ್ನು ಇವೊತ್ತೂ ಉಪವಾಸಮಾಡಿಯಾಳೆಂದು ಬಲವಂತವಾಗಿ ಅವಳನ್ನು ಎಬ್ಬಿಸಿದೆ. ನಾನೂ ಅಲ್ಲಿಯೇ ಊಟಮಾಡುತ್ತೇನೆಂದು ಹೇಳಿದೆ. "ಮಕ್ಕಳಿಗೆ ಅಡಿಗೆ ಮಾಡಿ ಹಾಕುವವರು ಯಾರು?'' ಎಂದಳು. "ಇವೊತ್ತು ಅವಳು ಒಳಗೆ ಬಂದಿದ್ದಾಳೆ; ಮಾಡುತ್ತಾಳೆ'' ಎಂದೆ. "ಇವೊತ್ತು ಶ್ರೀಯಾಳಷಷ್ಠಿಯಲ್ಲವೇ?" ಎಂದಳು. "ಹೌದು; ಅದನ್ನು ಮುಂದಿನ ಷಷ್ಠಿ ಮಾಡುತ್ತೇವೆ" ಎಂದೆ. "ಇದಕ್ಕೂ ಜಗಳವಾದರೆ ಏನು ಮಾಡುವದಪ್ಪಾ?" ಎಂದು ಕೇಳಿದಳು. "ಅದು ನನ್ನ ಪಾಡು'' ಎಂದು ಉತ್ತರ ಕೊಟ್ಟು ಊಟ ಮಾಡುತ್ತ ಮುಂದಿನ ಕ್ರಮವನ್ನು ಯೋಚಿಸಿದೆ. ಒಂದು ತುತ್ತು ಕಡಿಮೆಯಾಗಿಯೇ ಊಟಮಾಡಿ ದಾರಿಯಲ್ಲಿ ಹೋಗುತ್ತಾ ಅಕ್ಷತೆಯನ್ನು ಕೆರೆದುಹಾಕಿಕೊಂಡು ಆಫೀಸಿನಲ್ಲಿ ಒಂದು ಗಂಟೆ ಹೊತ್ತು ಕುಳಿತಿದ್ದು, ಮ್ಯಾನೇಜರಿಗೆ ತಿಳಿಸಿ ಮನೆಗೆ ಬಂದು ಮತ್ತೆ ಊಟಮಾಡಿಕೊಂಡು ಹೋದೆ. "ಸಾಹೇಬರು ಹೇಳಿಕಳುಹಿಸಿದ್ದರು'' ಎಂದು ಸುಳ್ಳು ಹೇಳಿ ವ್ಯಾಜ್ಯವನ್ನು ತಪ್ಪಿಸಿಕೊಂಡಿದ್ದಾಯಿತು.

೧೯೨೬ ಶ್ರೀಪತಿ.

---

# ಹುಚ್ಚೋ ಅಲ್ಲವೋ ?

ರೈಲಿನ ಅನುಭವ ಪೂರ್ತಿಯಾಗಿ ಬರಬೇಕಾದರೆ ಮೂರನೆಯ ತರಗತಿಯಲ್ಲಿಯೇ ಪ್ರಯಾಣ ಮಾಡಬೇಕು. ಸೆಕೆಂಡ್ ಕ್ಲಾಸ್ ಗಾಡಿಯಲ್ಲಿಯೋ ಫಸ್ಟ್‌ಕ್ಲಾಸ್ ಗಾಡಿಯಲ್ಲಿಯೋ ಹೋದರೆ ಬರೀ ಮಿಟಿಮಿಟಿ ಸ್ವರ್ಗ; ದುಡ್ಡು ಕೊಟ್ಟ ಹೊಟ್ಟೆಯಕಿಚ್ಚಿಗೆ ಮಲಗಿಕೊಂಡಾದರೂ ಹೋಗೋಣವೆಂದು ರಾತ್ರಿ ಕಣ್ಣುಮುಚ್ಚಿಕೊಂಡು ಪ್ರಯಾಣ, ಇಲ್ಲದಿದ್ದರೆ ಹೆಚ್ಚು ದುಡ್ಡು ಸಂಪಾದನೆ ಮಾಡುವ ದೊಡ್ಡಸ್ತಿಕೆಯ ಸಂಕಟಕ್ಕೆ ಹಗಲು ಹೊತ್ತು ಗಾಡಿಗೆಲ್ಲಾ ಇಬ್ಬರೋ ಮೂವರೋ ಕುಳಿತು ನ್ಯೂಸುಪೇಪರುಗಳಿಂದ ಮುಖಗಳನ್ನು ಮುಚ್ಚಿಕೊಂಡು ಹೋಗುವುದೂ ಉಂಟು; ಗಾಡಿಗೆಲ್ಲಾ ಒಬ್ಬೊಬ್ಬರೇ ಕಿಟಕಿ ಬಾಗಿಲು ಹಾಕಿಕೊಂಡು ಕೂತು ಹೋಗುವುದೂ ಉಂಟು, ಅದೆಲ್ಲಾ ಅವರವರ ದರ್ಜೆಯ ಮೇಲೆ ಹೋಗುತ್ತದೆ. ಆದರೆ ರೈಲಿನ ನಿಜವಾದ ಕಷ್ಟ ಸುಖಗಳೂ ಅನುಭವವೂ ಬರಬೇಕಾದರೆ ಮೂರನೆಯಕ್ಲಾಸ್ ಗಾಡಿಯಲ್ಲಿಯೇ ಹೋಗಬೇಕು. ಅದೆಷ್ಟು ವಿಧವಾದ ಜನ, ಏನು ಮಾತು, ಏನು ಜಗಳ, ಏನು ಗುದ್ದಾಟ. ಏನು ಗಂಧ ಪುಷ್ಪ ಧೂಪ ದೀಪಾದಿ ಷೋಡಶೋಪಚಾರಗಳು! ಷೇಕ್ಸ್‌ಪಿಯರ್ ಸ್ಕಾಟ್ ಬಂಕಿಂ ಇವರಿಗೆ ಈ ಮೂರನೆಯ ಕ್ಲಾಸ್ ಗಾಡಿಯ ಪ್ರಯಾಣದಿಂದಲೇ ಆ ವಿಚಿತ್ರ ಅನುಭವವೂ ವಿಶ್ವಹೃದಯವೂ ಬಂದಿತೆಂದು ತೋರುತ್ತದೆ. ಮನಸ್ಸಿನಲ್ಲಿ ಏನೋ ಆಶೋತ್ತರಗಳನ್ನು ಇಟ್ಟುಕೊಂಡು ಎಷ್ಟು ಹೊತ್ತಿಗೆ ಊರಿಗೆ ಹೋಗಿ ಸೇರಿಯೇನು ಎಂದು ತವಕಪಡುತ್ತ ಸುತ್ತಮುತ್ತಿನ ಜ್ಞಾನವೇ ಇಲ್ಲದವನ ಭಾಗಕ್ಕೆ ರೈಲೂ ಒಂದೇ ಸಮುದ್ರವೂ ಒಂದೇ ಆಕಾಶವೂ ಒಂದೇ; ಹಾಗಲ್ಲದೆ ಸ್ವಲ್ಪ ಕಣ್ಣುಕಿವಿಗಳನ್ನು ಬಿಟ್ಟುಕೊಂಡು ನಿರ್ಲಿಪ್ತನಾಗಿ ಕೇಳುತ್ತಿದ್ದರೆ ಎಷ್ಟು ವಿಧವಾದ ಮಾತು ಕಥೆಗಳು ಬರುತ್ತವೆ! ಹೀಗೆ ರೈಲಿನಲ್ಲಿ ಪ್ರಯಾಣಮಾಡಿದವನು ಅವತ್ತಿನ ವೃತ್ತಪತ್ರಿಕೆಯನ್ನು ಓದಬೇಕಾಗಿಲ್ಲ; ಚಕ್ರವರ್ತಿಯಿಂದ ಚಾಕರಿವಾನನವರೆಗೆ ಎಲ್ಲರ ಮನೆಯ ವೃತ್ತಾಂತಗಳೂ ಕೈಕಾಲುಗಳನ್ನು ಪಡೆದು ಪ್ರತ್ಯಕ್ಷವಾಗಿಬಿಡುತ್ತವೆ.

ನಾನು ಒಂದುಸಾರಿ ಹೀಗೆ ಮೈಸೂರು ರೈಲಿನಲ್ಲಿ ಹೋಗುತ್ತಿದ್ದೆ. ಮದ್ದೂರು ಹತ್ತಿರವಾಯಿತು. ಎಲ್ಲರೂ ಬಟ್ಟೆಬರೆಗಳನ್ನು ಸರಿಮಾಡಿ ಕೊಂಡು ಕಾಫಿ ತಿಂಡಿಗಳನ್ನು ತೆಗೆದುಕೊಳ್ಳಲು ಅನುವಾದರು. ನಮ್ಮ ಬೆಂಚಿನ ಮೇಲಿದ್ದ ಒಬ್ಬ ಮುದುಕರು ಮಾತ್ರ ತವಕಪಡದೆ "ಇದು ಹೊಸ ಸೇತುವೆಯೋ? ಇದನ್ನು ಕಟ್ಟಿದ ಮೇಲೆ ನಾನು ಈಕಡೆ ಬಂದೇ ಇರಲಿಲ್ಲ" ಎಂದು ಹಳೆಯ ಸೇತುವೆಯನ್ನು ತೋರಿಸಿ "ಅದು ಮುರಿಯುವುದಕ್ಕೆ ಮುಂಚೆಯೇ ಇದನ್ನು ಕಟ್ಟಿದರಲ್ಲ! ಮಳೂರು ಸೇತುವೆಯ ಹಾಗಾ ಗಲಿಲ್ಲವಲ್ಲ!'' ಎಂದರು. ಮಳೂರು ಸೇತುವೆ ಮುರಿದಾಗ ಅವರು ರೈಲಿನಲ್ಲಿದ್ದರಂತೆ; ಆ ಕಗ್ಗತ್ತಲೆಯ ರಾತ್ರಿಯಲ್ಲಿ ರೈಲು ಬಿದ್ದು ಹೋದದ್ದನ್ನೂ ಹೆಂಗಸರು ಮಕ್ಕಳ ಹಾಹಾಕಾರವನ್ನೂ, ಕೆಡ್ಡಾ ಶಾಮೈಂಗಾರ್ರು ಕಲಾಪತ್ತಿನ ಗದ್ದೆಮಡಿ ರುಮಾಲನ್ನು ತಾವು ತೆಗೆದು ಕೊಂಡು ಹೋಗುತ್ತಿದ್ದ ತುಪ್ಪದ ಡಬ್ಬದಲ್ಲಿ ಅದ್ದಿ ಹೊತ್ತಿಸಿ ಕಕ್ಕಡ ಉರಿಸಿದ್ದನ್ನೂ ಅದರಿಂದ ಆದ ಸಹಾಯವನ್ನೂ ವರ್ಣಿಸಿ ಕೊನೆಗೆ "ಈಗ ಅಂಥ ಆಫೀಸರು ಎಲ್ಲಿದ್ದಾರೆ ಸ್ವಾಮಿ!"ಎಂದು ಮುಕ್ತಾಯಮಾಡಿ ದರು. ಅದನ್ನು ಕೇಳಿ ಸ್ವಲ್ಪ ದೂರದಲ್ಲಿದ್ದ ಮಧ್ಯವಯಸ್ಸಿನ ಒಬ್ಬಾತನು "ಯಾಕೆ ಹಾಗಂತೀರಿ ಸ್ವಾಮಿ! ನಮ್ಮ ಖಾವಂದರ ಧರ್ಮಪ್ರಭುತ್ವದಲ್ಲಿ ಅಂಥವರಿಗೆ ಏನು ಕಡಿಮೆ? ಯಥಾ ರಾಜಾ ತಥಾ ಪ್ರಜಾಃ!" ಎಂದು ಉತ್ತರಕೊಟ್ಟನು. ನಾನು, ಈತ ಯಾರೋ ಸ್ಕೂಲುಮೇಷ್ಟ್ರು ಉಪನ್ಯಾ ಸಕ್ಕೆ ಆರಂಭಮಾಡಿದ ಎಂದುಕೊಂಡೆ. ನೋಡುವುದಕ್ಕೆ ಅವನು ಸ್ಕೂಲು ಉಪಾಧ್ಯಾಯನಾಗಿ ಕಾಣುತ್ತಿರಲಿಲ್ಲ. ಅವನ ಸ್ಥಿತಿಯನ್ನು ನೋಡಿದರೆ ನಾಲ್ಕನೇ ಐದನೇ ತರಗತಿಗಳ ಗಾಡಿ ಇಲ್ಲದ್ದರಿಂದ ಮೂರನೇ ತರಗತಿ ಯಲ್ಲಿ ಹೋಗುತ್ತಿರುವಂತಿತ್ತು: ಅಷ್ಟು ಬಡವನಾಗಿ ಕಾಣುತ್ತಿದ್ದನು. ಹಾಕಿಕೊಂಡಿದ್ದದ್ದು ಒಂದು ಚೆಕ್ಕಿನ ಕೋಟು; ಅದು ಹರಿದುಹೋಗಿ ಅದರಿಂದ ಮುಚ್ಚುವ ಶರೀರಭಾಗಕ್ಕಿಂತಲೂ ಕಾಣುತ್ತಿದ್ದ ಭಾಗವೇ ಹೆಚ್ಚಾಗಿತ್ತು. ಪಂಚೆಯೂ ಅದರ ಅಣ್ಣತಮ್ಮನೇಯೆ. ಆಳು ಮಾತ್ರ ಕಟ್ಟುಮುಟ್ಟು; ರೂಪು ಅಷ್ಟೇನೂ ಸುಂದರವಲ್ಲದಿದ್ದರೂ ವಿಕಾರವಲ್ಲ. ಬಣ್ಣವು ಸ್ವಲ್ಪ ಕಪ್ಪು ಛಾಯೆಯಾಗಿದ್ದರೂ ಚೆನ್ನಾಗಿ

ಸೋಪುಹಾಕಿಕೊಂಡು ಸ್ನಾನಮಾಡಿ ಒಗೆದ ಮಡಿಯುಟ್ಟು ವಿಭೂತಿ ಯನ್ನಿಟ್ಟು ಬಂದರೆ ಒಪ್ಪುವಂತಿತ್ತು. ಈತ ಇರುವುದು ಈ ಅವಸ್ಥೆ; ಇದೇನು ಹೀಗೆ ಸರ್ಕಾರವನ್ನು ಹೊಗಳುತ್ತಾನೆ, ಎಂದು ನಾನು ಅನು ಮಾನಪಡುತ್ತಾ ಅವನನ್ನು ನೆತ್ತಿಯಿಂದ ಹಿಡಿದು ಕಾಲಿನವರೆಗೆ ಹಾಗೇ ದೃಷ್ಟಿಸಿ ನೋಡಿದೆನು. ಆತನೂ ನನ್ನನ್ನು ಗಮನಿಸಿ "ಅದೇನು ಸ್ವಾಮಿ, ಹಾಗೆ ನೋಡುತ್ತೀರಿ!" ಎಂದನು. ನಾನು ಏನು ಹೇಳಲಿ! ಒಂದುಕಡೆ, ಆತ ಯಾರು ಏಕೆ ಹಾಗೆ ಅಂದ ಎಂತ ತಿಳಿದುಕೊಳ್ಳ ಬೇಕೆಂಬ ಕುತೂಹಲ; ಇನ್ನೊಂದು ಕಡೆ ಈ ಶ್ವಪಚನ ಕೈಲಿ ಮಾತ ನಾಡುವುದೇನು! ನಾನು ಕೋರು ರುಮಾಲು ಸುತ್ತಿ ಕಲಾಪತ್ತಿನ ಪಂಚೆ ಉಟ್ಟಿರತಕ್ಕವನು ಎಂದು ಅಹಂಕಾರ. ಅದರ ಹಿಂದಿನ ದಿವಸವಿನ್ನೂ ಯಾರೋ ಒಬ್ಬ ಅಧಿಕಾರಿಗಳನ್ನು ನೋಡುವುದಕ್ಕೆ ಹೋಗಿ, "ಇಲ್ಲಿಗೆ ಯಾಕೆ ಬಂದೆನಪ್ಪಾ, ಈತನ ಕೈಯಿಂದ ತಪ್ಪಿಸಿಕೊಂಡು ಹೋದರೆ ಸಾಕಲ್ಲಾ!" ಎಂದು ಜಪಿಸುತ್ತ ಕೆಡ್ತಾ ರಾಮೈಂಗಾರ್ಯರ ಕಾಲವನ್ನು ಮನಸ್ಸಿನಲ್ಲಿಯೇ ಮೆಚ್ಚುತ್ತಿದ್ದ ನಾನು ಈ ದರವೇಸಿಯು ಹೊಗಳಿದರೆ ಅದಕ್ಕೆ ಸಮ್ಮತಿಯ ರುಜುಹಾಕಿಬಿಡುವಂತಿರಲಿಲ್ಲ. ವ್ಯಾಜ್ಯವಾಡುವುದಕ್ಕೆ ಮನಸ್ಸಿಲ್ಲ. ಅವನಿಗೆ ನಾನು ಸಮನೇ? ಕಕ್ಷಿ ಪ್ರತಿಕಕ್ಷಿಗಳು ಸರಿಸಮ ನಾಗಿಲ್ಲದಿದ್ದರೆ ಸರಿಗಟ್ಟಿಗೊಂಡು ಹೋಗುವವರಿಗೆ ಮಾನ ಬಂದೀತೆ! ನನ್ನ ಅನುಭವ ತಿಳಿವಳಿಕೆ ಇವು ಇವನಿಗೆ ಏನು ಇದ್ದಾವು? ಎಂದು ಯಾವ ಉತ್ತರವನ್ನೂ ಕೊಡದೆ ಉಪೇಕ್ಷೆಯಿಂದ ಮುಖವನ್ನು ತಿರುಗಿಸಿ ಕೊಂಡೆನು. ಆದರೆ ಆತ ಬಿಡುವ ಹಾಗಿರಲಿಲ್ಲ. 'ಒಂದು ಕಾಸು ಕೊಡ್ತೀನಿ ಹಾಡು ದಾಸಯ್ಯ, ಎರಡು ಕಾಸು ಕೊಡ್ತೀನಿ ಬಿಡು ದಾಸಯ್ಯ' ಎಂಬ ಗಾದೆಯಂತಾಯಿತು. ಅಷ್ಟುಹೊತ್ತಿಗೆ ರೈಲು ಮದ್ದೂರು ಸ್ಟೇಷನ್‌ಗೆ ಬಂದು ನಿಂತಿತು. ನಾನು ಸ್ವಲ್ಪ ಉಷ್ಣೋಪಚಾರ ಮಾಡಿಕೊಂಡು ಬರೋಣವೆಂದು ಇಳಿದುಹೋದೆ.

೨

ಕಾಫಿ ಕುಡಿದು ಬಂದು ನೋಡಿದರೆ ಆ ಮನುಷ್ಯ ತನ್ನ ಜಾಗ ವನ್ನು ಬಿಟ್ಟು ಕದಲಿರಲಿಲ್ಲ; ಆದ್ದರಿಂದ ಹೊರಗೇ ಶತಪದ ತಿರುಗು

ತ್ತಿದ್ದೆ—ಅವನು ಇಳಿದು ಹೋದಾನೋ ಎಂಬ ಚಪಲ. ಅವನನ್ನು ಇಳಿದು ಹೋಗು ಎನ್ನುವದಕ್ಕೆ ನನಗೆ ಹೆದರಿಕೆ. ಅವನು ಹೋಗದಿದ್ದರೆ? ಇಲ್ಲದೆ ಜಗಳವಾಗಿ ಮೇಲೆ ಬಿದ್ದರೆ? ಅವನು ನೋಡುವುದಕ್ಕೆ ಹುಚ್ಚು ಹುಚ್ಚಾಗಿದ್ದನು. ಹುಚ್ಚನೋ ಏನೋ ಯಾರು ಬಲ್ಲರು? ಕೆಲವರ ಹುಚ್ಚು ಹೀಗೇ ಎಂದು ಹೇಳುವಂತಿರುವುದಿಲ್ಲ; ನಮ್ಮ ಸಂಬಂಧಿಗಳಲ್ಲಿ ಒಬ್ಬರಿಗೆ ಆಗಾಗ ಹುಚ್ಚು ಹಿಡಿಯುತ್ತಿತ್ತು. ಆಗ ಅವರನ್ನು ಬಲ್ಲವರಿಗೆ ಅವರ ಹುಚ್ಚು ಗೊತ್ತಾಗುತ್ತಿತ್ತೇ ಹೊರತು ಇತರರಿಗೆ ಗೊತ್ತಾಗುತ್ತಿರಲಿಲ್ಲ. ಎಲ್ಲರಂತೆಯೇ ಮಾತುಕಥೆ; ಇನ್ನೂ ಹೆಚ್ಚು—ಅದೇ ಒಂದು ವಿಶೇಷ. ಮಾತು ಎಷ್ಟು ಕಮ್ಮಿಯಾದರೆ ಅಷ್ಟು ಹುಚ್ಚು ಇಳಿಯಿತು ಎಂತ ನಿರ್ಧಾರ; ಮಾತೇ ಆಡದೇ ಪರಮಮೌನಿಯಾಗಿದ್ದರೆ ಅದು ಶುದ್ಧ ಆರೋಗ್ಯಲಕ್ಷಣ; ಆಗ "ಉಸ್ ಉಸ್" ಎಂತ ನಿಟ್ಟುಸಿರು ಬಿಡುತ್ತ ಮೈ ಕೈ ಬಡವಾಗಿ ಒಂದು ತಿಂಗಳು ಕಾಯಿಲೆ ಬಿದ್ದವನಂತಿರುತ್ತಿದ್ದನು. ಅವನಿಗೆ ಹುಚ್ಚು ರೇಗಿತೆಂದರೆ ಆ ಬಲವೂ ಕಳೆಯೂ ಎಲ್ಲಿ ಬಂದುಬಿಡುತ್ತಿತ್ತೋ! ನಾಲ್ಕಾರು ಜನ ಹಿಡಿದರೂ ನಿಲ್ಲಿಸುವುದಕ್ಕಾಗುತ್ತಿರಲಿಲ್ಲ. ಇದೆಲ್ಲ ಜ್ಞಾಪಕಕ್ಕೆ ಬಂದು ಸುಮ್ಮನಾಗಿಬಿಟ್ಟೆ. ರೈಲು ಹೊರಡುವ ಹೊತ್ತಾಯಿತು. ವಿಧಿಯಿಲ್ಲದೆ ಒಳಗೆ ಹತ್ತಿ ಕುಳಿತೆ. ನನ್ನ ಗಂಟುಮುಟ್ಟೆಗಳು ಸ್ವಲ್ಪ ಹೆಚ್ಚಾಗಿಯೇ ಇದ್ದುವು. ಅವುಗಳನ್ನು ಹೊರುವುದು ತಾನೇ ಹೇಗೆ?—ಕೋರುರುಮಾಲು ಸುತ್ತಿಕೊಂಡು! ಇಷ್ಟು ಹೊತ್ತಿಗೆ ಕೆಡ್ಡಾ ಶಾಮೈಂಗಾರ್ರ ಕಥೆಯನ್ನು ಹೇಳಿದ ಮುದುಕನೂ ಹುಚ್ಚನಂತಿದ್ದ ಹರಕು ಅಂಗಿಯ ಮನುಷ್ಯನೂ ಎದುರುಬದುರಿಗೆ ಕುಳಿತು ಮಾತನಾಡುತ್ತಿದ್ದರು. ನಾನು "ಕಂತೆಗೆ ತಕ್ಕ ಬೊಂತೆ" ಎಂದುಕೊಂಡೆ. ಮುದುಕರು ಮಾತು ಕೇಳುತ್ತ ಕೇಳುತ್ತ ನಶ್ಯವನ್ನು ತಿಕ್ಕಿಯೇ ತಿಕ್ಕಿದರು. ಕೊನೆಗೆ ಹುಚ್ಚನಂತಿದ್ದವನು "ಇಗೊಳ್ಳಿ ಸ್ವಾಮಿ! ಇದೇ ಅದು" ಎಂದು ತನ್ನ ಹತ್ತಿರ ಇದ್ದ ಒಂದು ಸಣ್ಣ ಗಂಟಿನಿಂದ ಒಂದು ಸೊಗಸಾದ ಕೋಟನ್ನು ತೆಗೆದು ತೋರಿಸಿದನು. ಆಗ ಅವರಿಗೆ ಜ್ಞಾನೋದಯವಾದಂತಾಗಿ "ಹುಂ, ನಶ್ಯ ಮಾಡಿದ್ದು ಹೆಚ್ಚಾಯಿತೇನೋ!" ಎಂದು ಗೊಣಗಿಕೊಂಡು ಎರಡು ಮೂರು ಸಾರಿ

ಅದನ್ನು ಸೇದಿ ಕಣ್ಣು ಕೆಂಪಗೆ ಮಾಡಿಕೊಂಡು 'ಹಹಹ!' ಎಂದು ಗಂಟಲು ಸರಿಮಾಡಿಕೊಂಡು ಆ ಕೋಟನ್ನು ಬಿಚ್ಚಿ ನೋಡಿದರು. ಒಳ್ಳೆಯ ಟ್ವೀಡು ಕೋಟು. ನನ್ನ ಅನುಮಾನ ಇನ್ನೂ ಹೆಚ್ಚಾಯಿತು. "ಹುಚ್ಚಿನ ಜೊತೆಗೆ ಕಳ್ಳತನವೂನೋ!" ಎಂದುಕೊಂಡೆ; ಅದನ್ನು ಕೇಳುವುದು ಹೇಗೆ? ಕಳ್ಳನನ್ನು 'ನೀನು ಕಳ್ಳನೇ?' ಎಂದು ಕೇಳ ಬಹುದೇ? ಆದ್ದರಿಂದ ಸುಮ್ಮನಿದ್ದೆ. ಕೋಟು ಚೆನ್ನಾಗಿತ್ತು. ಆದ್ದರಿಂದ ಬಹಳ ಹೊತ್ತು ಸುಮ್ಮನಿರಲು ಆಗಲಿಲ್ಲ.

"ಅದು ಯಾರದ್ದು ಸ್ವಾಮಿ ಕೋಟು? ಖರೀದಿಗೆ ಬಂದಿದೆ ಯೇನು?" ಎಂದು ಕೇಳಿದೆ—ಕೋಟು ಅಷ್ಟು ಹೊಸದಾಗಿತ್ತು.

ಆತ ಸುಮ್ಮನಿದ್ದನು. ಮಾತನಾಡುವುದಕ್ಕೆ ಮನಸ್ಸಿದ್ದಂತೆ ತೋರಲಿಲ್ಲ; ಮುಖವು ಜೋಲುಬಿದ್ದಿತ್ತು. ಕಣ್ಣಿನಿಂದ ನೀರು ಬರು ತ್ತಿದ್ದದ್ದನ್ನು ತನ್ನ ಕೊಳಕು ಪಂಚೆಯಿಂದ ಒರಸಿಕೊಳ್ಳುತ್ತಿದ್ದನು.

ಮುದುಕರು "ಯಾಕೆ ಸ್ವಾಮಿ? ಅವರದೇ!" ಎಂದರು. ನನಗೆ ಆಶ್ಚರ್ಯವಾಯಿತು. ಆತನಿಗೆ ಇಂಥ ಕೋಟು ಎಲ್ಲಿ ಬರಬೇಕು! ಯಾರಾ ದರೂ ಎಲೆ ಅಡಿಕೆ ದಕ್ಷಿಣೆ ಇಟ್ಟು ಸದ್ಬ್ರಾಹ್ಮಣ ಎಂದು ಕರೆದು ದಾನ ಕೊಟ್ಟರೇನೋ ಎಂದುಕೊಂಡು "ಹಾಗಾದರೆ ಯಾಕೆ ಹಾಕಿಕೊಳ್ಳುವು ದಿಲ್ಲ? ಹೊಸ ಅಂಗಿ ಇಟ್ಟುಕೊಂಡು ಹರುಕು ಅಂಗಿಯೇ?" ಎಂದೆ.

"ಹಾಕಿಕೊಳ್ಳಬೇಕಾದರೆ ಅದಕ್ಕೆ ತಕ್ಕ ಯೋಗ್ಯತೆ ಬೇಕೋ ಬೇಡವೋ ಸ್ವಾಮಿ! ಈಗಾಗಲೇ ನನ್ನನ್ನು 'ಹುಚ್ಚ' ಎಂತ ಅಟ್ಟುತ್ತಿ ದ್ದಾರೆ. ಇನ್ನು ಅದನ್ನು ಹಾಕಿಕೊಂಡರೆ 'ಕಳ್ಳ' ಅಂತ ಬಂದೀಖಾ ನೆಗೆ ಕಳುಹಿಸುವುದು ಒಂದು ಬಾಕಿಯಾಗುತ್ತದೆ!"

"ಹುಚ್ಚಾಗುವುದಕ್ಕೆ ನಿಮಗೇನು ಸ್ವಾಮಿ? ಹುಚ್ಚು ಅಂದ ರೇನು ಕಳ್ಳತನ ಅಂದರೇನು? ಹಾಗಾದರೆ ಈ ಕೋಟು ಹೇಗೆ ಬಂತು ನಿಮಗೆ?"

"ಕೊಟ್ಟರು ಸ್ವಾಮಿ ಯಾರೋ ದಣಿಗಳು ತಮ್ಮಂಥವರು, ಬಡ ವರ ಬಗ್ಗರ ಕಷ್ಟ ಬಲ್ಲವರು, ಮಕ್ಕಳ ಹೆತ್ತವರು!"

"ಬರೀ ಕೋಟನ್ನು ಯಾಕೆ ಕೊಟ್ಟರು!"

" ಇನ್ನೇನು ಕೊಡಬೇಕಾಗಿತ್ತು ಸ್ವಾಮಿ? ಈ ಹರುಕು. ಕೋಟೆ ನಲ್ಲೇ ನೋಡುವುದಕ್ಕೆ ಹೋಗಿದ್ದೆ; ನಾನು ಅವರ ಇಲಾಖೆಯವನು ಅಂತ ತಿಳಿಯಿತು ನನ್ನ ಅರ್ಜಿಯನ್ನು ತೆಗೆದುಕೊಂಡು, 'ಈಗ ಕೆಲಸ ವಿದೆ ನಾಡಿದ್ದು ಬನ್ನಿ' ಎಂದು ಹೇಳಿಕಳುಹಿಸಿದರು. ಮೂರನೆಯ ದಿವಸ ಹೆಡ್ ಗುಮಾಸ್ತರು ನರಸಿಂಗರಾಯರನ್ನು ಹೋಗಿನೋಡಿದೆ. ಅವರು 'ನಿನ್ನ ಅರ್ಜಿ ನನ್ನ ಹತ್ತಿರಕ್ಕೆಬಂದಿದೆ. ಇದೇನು ಬರವಣಿಗೆ! ಒಂದು ಕಟ್ಟು ಕಾಗದದಲ್ಲಿ ಬರೆಯಬೇಕಾದ್ದನ್ನ ಒಂದು ಗಜದಲ್ಲಿ ಬರೆದಿದ್ದೀ ಯಲ್ಲಾ ಓದುವುದೇ ಕಷ್ಟವಾಗಿದೆ'ಎಂದರು. 'ಏನು ಮಾಡಲಿ ಮಹಾ ಸ್ವಾಮಿ! ಸಂಬಳ ಬಂದು ಒಂದು ವರ್ಷವಾಯಿತು; ಸರ್ಕಾರದ ನೌಕರ ರಿಗೆ ಸಂಬಳ ಬರದಿದ್ದರೆ ಹೊಟ್ಟೆಗೇನುಗತಿ? ಹೊಟ್ಟೆಗೆ ಸಂಪಾದಿಸಲೇ, ಬಟ್ಟೆ ಹವಣಿಸಿಕೊಳ್ಳಲೇ, ಕಾಗದಕಡ್ಡಿ ಸಾದಿಲ್ವಾರು ಹುಡುಕಿಕೊಂಡು ಹೋಗಲೇ! ಎಷ್ಟುಅರ್ಜಿ ಬರೆಯಲಿ ದೇವರು! ಈಗಾಗಲೇ ಒಂದು ಕಟ್ಟು ಕಾಗದವಾಗಿರಬಹುದು; ಒಂದು ಸಾವಿರ ಅರ್ಜಿ ಆಗಿರಬಹುದು: ಕಂಡ ಕಂಡ ದೇವರಿಗೆಲ್ಲಾ ಕೈಮುಗಿದದ್ದಾಯಿತು. ನಾಲ್ಕು ನಾಲ್ಕು ಸಾರಿ, ಹತ್ತು ಹತ್ತು ಸಾರಿ ಆಯಿತು. ಇಷ್ಟು ಕಾಗದದಲ್ಲಿ ರಾಮನಾಮ ವನ್ನು ಬರೆದು ಹಾಕಿದ್ದರೆ, ರಾಮ ನಮ್ಮಪ್ಪ, ಇಷ್ಟುಹೊತ್ತಿಗೆ ಈ ಕಷ್ಟ ಪಾರುಮಾಡಿ ತನ್ನ ಪಾದವನ್ನಾದರೂ ಸೇರಿಸಿಕೊಂಡು ಬಿಡುತ್ತಿದ್ದ. ಈ ಹಾಳು ಜನ್ಮ ನೀಗಿಕೊಂಡು ಬಿಡಬಹುದಾಗಿತ್ತು' ಎಂದೆ. "

" ಯಾಕೆ? ಅರ್ಜಿ ಯಾರಿಗೆ ಕೊಟ್ಟೆರಿ? "

" ಯಾರಿಗೇ ಅಂತ ಹೇಳಲಿ ಸ್ವಾಮಿ? ಎಲ್ಲರಿಗೂ ಕೊಟ್ಟೆ; ಯಾರು ಯಾರು ನಮ್ಮ ಮೇಲ್ಪಟ್ಟ ಅಧಿಕಾರಿಗಳು ಎಂತ ಇದ್ದರೋ ಎಲ್ಲರಿಗೂ ಕೊಟ್ಟೆ. ಕೆಲವರು ಹುಚ್ಚ ಅಂತ ಅಟ್ಟಬಿಟ್ಟರು; ಮತ್ತೆ ಕೆಲವುಕಡೆ ದಫೇದಾರರು ಕೈಬೆಚ್ಚಗಾಗದೆ ಒಳಗೇ ಬಿಡುತ್ತಿರಲಿಲ್ಲ; ತಿಂದರೂ ತಿಂದುಕೊಂಡು ಹೋಗಲಿ ಅವರ ಬಾಯಿಗೂ ಹಾಕಿಬಿಡೋಣ, ತಿಂದರೂ ನಮ್ಮೋನೇ ತಿಂತಾನೆ ಎಂದರೆ, ವಿಷತೆಗೆದುಕೊಳ್ಳುವುದಕ್ಕೂ ಕೈಲಿ ಒಂದು ಕಾಸು ಇರಲಿಲ್ಲ. "

" ಈಗ ಬರುವುದು ಇನ್ನು ಎಂಟುದಿನದ ಹಿಂದೆ ಬಂದಿದ್ದರೆ ಇಲ್ಲೂ

ಅದೇ ಗತಿಯಾಗುತ್ತಿತ್ತೋ ಏನೋ ಯಾರಿಗೆ ಗೊತ್ತು ! ”

“ ಇರಬಹುದು ಸ್ವಾಮಿ. ಈಗ ಎಂಟು ದಿನಗಳ ಕೆಳಗೆ ನನಗೆ ಶನಿ ದೃಷ್ಟಿ ಮುಂದಕ್ಕೆ ಆಯಿತು—ಅದು ಅಗಲಿ ಅಂತ ಕಾದುಕೊಂಡಿದ್ದೆ.”

“ ನಿನಗೊಬ್ಬನಿಗೇ ಅಲ್ಲ ಶನಿದೃಷ್ಟಿ ಮುಂದಕ್ಕೆ ಆದದ್ದು; ನಿನ್ನ ಹಾಗೆ ಎಷ್ಟೋ ಜನಕ್ಕೆ ಆಯಿತು.”

“ ಹೌದು ಮಹಾಸ್ವಾಮಿ; ನನ್ನದು ಮಕರರಾಶಿ; ಮಕರರಾಶಿಯ ವರಿಗೆಲ್ಲರಿಗೂ ಇನ್ನು ಮೇಲೆ ಒಳ್ಳೆಯದೇ.”

ಅವರು ನಕ್ಕು “ ನಿಮಗೆ ಜ್ಯೋತಿಷ ಬೇರೆ ಬರುವ ಹಾಗೆ ಕಾಣು ತ್ತದೆ ? ” ಎಂದರು.

“ ಜ್ಯೋತಿಷವೂ ಬರುತ್ತೆ ವೈದ್ಯವೂ ಬರುತ್ತೆ ಸ್ವಾಮಿ ; ಅದರಿಂದ ಏನೋ ಇದುವರೆಗೆ ಜೀವ ಅಂಟಿಕೊಂಡಿದೆ.''

“ ಚೆನ್ನಾಗಿ ಬರುತ್ತೇನು ? ''

“ ಚೆನ್ನವೇನು ಸ್ವಾಮಿ ಅಷ್ಟರಲ್ಲೇ ಇದೆ ; ಹಳ್ಳಿಯವರ ಜ್ಞಾನ ; ಪಂಚಾಂಗದಲ್ಲಿರೋದನ್ನು ಓದಿ ಹೇಳೋದು ; ನಾರು ಬೇರು ಕಷಾಯ ತಿಳಿದಿದ್ದನ್ನು ಮಾಡುವುದು.''

“ ಹಾಗಾದರೆ ಸರ್ಕಾರಿ ನೌಕರಿಗೆ ಏಕೆ ಒದ್ದಾಡಬೇಕು ? ”

“ ಈಗ ಜ್ಯೋತಿಷ ಯಾರಿಗೆ ಬೇಕು, ವೈದ್ಯ ಯಾರಿಗೆ ಬೇಕು ಸ್ವಾಮಿ ? ಈಗ ಹಳ್ಳಿ ಹಳ್ಳಿಗೂ ಆಸ್ಪತ್ರೆ ; ಅಲ್ಲಿ ಅವರು ಬರೀ ಬಣ್ಣದ ನೀರು ಕೊಡಲಿ ಅದು ಪಾವನವೇ ಹೊರತು ನಾಡು ವೈದ್ಯ ಯಾರಿಗೆ ಬೇಕು ? ನನಗೆ ಬರುವ ಔಷಧಿ ಹಿಂದಿನ ಕಾಲದಲ್ಲಿ ಊರಿನವರೆಲ್ಲರಿಗೂ ಗೊತ್ತಿರುತ್ತಿತ್ತು. ಆಸ್ಪತ್ರೆಗಳು ಷಾಪುಗಳು ಬಂದು ಅವೆಲ್ಲಾ ಮರೆತು ಹೋಗಿ ಎಲ್ಲಾ ದುಡ್ಡಿನ ಮೇಲೆ ಬಂದುಬಿಟ್ಟಿತು; ಆದರೆ ನಮ್ಮ ಯಜಮಾನರು ಮೂಲವ್ಯಾಧಿ ಉಪದ್ರವಕ್ಕೆ ಒಂದು ಮೂಲಿಕೆಯನ್ನು ತೋರಿಸಿಕೊಟ್ಟಿದ್ದರು ; ಅದನ್ನು ಪ್ರಯೋಗಿಸಿ ನಾಲ್ಕು ಕಾಸು ಸಂಪಾದಿ ಸುತ್ತಿದ್ದೆ.”

“ ಮೂಲವ್ಯಾಧಿ ಮೂಲಿಕೆಯಿಂದ ಗುಣವಾಗುತ್ತದೆಯೇ ? ಎರಡೆ ರಡು ಮೂರು ಮೂರು ಸಲ ಆಪರೇಷನ್ ಮಾಡಿಸಿಕೊಂಡು ಇನ್ನೂ

ನರಳುವವರು ನರಳುತ್ತಿದ್ದಾರೆ.! ''

" ಏನೋ ಸ್ವಾಮಿ, ಆ ಸೊಪ್ಪಿನ ಕರಾಮತ್ತು! ಎಷ್ಟೋ ಜನಕ್ಕೆ ಗುಣವಾಗಿದೆ.''

" ಹಾಗಾದರೆ ಅದು ಒಂದು ತಿಳಿದರೆ ಸಾಕು ಬೇಕಾದಷ್ಟು ಸಂಪಾದಿಸಬಹುದಲ್ಲ !"

"ಸಂಪಾದನೆಗೆ ಹೊರಟರೆ ಅದರ ಕರಾಮತ್ತು ಹೋಗಿಬಿಡುತ್ತದೆ ಯಂತೆ ಸ್ವಾಮಿ ; ರೋಗಿಗಳೇ ಸಂತೋಷದಿಂದ ತಂದುಕೊಟ್ಟರೆ ಅಷ್ಟನ್ನು ತೆಗೆದುಕೊಂಡು ಅದರಲ್ಲಿ ಅರ್ಧ ದಾನವಮಾಡಿ ಮಿಕ್ಕಅರ್ಧವನ್ನು ಉಪಯೋಗಿಸಿಕೊಳ್ಳಬಹುದಂತೆ."

" ಎಲ್ಲಾ ಹುಚ್ಚು ; ಯಾಕೋ ನಮ್ಮ ಯಕ್ಷಿಣಿಯವರು ದುಡ್ಡು ಮಾಡುತ್ತಾರಲ್ಲಾ ಹಾಗಾಯಿತು."

" ಹೋಗಲಿ, ಸಂಬಳ ಯಾಕೆ ಬರಲಿಲ್ಲ ? "

" ಆಗಲೇ ಹೇಳಿದೆನಲ್ಲಾ ಮಹಾಸ್ವಾಮಿ ! ಹುಚ್ಚು ಅಂತ ಕೆಲಸ ದಿಂದ ತೆಗೆದುಬಿಟ್ಟರು."

" ನಿಮಗೆ ಎಂದಾದರೂ ಹುಚ್ಚು ಹಿಡಿದಿತ್ತೋ ? "

" ಅದೊಂದು ಉಳಿದಿತ್ತು ಸ್ವಾಮಿ ! "

" ಹಾಗಂದರೆ "

" ಈಗಿನ ಹಳ್ಳಿಗಾಡಿನ ಸ್ಥಿತಿಯಲ್ಲಿ ಹುಚ್ಚು ಹಿಡಿಯದೇ ಇರ ಬೇಕಾದರೆ, ಧರ್ಮ ಕರ್ಮ, ದೇವರು ದಿಂಡರು, ಸತ್ಯ ನ್ಯಾಯ ಎಲ್ಲ ಬಿಟ್ಟವರಿಗೇ ಸಾಧ್ಯ."

" ಯಾಕೆ ? "

" ಯಾಕೆ ಅಂದರೆ ಏನು ದೇವರು ? ತಾವು ಮೈಸೂರು ಬೆಂಗ ಳೂರು ಷಹರುಗಳಲ್ಲಿದ್ದೀರಿ; ತಮಗೆ ಹ್ಯಾಗೆ ತಿಳಿದೀತು ? "

" ನಾವು ಹಳ್ಳಿ ಪಳ್ಳಿಗೆ ಬರದೇ ಇರುವುದಕ್ಕಾಗುತ್ತದೆಯೆ ? ತಿಂಗಳಿಗೆ ಇಪ್ಪತ್ತು ದಿನ ಸರ್ಕೀಟು ಇದ್ದೇ ಇರುತ್ತದೆ ! "

" ಸರ್ಕೀಟು ಬಂದಾಗ ಅಧಿಕಾರಿಗಳಿಗೆ ಆಗುವ ಸರಬರಾಯಿ ನೋಡಿಕೊಂಡು ತಾವು ಅಪ್ಪಣೆ ಕೊಡುತ್ತೀರಿ ; ಇದು ಜಾತ್ರೆಕಾಲದಲ್ಲಿ

ನಮ್ಮೂರಿನಲ್ಲಿ ಸೇರುವ ಪರಸೆ ನೋಡಿಕೊಂಡು ನಮ್ಮ ಹಳ್ಳಿಯೂ ನಿಮ್ಮ ಷಹರೂ ಒಂದೇ ಎಂದು ಹೇಳುವ ಹಾಗಾಯಿತು"

"ಅದೇನು ನಿಮ್ಮೂರಿನಲ್ಲಿ ತೊಂದರೆ? ನಮ್ಮೂರಿನ ಹಾಗೆ ನಲ್ಲಿಗಳಿಲ್ಲದಿರಬಹುದು, ತರಕಾರಿ ಸಿಕ್ಕದಿರಬಹುದು, ನಾಟಕ ಸಿನಿಮಾ ಸಂಗೀತ ಇವೆಲ್ಲಾ ಇಲ್ಲದಿರಬಹುದು ಅಷ್ಟೇ ತಾನೆ!"

"ಸ್ವಾಮಿ, ತಾವೆಲ್ಲಾ ಪುಣ್ಯವಂತರ ಮಾತನಾಡುತ್ತೀರಿ. ತರ್ಕಾರಿ ಯಾರಿಗೆ ಬೇಕು, ಸಿನಿಮಾ ಯಾರಿಗೆ ಬೇಕು? ಒಂದು ತುತ್ತು ಅನ್ನ ತಿಂದರೆ ಸಾಲದೆ! ಯಾವ ಗಳಿಗೆಯಲ್ಲಿ ಏನೋ ಎಂದು ಎಡಗೈಯಲ್ಲಿ ಜೀವ ಹಿಡಿದುಕೊಂಡಿರದೆ ನೆಮ್ಮದಿಯಾಗಿದ್ದರೆ ಸಾಲದೆ?—ಎನ್ನುತ್ತ ನಿಟ್ಟುಸಿರು ಬಿಟ್ಟ.''

"ಕೂತುಕೊಳ್ಳಿರಿ''

"ಇರಲಿ ಸ್ವಾಮಿ, ಇದೇನು?''

ಅವರಿಗೆ ನನ್ನ ಮೇಲೆ ಏನೋ ಕರುಣ ಬಂದಂತೆ ತೋರಿತು.

"ನೀವು ಬಹಳ ಸಂಕಟಪಟ್ಟಂತಿದೆ; ಕೂತುಕೊಳ್ಳಿ; ಕೂತುಕೊಂಡು ಹೇಳಿ."

"ಏನು ಮಾಡೋಣ ಸ್ವಾಮಿ, ಈಗ ಯಾವ ಹಳ್ಳಿಯಲ್ಲಿ ನೋಡಲಿ, ಪಾರ್ಟಿಗಳು; ಒಬ್ಬರ ಮೇಲೆ ಒಬ್ಬರ ಕಚ್ಚಾಟ; ಶಾನುಭೋಗರು ಪಟೇಲರು ಸ್ಕೂಲು ಮೇಷ್ಟರುಗಳು ಜಮೇದಾರ್‍ರು ಇವರಿಗೆ ಪ್ರಾಣಸಂಕಟ; ಆ ಕಡೆ ಸೇರುವುದಕ್ಕಿಲ್ಲ ಈ ಕಡೆ ಸೇರುವುದಕ್ಕಿಲ್ಲ....."

"ಎರಡು ಕಡೆಗೂ ಸೇರಿಕೊಳ್ಳುವುದು; ಆರು ದೋಸೆ ಕೊಟ್ಟರೆ ಅತ್ತೆಕಡೆ, ಮೂರು ದೋಸೆ ಕೊಟ್ಟರೆ ಸೊಸೆಕಡೆ. ಅಂತೂ ಇಂತೂ ಒಂಬತ್ತು ದೋಸೆ ಹೊಡೆಯುವವನೇ ಜಾಣ."

"ಅದೇನೋ ನಿಜ, ಸ್ವಾಮಿ; ಅಂಥವರೇ ಹೆಚ್ಚು ಜನ. ಅದೆಲ್ಲಾ ನಮ್ಮಂಥ ಗೊಡ್ಡುಗಳಿಗಲ್ಲ ಸ್ವಾಮಿ; ನಾನು ಹಿಂದೆಯೇ ಹೇಳಲಿಲ್ಲವೇ ಧರ್ಮ ಕರ್ಮ ಎಲ್ಲ ಬಿಟ್ಟು ಬಿಡಬೇಕು ಹಳ್ಳಿಯಲ್ಲಿ ಇರಬೇಕಾದರೆ ಅಂತ! ಪಟ್ಟಣವಾಸ ಸಾವಿರಪಾಲಿಗೆ ವಾಸಿ ಸ್ವಾಮಿ; ಅಷ್ಟಲ್ಲದೆ ಕೆಟ್ಟು ಪಟ್ಟಣ ಸೇರು ಅಂತ ಗಾದೆ ಮಾಡಿದಾರೆಯೇ?''

" ಹಾಗಾದರೆ ಯಾವ ಕಡೆಗೂ ಹೋಗದೆ ಸುಮ್ಮನೆ ಇದ್ದು ಬಿಟ್ಟರೆ ಸರಿ ! "

" ಇರಗೊಡಿಸಿದರೆ ! ಇಲ್ಲದೆ ಹೋದರೂ, ನಾವು ಒಬ್ಬೊಬ್ಬರೇ ಆದರೆ ಹೇಗಾದರೂ ಇರಬಹುದು ಸ್ವಾಮಿ; ಬೈದಾದರೂ ಬೈದುಕೊಳ್ಳಲಿ ತಲೆಯಾದರೂ ಒಡೆದುಕೊಳ್ಳಲಿ ಅನ್ನಬಹುದು ; ಹೆಂಗಸರು ಮಕ್ಕಳು ಇರುತ್ತಾರಲ್ಲಾ ಸ್ವಾಮಿ ! "

" ಇರಲಿ; ಅವರನ್ನೇನು ಮಾಡುತ್ತಾರೆ ? "

" ಏನು ಮಾಡುತ್ತಾರೆಯೇ ? ಏನು ಮಾಡುವುದಿಲ್ಲ ಸ್ವಾಮಿ ! ದುರ್ಬೋಧನೆ ಮಾಡುತ್ತಾರೆ, ಮಾಡಬಾರದ್ದು ಮಾಡುತ್ತಾರೆ. ನಮ್ಮ ಹೆಂಗಸರಿಗೆ ವಿವೇಕವಿದ್ದಿದ್ದರೆ ಇಷ್ಟೇಕಾಗುತ್ತಿತ್ತು ಸ್ವಾಮಿ, ಇಷ್ಟೇಕಾಗು ತ್ತಿತ್ತು ! ಈ ಗಂಡ ಸೂಳೆಮಗನೂ ಸ್ವಲ್ಪ ತಿಳಿದವನು, ಇವನ ಮಾತು ಕೇಳೋಣ ಅನ್ನುವಹಾಗಿದ್ದರೆ ಯಾಕೆ ಚಿಂತೆ ಪಡಬೇಕಾಗಿತ್ತು….."

" ಹೋಗಲಿ ಬಿಡಿ, ನಿಮ್ಮ ಮಾತು ಹೇಳಿ. "

" ನನ್ನ ಮಾತೇ ಸ್ವಾಮಿ ! ನನ್ನ ಹೆಂಡತಿಗೇ ಯಾರೋ ದುರ್ಬೋಧನೆ ಮಾಡಿದರು ; ಅವಳು ಯಾವನ ಜೊತೆಯೋ ಓಡಿ ಹೋದಳು ; ಮುತ್ತಿನಂಥ ಮಗನಿದ್ದ ; ಸ್ಕೂಲಿನಲ್ಲಿ ಚೆನ್ನಾಗಿ ಓದು ತ್ತಿದ್ದ ; ಹೊಟ್ಟೆಕಿಚ್ಚಿಗೆ ಅವನನ್ನ ಯಾರೋ ಏನೋ ಮಾಡಿಬಿಟ್ಟರು ; ಹೀಗಾದರೆ ಯಾರಿಗೆ ಮನಸ್ಸು ಸಮಾಧಾನವಾಗಿದ್ದೀತು ಸ್ವಾಮಿ ? ಇನ್ನು ಹುಚ್ಚೂ ಹಿಡಿಯಬೇಕೇ ? ನನ್ನನ್ನೂ ಯಾರಾದರೂ ಕೊಂದರೆ ಸಾಕೆಂದು ಹುಚ್ಚನ ಹಾಗೆ ಅಲೆಯುತ್ತಿದ್ದೆ ; ನನಗೆ ಆಗದವರು ಇನ್ಸ್ಪೆಕ್ಟರಿಗೆ ಒಂದು ಮೂಗರ್ಜಿಯನ್ನು ಹಾಕಿದರು. ಇನ್ಸ್ಪೆಕ್ಟರು ನನ್ನ ಅವಸ್ಥೆಯನ್ನು ನೋಡಿ ಹುಚ್ಚನೆಂದು ತಿಳಿದುಕೊಂಡರೋ, ನನ್ನ ದ್ವೇಷಿಗಳಿಂದ ಕೈಬೆಚ್ಚಗೆ ಮಾಡಿಸಿಕೊಂಡರೋ, ಇಲ್ಲ ಅವರಿಗೆ ಹೆದರಿ ಕೊಂಡರೋ ಆ ಪರಮೇಶ್ವರನೇ ಬಲ್ಲ ! ನನ್ನನ್ನು ಬರತರಫ್ ಮಾಡಿಸಿ ಬಿಟ್ಟರು. ನಮ್ಮ ಸಂಕಟ ನೋಡಿದರೆ ಹೀಗೆ ! ಯಾವ ಪೇಪರಿನಲ್ಲಿ ನೋಡಲಿ, ಈ ಸ್ಕೂಲು ಮೇಷ್ಟರು ಶ್ಯಾನುಭೋಗರು ಪೋಲಿಸಿನವರು ಇವರ ಕಾಟ ಸಹಿಸುವುದಕ್ಕಾಗುವುದಿಲ್ಲ ; ಎಲ್ಲಾ ಅನರ್ಥಕ್ಕೂ ಇವರೇ

ಮೂಲ ಎಂದು ಕೂಗಿಕೊಳ್ಳುತ್ತಾರೆ.''

" ನೀವು ತಿರುಗಿ ಇನ್ಸ್‌ಪೆಕ್ಟರನ್ನು ಕಂಡು ಹೇಳಿಕೊಳ್ಳಲಿಲ್ಲವೇ?

" ಹುಚ್ಚ ಅಂತ ನನ್ನನ್ನು ಡಿಸ್‌ಮಿಸ್ ಮಾಡಿದ ಮೇಲೆ ನನ್ನನ್ನು ಯಾರು ಸ್ವಾಮಿ ಕೇಳೋರು? ಕೆಳಗಿನಿಂದ ಮೇಲಿನವರೆಗೆ ನಾನು ಎಲ್ಲರಿಗೂ ಹುಚ್ಚನಾಗಿ ಹೋದೆ. ಪೋಸ್ಟ್‌ಮೇಲೆ ಅರ್ಜಿ ಹಾಕಾಯಿತು! ರೂಬುರೂಬು ಕೊಟ್ಟಾಯಿತು; ಎಲ್ಲಾ ಹಾಳುಬಾವಿಗೆ ಹೋಗಿಬಿದ್ದ ಹಾಗೆ ವೇಸ್ಟ್ ಪೇಪರ್ ಬ್ಯಾಸ್ಕೆಟ್ (ಕಸದ ಬುಟ್ಟಿ) ಗೆ ಬಿದ್ದು ಹೋದವು!"

" ಈ ಆಫೀಸಿಗೆ ಅರ್ಜಿ ಹಾಕಿಕೊಂಡಿರಲಿಲ್ಲವೇ?"

" ಇಲ್ಲಿಗೂ ಹಾಕಿಕೊಂಡಿದ್ದೆ ಸ್ವಾಮಿ; ಅದರ ಮೇಲೆ ಕೆಳಗಿನ ಆಫೀಸಿನಿಂದ ರಿಪೋರ್ಟ್ ತರಿಸಿಕೊಂಡರು ಅಂತ ಕಾಣುತ್ತೆ; ಕೆಳಗಿನ ಆಫೀಸ್ ರಿಪೋರ್ಟು ಗೊತ್ತೇ ಇದೆ—ನಾನು ಹುಚ್ಚ ಅಂತ. ಹುಚ್ಚ ನಿಗೆ ಕೆಲಸ ಯಾರು ಕೊಡುತ್ತಾರೆ!"

" ಇವತ್ತು ಊಟ ಎಲ್ಲಿ ಮಾಡಿದಿರಿ?"

" ಎಲ್ಲಿ ಮಾಡಲಿ ಸ್ವಾಮಿ! ಪಟ್ಟಣವಾಸದಲ್ಲಿ ಅನ್ನ ಹಾಕುವ ವರು ಯಾರು?''

" ಅಯ್ಯೋ ಮನುಷ್ಯ, ಹೋಗಿ! ನಿಮ್ಮ ಮನೆ ಎಂಟೆಮ್ಮೆ ಕರೀತು! ನಾರಣಪ್ಪ, ಬೇಗ ಹೋಗಿ ಏನಾದರೂ ಸ್ವಲ್ಪ ತಿಂಡೀನೂ ಎರಡು ಕಪ್ ಕೋಕೋನೂ ತೆಗೆಸಿಕೊಂಡು ಬಾ. ಹೋಗು ಬೇಗ!"

" ಅಷ್ಟು ಹೊತ್ತಿಗೆ ಸಾಹೇಬರು ಹೇಳಿಕಳುಹಿಸಿದರು. ಕರೆಸಿ ನನ್ನ ವಿಚಾರವನ್ನೇ ಕೇಳಿರಬಹುದು. ಮತ್ತೊಂದು ಗಳಿಗೆಗೆ ದಲಾ ಯಿತನು ಬಂದು ನನ್ನನ್ನು ಕರೆದುಕೊಂಡು ಸಾಹೇಬರ ಎದುರಿಗೆ ನಿಲ್ಲಿಸಿ ದನು. ನರಸಿಂಗರಾಯರೂ ಅಲ್ಲೇ ಇದ್ದರು. ಅವರು ನನ್ನ ಅರ್ಜಿ ಯನ್ನು ಇನ್ನೂ ಓದಿರಲಿಲ್ಲ. ಆದರೂ ನನ್ನ ಮಾತಿನಿಂದಲೇ ಎಲ್ಲವನ್ನೂ ಗ್ರಹಿಸಿ ಸಾಹೇಬರಿಗೆ ಹೇಳಿದ್ದಂತೆ ತೋರುತ್ತದೆ. ನನ್ನನ್ನು ನೋಡಿ ದಾಗ ಸಾಹೇಬರ ಮುಖ ಕಂದಿ ಹೋಗಿತ್ತು. ಕಣ್ಣಿನಲ್ಲಿ ನೀರು ತುಂಬಿತ್ತು; ಆ ಎರಡು ಕಣ್ಣುಗಳನ್ನೂ ಎತ್ತಿ ನನ್ನನ್ನು ನೋಡಿದರು.

ನಾನು ದೀರ್ಘದಂಡ ನಮಸ್ಕಾರಮಾಡಿ, ಹೋ ಎಂದು ಗೋಳಾಡುವುದಕ್ಕೆ ಮೊದಲು ಮಾಡಿದೆ. ಸಾಹೇಬರು ಮಾಡಿದ ಸನ್ನೆಯನ್ನರಿತು ಹೆಡ್‌ಗುಮಾಸ್ತರು ತಮ್ಮ ಕಂಕುಳಲ್ಲಿದ್ದ ಈ ಕೋಟನ್ನು ತೆಗೆದುಕೊಂಡು 'ತಗೊಳ್ರೀ ಇದನ್ನು ಹಾಕಿಕೊಳ್ಳಿ, ಸಾಹೇಬರು ಕೊಟ್ಟಿದಾರೆ' ಎಂದರು. 'ಮಹಾಸ್ವಾಮಿ, ಎರಡು ಮಕ್ಕಳಿವೆ; ಹೊಟ್ಟೆಗಿಲ್ಲದೆ ಸಾಯುತ್ತಿವೆ! ನನ್ನ ನೌಕರಿ ನನಗೆ ಕೊಡಿಸಿಕೊಡಬೇಕು, ಹುಚ್ಚ ಕೂಗಾಡುತಾನೆ ಅಂತ ಕೈಬಿಡಬೇಡಿ ತಾವೂನೂ . . . .' ಎಂತ ಅರಿಚುತ್ತಿದ್ದೆ.

"ಸಾಹೇಬರು ಒಂದು ಚೀಟಿಯಲ್ಲಿ ಏನೋ ಗುರುತುಹಾಕಿ ನರಸಿಂಗರಾಯರಿಗೆ ತೋರಿಸಿದರು. ಅವರು 'ಆಯಿತಲ್ಲ ಬಿಡಿ ; ಇನ್ನೇನು ; ದೊರೆಯುತನಕ ದೂರು, ಹೊಳೆಯುತನಕ ಓಟ; ದೊರೆಗಳಿಗೆ ಹೇಳಿ ಆಯಿತಲ್ಲ ನಿಮ್ಮಕೆಲಸವನ್ನು ನಿಮಗೆ ಕೊಡಿಸುವಂತೆ ಆರ್ಡರಾಗಿದೆ. ಇವತ್ತೇ ನಿಮ್ಮ ಇನ್‌ಸ್ಪೆಕ್ಟರವರನ್ನು ಕರೆಸಿ ಸಾಹೇಬರು ಮಾತನಾಡುತ್ತಾರೆ; ಇನ್ನೊಂದು ಸಲ ಈ ಊರಿಗೆ ಬಂದಾಗ ತಿರುಗಿ ಸಾಹೇಬರನ್ನು ಬಂದು ನೋಡಿ, ಹೋಗಿ.' ಎಂದರು.

"ನಾನು ತಿರುಗಿ ಉದ್ದಕ್ಕೆ ಅಡ್ಡಬಿದ್ದೆನು. ಸಾಹೇಬರೂ ಸುಮ್ಮನೆ ಕೈಮುಗಿದರು. ಖರ್ಚಿಗೆಂದು ಹತ್ತು ರೂಪಾಯಿ ಕೊಟ್ಟರು. ನಿನ್ನೆ ರಾತ್ರಿ ನರಸಿಂಗರಾಯರ ಮನೆಯಲ್ಲಿಯೇ ಊಟ ಮಾಡಿಕೊಂಡು ಬರುತ್ತಾ ಇದ್ದೇನೆ."

"ನನಗೂ ಅಯ್ಯೋ ಪಾಪ! ಎನ್ನಿಸಿತು. ನಾನೂ ಏನಾದರೂ ಸಹಾಯ ಮಾಡೋಣ ಅಂದುಕೊಂಡು ಜೇಬಿಗೆ ಕೈಹಾಕಿದೆ. ಊರಿಗೆ ಹೋಗಿ ಇಳಿದರೆ ಜಟಕಾ ಬಾಡಿಗೆಗೆ ಸಾಕು ಸಾಲದಷ್ಟು ದುಡ್ಡು ಇತ್ತು ಆದ್ದರಿಂದ ನನ್ನ ದಾನಬುದ್ಧಿ ಉತ್ಪನ್ನವಾಗುತ್ತಿದ್ದ ಹಾಗೇ ವಿಲೀನವೂ ಆಗಿ ಹೋಯಿತು. ರೈಲು ನಿಂತಿತು. ನನ್ನ ಪಾಡಿಗೆ ನಾನು ಆತನ ಪಾಡಿಗೆ ಆತ ಹೊರಟು ಹೋದೆವು.

ನರಸಿಂಗರಾಯರು ನನಗೆ ಗುರುತು. ಅವರ ಊರಿಗೆ ಹೋದಾಗ ಉದ್ದೇಶ ಪೂರ್ವಕವಾಗಿ ಅವರನ್ನು ಕಂಡೆನು. ಅವರು ಆ ಮಾತು ಈ ಮಾತು ಆಡುತ್ತ ! 'ಎಲ್ಲಿ ಇಳಿದುಕೊಂಡಿದ್ದೀಯೆ ಶ್ರೀಪತಿ? ಸಾಯಂ

ಕಾಲಕ್ಕೆ ನಮ್ಮ ಮನೆಗೇ ಬಾ ಊಟಕ್ಕೆ ' ಅಂದರು.

" ಏನಯ್ಯಾ ನಾನೂ ಹುಚ್ಚ ಅಂತ ತಿಳಿದುಕೊಂಡೆಯೋ? " ಅವರಿಗೆ ದಿಗ್ಭ್ರಮೆಯಾಯಿತು. ನಾನು ಸ್ವಲ್ಪ ಜ್ಞಾಪಿಸಿದೆ. ಅವರು ಬಿದ್ದು ಬಿದ್ದು ನಕ್ಕು

" ಅದು ನಿನಗೆ ಹೇಗೆ ಗೊತ್ತಾಯಿತು ? ನೀನೇ ಕಳುಹಿಸಿದ್ದೆಯೋ ಆ ಹುಚ್ಚನ್ನ ? ಇಲ್ಲ, ನೀನು ಆತನಿಗೇನಾದರೂ ಆಗಬೇಕೋ ? "

" ನೀನೂ ಪರವಾಯಿಲ್ಲ ! ಒಳ್ಳೆಯ ಮಾತಿನಲ್ಲಿಯೇ, ನನಗೆ ಮರ್ಯಾದೆ ಮಾಡುತ್ತೀಯೆ ! ಪಾಪ !....ಅವನು ಹುಚ್ಚನಾದರೆ ನಾವೂ ಎಲ್ಲಾ ಹುಚ್ಚರೇ ! ಯಾರಯ್ಯಾ ಅವನನ್ನು ಹುಚ್ಚ ಎಂದವರು ? ಏನು ಕಂಡು ಹುಚ್ಚ ಅಂತ ಅವನಿಗೆ ಹೆಸರಿಟ್ಟರಯ್ಯಾ ? "

" ಏನೋಪ್ಪ, ಹ್ಯಾಂಲೆಟ್‌ನ ಹುಚ್ಚನ್ನಾದರೂ ತೀರ್ಮಾನಿಸಿ ಹೇಳಬಹುದು, ಅದನ್ನು ಹೇಳುವುದಕ್ಕೆ ಆಗುವುದಿಲ್ಲ. ಸಾಹೇಬರೂ ಒಂದೊಂದು ಸಲ ' ಆತನಿಗೆ ಒಂದು ಸ್ಕ್ರೂ ಲೂಸ್ (ಬುದ್ಧಿಭ್ರಮೆ) ಆಗಿತ್ತು ಅಂತ ಕಾಣತ್ತರೀ ' ಎನ್ನುತ್ತಾರೆ. ಇನ್ನೊಂದುಸಲ ' ಪಾಪ ! ಆ ಬಡಪಾಯಿ ಹ್ಯಾಗಿದ್ದಾನ್ರೀ ? ಆತನಿಗೆ ಪ್ರಮೋಷನ್ ಗಿಮೋಷನ್ ಏನಾದರೂ ಆಯಿತೋ ? ' ಅನ್ನುತ್ತಾರೆ."

೧೯೨೮. ಶ್ರೀಪತಿ.

# ಅಗ್ಗದ ಮದುವೆ

ಈ ವರ್ಷ ಬೇಸಗೆಯ ರಜದಲ್ಲಿ ವೆಂಕಟರಮಣಯ್ಯನವರು ಬೆಂಗಳೂರಿಗೆ ಬಂದಿದ್ದರು. ನಮ್ಮವರು ಬೇಸಗೆಯಲ್ಲಿ ಬೆಂಗಳೂರಿಗೆ ಬಂದು ಸುಖಪಡುವುದು ಅಪರೂಪ. ಬೆಂಗಳೂರು. ಭೂಪಟದಲ್ಲಿ ನಮ್ಮದೇ ಹೊರತು ಸುಖಪಡುವುದರಲ್ಲಿ ಮುಲ್ತಾನಿಗಳದು, ಲಬ್ಬೆಯವರದು; ಮದರಾಸಿನವರದು, ದಕ್ಷಿಣ ದೇಶದವರದು; ಖರ್ಚಿಗೆ ನಮ್ಮದು; ಸಂಪಾದನೆ ಮಾಡುವುದಕ್ಕೆ ಅವರದು. ಈ ಸಲವೇನೋ ಅಂತೂ ವೆಂಕಟರಮಣಯ್ಯನವರು ಬೆಂಗಳೂರಿಗೆ ಬಂದಿದ್ದರು; ಹವಾನೂ ಬಹಳ ತಂಪಾಗಿತ್ತು—ಆದರೆ ಬಂದಿದ್ದದ್ದು ಆ ತಂಪು ಹವಾ ತಿನ್ನುವದಕ್ಕಲ್ಲ; ಏನೋ ತಾಪತ್ರಯದ ಕೆಲಸಕ್ಕೆ. ಮನೆಯಲ್ಲಿ ಮಾತಾಡುತ್ತಾ ಕುಳಿತಿದ್ದೆವು. ಅಂಚೆಯವನು ಕುಂಕುಮ ಹತ್ತಿಸಿದ ಒಂದು ಕಾಗದವನ್ನು ತಂದು ಒಳಕ್ಕೆ ಎಸೆದುಹೋದ. ಬಿಚ್ಚಿ ನೋಡಲು ಲಗ್ನಪತ್ರಿಕೆ. ಯಾರ ಮನೆಯದೋ ಜ್ಞಾಪಕವಿಲ್ಲ; ಮದುವೆಯ ಕಾಲದಲ್ಲಿ ಬರುವ ಲಗ್ನಪತ್ರಿಕೆಗಳನ್ನು ಕೂಡಿಟ್ಟರೆ—ಒಂದೊಂದು ವರ್ಷವೂ ಒಂದೊಂದು ಸೋಮವಾರ ಅಮಾವಾಸ್ಯೆಯ ಅಶ್ವತ್ಥಪ್ರದಕ್ಷಿಣೆಗೆ ಹಾಕಬಹುದು. ಗಂಡು ಸಿಕ್ಕುವುದು ಕಷ್ಟ ಅನ್ನುವುದು ತಪ್ಪುವುದಿಲ್ಲ; ಸಾಲ ಸೋಲ ಅನ್ನುವುದು ನಿಲ್ಲುವುದಿಲ್ಲ; ಮದುವೆಗಳಂತೂ ಕಮ್ಮಿಯಾದದ್ದಿಲ್ಲ. ಶೂನ್ಯಮಾಸವಿಲ್ಲ, ಅಸ್ತಮಾಸವಿಲ್ಲ; ನವಮಿ ಇಲ್ಲ ನವರಾತ್ರಿ ಇಲ್ಲ. ಬ್ಯಾಂಡುಗಳೂ ವಾಲಗಗಳೂ ಆದದ್ದೂ ಆದದ್ದೇ ಮೆರವಣಿಗೆಗಳು ಬಂದದ್ದೂ ಬಂದದ್ದೇ; ಲಗ್ನಪತ್ರಿಕೆಗಳು ಓಡಾಡಿದ್ದೂ ಓಡಾಡಿದ್ದೇ! ಲಗ್ನಪತ್ರಿಕೆಯನ್ನು ಓದಿನೋಡಿ ಅತ್ತಲಾಗಿ ಹಾಕಿ "ಏನಯ್ಯಾ ನಿನ್ನ ಮಗಳ ಮದುವೆ ಮಾಡುವುದಿಲ್ಲವೇ ಈ ಸಾರಿ?" ಎಂದು ಕೇಳಿದೆ.

"ಹೂಂ, ಮಾಡಬೇಕು"—ಎಂದು ಶಾಂತವಾದ ದೀರ್ಘವಾದ ಉತ್ತರ ಬಂತು.

"ನೀನು ಹಾಗೆ ಹೇಳಬಹುದು, ಪರವಾ ಇಲ್ಲ: ನಿನಗೇನು

ಅಳಿಯ ಮನೆಯಲ್ಲಿಯೇ ಇದ್ದಾನೆ; ಮಗಳು ಬೆಳವಳಿಗೆಯಾಗಿಲ್ಲ; ಹದಿಮೂರು ವರ್ಷವಾದರೂ ಹುಡುಗಿಗೆ ಲಂಗ ಸುತ್ತಿಸಿ ತಿರುಗಿಸುತ್ತಿದ್ದೀಯೆ; ವಯಸ್ಸು ಕಾಣುವುದಿಲ್ಲ; ಆತುರಪಡಿಸುವುದಕ್ಕೆ ಹುಡುಗಿಗೆ ತಾಯಿ ಇಲ್ಲ; ಕೈ ತುಂಬ ಸಂಬಳ ಬರುತ್ತಿದೆ; ಯಾವಾಗ ಬೇಕೆಂದರೆ ಆವಾಗ ಬ್ಯಾಂಕಿಗೆ ಒಂದು ಚೆಕ್ಕು ಬರೆದುಕೊಟ್ಟರೆ ದುಡ್ಡಿನ ಸುರಿಮಳೆ ಬಂದು ಬಿಡುತ್ತದೆ."

"ಏನೋ ಶ್ರೀಪತಿ! ನೀನೂ ಹೀಗೆ ಹೇಳುತ್ತೀ? ಸಂಬಳ ಹೆಚ್ಚಾಗಿಬರುವುದು ನಿಜ; ಆದರೆ ನನಗಿರುವಷ್ಟು ಸಾಲ ನಮ್ಮಲ್ಲಿ ಯಾರಿಗಿದೆಯೋ? ಅಳಿಯ ಮನೆಯಲ್ಲಿರುವುದು ನಿಜ. ಆದರೆ, ಮದುವೆಯಾಗುವ ತನಕ ಯಾವುದು ಗೊತ್ತು? ಅವರ ಕಡೆಯವರೂ ಹೊರಗೆಲ್ಲೂ ಕನ್ಯಾ ನೋಡಿಲ್ಲ; ಕನ್ಯಾ ಕೊಡುತ್ತೇವೆಂದು ಬಂದವರಿಗೆ ನನ್ನನ್ನು ಕೇಳಬೇಕೆಂದು ಹೇಳಿದರಂತೆ; ಅದಿರಲಿ; ಹುಡುಗಿಗೂ ವಯಸ್ಸಾಯಿತು. ನೋಡುವುದಕ್ಕೆ ಹಾಗಿದ್ದರೇನು? ಹೆಣ್ಣುಮಕ್ಕಳ ಮಾತು ಹೇಳುವುದಕ್ಕಾಗುವುದಿಲ್ಲ; ಹೆಚ್ಚು ದಿನ ಬಿಡುವಂತಿಲ್ಲ.''

"ನಿನ್ನ ಎರಡನೆಯ ಹುಡುಗಿ ಎಲ್ಲಿ ಕಾಣುತ್ತಿಲ್ಲ? ಅವಳನ್ನು ನೋಡಿ ಶಾನೆ ದಿನವಾಯಿತು. ಇವಳಿಗಿಂತ ಅವಳು ಬೆಳೆವಳಿಗೆ.''

"ಅವಳು ಊರಿನಲ್ಲಿದ್ದಾಳೆ, ಈಗ ಅವಳನ್ನು ನೋಡಿದರೆ ನಿನಗೆ ಗುರುತೇ ಸಿಕ್ಕುವುದಿಲ್ಲ ಅಷ್ಟು ಬೆಳೆದುಬಿಟ್ಟಿದ್ದಾಳೆ!"

"ಹಾಗಾದರೆ ಮುಂದಿನವರ್ಷ ಅವಳ ಮದುವೆಯೂ ಆಗಬೇಕು?"

"ಆಗಬೇಕಪ್ಪ!''

"ನೀನು ಬಿಡು, ಬುದ್ಧಿವಂತ! ಅವಳಿಗೂ ಯಾರನ್ನೋ ಒಬ್ಬ ಹುಡುಗನನ್ನು ತಂದು ಮನೆಯಲ್ಲಿ ಇಟ್ಟುಕೊಂಡಿದ್ದೀಯೋ ಇಲ್ಲವೋ?"

"ಮನೆಯಲ್ಲಿಲ್ಲ— ದೃಷ್ಟಿಯಲ್ಲೇನೋ ಇದಾನೆ."

"ಇನ್ನೂ ಅನುಕೂಲವೇ ಆಯಿತು; ಅವನಿಗೆ ಈಗಿನಿಂದ ಅನ್ನ ಹಾಕಿ ಮರ್ಜಿ ಅನುಸರಿಸುವ ಕಷ್ಟವೇ ತಪ್ಪಿತು. ನಿನ್ನ ಹಾಗಿದ್ದರೆ ಈ ಕಾಲದಲ್ಲಿಯೂ ವರ್ಷಕ್ಕೆ ಹತ್ತು ಹತ್ತು ಮದುವೆ ಮಾಡಬಹುದು!''

ಅಷ್ಟುಹೊತ್ತಿಗೆ ನಮ್ಮ ಮಗುವು ಕುಣಿಯುತ್ತಾ ಬಂದು ತೊಡೆಯ

ಮೇಲೆ ದೊಪ್ಪನೆ ಹೇರಿಕೊಂಡಿತು. ಕೈಯಲ್ಲಿ ಒಂದು ಚಿಗುಳಿ ಉಂಡೆ. ಅದನ್ನು ಮುರಿದು ಮೈಮೇಲೆಲ್ಲಾ ಸುರಿಸಿಕೊಳ್ಳುತ್ತಾ ಒಂದೊಂದು ಚೂರನ್ನು ಬಾಯಿಗಿಟ್ಟುಕೊಳ್ಳುತ್ತ ನನಗೆ ಆಸೆ ತೋರಿಸುತ್ತ ನಮ್ಮ ಮಾತಿಗೆ ಅಡ್ಡಿಮಾಡಿತು. ವೆಂಕಟರಮಣಯ್ಯನವರು "ಎಲ್ಲಿಗೆ ಹೋಗಿದ್ದೆಯಮ್ಮಾ?" ಎಂದು ಕೇಳಿದರು. ಅದು ಮುದ್ದು ಮುದ್ದಾಗಿ ತೊದಲು ತೊದಲಾಗಿ ಅರೆಮಾತಿನಲ್ಲಿ ಏನೇನೋ ಹೇಳಿಬಿಟ್ಟಿತು.— ಮಗ್ಗಲು ಮನೆಯಲ್ಲಿ ಆರತಕ್ಷತೆ; ಕಾವೇರಮ್ಮ ದೊಡ್ಡವಳಾದಳು; ತಾವೆಲ್ಲರೂ ಹೋಗಿದ್ದರು. ತನಗೆ ಬಾಗಿನ ಕೊಡಲಿಲ್ಲ; 'ನನಗೆ' ಎಂತ ಕೇಳಿತು; 'ಅಮ್ಮ' ಬೈದಳು; ಅವಳಿಗೆ ಕೊಟ್ಟ ಬಾಗಿನವನ್ನೇ ಕಿತ್ತುಕೊಂಡಿತು ..........

ಆ ಹುಡುಗಿಗೆ ಮದುವೆಯಾಗಿ ಇನ್ನೂ ಎರಡು ತಿಂಗಳೂ ಆಗಿರಲಿಲ್ಲ. ಮದುವೆಯಲ್ಲಿ ಅವರಿವರ ಮನೆಯಿಂದ ತಂದ ಸಾಮಾನುಗಳನ್ನೇ ಇನ್ನೂ ಪೂರ್ತಿಯಾಗಿ ಕೊಟ್ಟಿರಲಿಲ್ಲ. ಜವಳಿ ಅಂಗಡಿ ಶೆಟ್ಟರ ಅಂಗಡಿಗಳಿಗೆ ಬಾಕಿ ಇನ್ನೂ ಇದ್ದೇ ಇತ್ತು. ಆಗಲೇ ಖರ್ಚಿಗೆ ಆರಂಭವಾಯಿತೋ?—ಎಂದುಕೊಂಡೆ. ವೆಂಕಟರಮಣಯ್ಯನವರಿಗೆ ಸ್ವಲ್ಪ ಯೋಚನೆಗಿಟ್ಟಿತು.

ನಾನು "ಯಾಕಯ್ಯಾ ಏನೋ ಯೋಚನೆಮಾಡುವ ಹಾಗಿದೆ?'' ಎಂದೆ.

"ನಾನೂ ಈ ವರ್ಷವೇ ಯಾಕೆ ಮದುವೆಮಾಡಿಬಿಡಬಾರದು?- ಎಂದು ಯೋಚಿಸುತ್ತಿದ್ದೇನೆ. ಎಂತಿದ್ದರೂ ಮುಂದಿನ ವರ್ಷವಂತೂ ರಂಗನಾಯಕಿಯ ಮದುವೆ ಮಾಡಿತೀರಬೇಕು; ಒಂದು ವರ್ಷ ಎರಡು ಮಾಡುವದಕ್ಕಿಲ್ಲ."

"ಯಾಕೆ, ನಿನಗೂ ಗಾಬರಿಯಾಯಿತೋ?"

"ಹೌದಪ್ಪ ಗಂಡು ನೋಡುವುದು ಎಂದಿದ್ದರೂ ನೋಡಬೇಕು; ಮದುವೆಮಾಡುವುದು ಎಂದಿದ್ದರೂ ಮಾಡಬೇಕು; ಈ ವರ್ಷ ನನ್ನ ತಂಗಿಯ ಪ್ರಸ್ತ ಬೇರೆ ಆಗಬೇಕಾಗಿದೆ; ಹುಡುಗನೂ ಪ್ರಸ್ತಮಾಡಿಕೊಳ್ಳಲು ಒಪ್ಪಿದ್ದಾನೆ—"

"ನನಗೆ ಗೊತ್ತು; ನೀನು ಬಹಳ ಬುದ್ಧಿವಂತ; ಎರಡನ್ನೂ ಒಟ್ಟಿಗೆ ಸೇರಿಸಿ ಖರ್ಚು ಕಡಿಮೆಮಾಡಿಕೊಳ್ಳುವ ಯೋಚನೆಮಾಡಿದೆಯೋ?"

"ಹೌದು ಮತ್ತೆ; ಏನೋ ಸಂದಿಯಲ್ಲಿ ಸಮಾರಾಧನೆ ಮಾಡಿ ಬಿಟ್ಟರೆ ಖರ್ಚು ಕಮ್ಮಿಯಾಗುತ್ತೆ. ನಿಜವಾಗಿಯೂ ನಾನು ಈ ಮದುವೆ ಯನ್ನು ಬಹಳ ಸುಲಭವಾಗಿ ಹತ್ತು ಜನಕ್ಕೆ ಮೇಲ್ಪಂಕ್ತಿಯಾಗಿರುವಂತೆ ಮಾಡಿಬಿಡಬೇಕೆಂದಿದ್ದೇನೆ."

"ಎಷ್ಟಾದರೂ ಒಂದು ಸಾವಿರಕ್ಕೆ ಕಡಿಮೆಯಾಗುತ್ತೇನಯ್ಯಾ?"

"ಒಂದು ಸಾವಿರವೇ? ಇನ್ನೂರು ರೂಪಾಯಿಯಲ್ಲಿ ಮಾಡಿಬಿಡು ತ್ತೇನೆ ನೋಡು! ಹುಡುಗ, ಹುಡುಗನ ತಾಯಿ, ಮನೆಯಲ್ಲಿಯೇ ಇದ್ದಾರೆ; ಹುಡುಗ ಸಾಭ್ಯಸ್ಥ—ಅಳಿಯತನದ ಜಂಭಕ್ಕೆ ಹೋಗುವವನಲ್ಲ; ಈಗ ಒಂದು ವರ್ಷದಿಂದ ನೋಡಿದ್ದೇನೆ; ಕಾಫಿಗೆ ಮೂರು ಕಾಸು ಕೇಳಿದವ ನಲ್ಲ. ಕೊನೆಗೆ ಒಂದೇ ಹರಕು ಪಂಚೆಯುಟ್ಟುಕೊಂಡು ತಿರುಗುತ್ತಿ ದ್ದರೂ—"ನಿನಗೆ ಪಂಚೆಯಿದೆಯೇನೋ?" ಎಂದು ಕೇಳಿದರೆ ಹಿಂದೆ ಮುಂದೆ ನೋಡದೆ ಹೂಂ ಎಂದು ಬಿಡುತ್ತಾನೆ. ನಾನು ಈಗ ಹೋಗಿರು ವುದು ಹೊಸ ಊರು; ಅಲ್ಲಿ ನನಗೆ ಹೆಚ್ಚು ಜನ ಗುರುತು ಕೂಡ ಇಲ್ಲ- ಕೊನೆಗೆ ಲಗ್ನಪತ್ರಿಕೆಯೇ ಅಚ್ಚುಹಾಕಿಸದೆ ಇರುವ ಮನೆಯಲ್ಲಿಯೇ ಲಗ್ನಮಾಡಿದರೂ ಮಾಡಬಹುದು. ಶ್ರೀರಂಗಪಟ್ಟಣದಲ್ಲಿ ಮಾಡಿದರೂ ಮಾಡಬಹುದು."

"ಹೌದು, ವಾಲಗ ಅಡಿಗೆಯವರು—ಇವೆರಡೇ ಇನ್ನೂರು ರೂಪಾಯಿ ಆಗಿಹೋಗುತ್ತದೆಯಲ್ಲ!"

"ನಾನೆಲ್ಲಾ ಹೊಸ ತರಹ ಮದುವೆಮಾಡಿಬಿಡುತ್ತೇನೆ! ವಾಲಗವೇ ಬೇಡ; ಜನ ಬರುವುದು ಅಷ್ಟರಲ್ಲೇ ಇದೆ.—ಬಂದವರು ಹೇಗೋ ಅಡಿಗೆ ಮಾಡಿಕೊಳ್ಳುತ್ತಾರೆ; ಬೇಕಾದರೆ ಜೊತೆಗೆ ನಾವೂ ನಿಂತು ಒಂದು ಕೈ ಕೊಟ್ಟರಾಯಿತು. ಹಳ್ಳಿಯ ಕಡೆಯಲ್ಲೆಲ್ಲಾ ಅಡಿಗೆಯವರೇ ಇರುತ್ತಾರೇನಯ್ಯಾ?"

"ಆಗಬಹುದು; ಮುಖ್ಯವಾಗಿ ಗಂಡಿನವರು ನಿನ್ನ ಸ್ವಾಧೀನ ರಾಗಿದ್ದಾರೆ; ಗಂಡಿನವರು ಒಪ್ಪಿದರೆ ಯಾವ ರಿಫಾರಂ (ಸುಧಾರಣೆ)

ಬೇಕಾದರೂ ಮಾಡಬಹುದು. ಇನ್ನು ಮೇಲೆ ಮದುವೆ ಸುಲಭವಾಗು ವುದು ಗಂಡಿನವರ ಕೈಯಲ್ಲಿದೆ.”

ಹಾಗಾದರೆ ಮಾಡಿ ನೋಡಿಯೇ ಬಿಡೋಣವೆಂದು ಆ ದಿನ ವೆಂಕಟರಮಣಯ್ಯನವರು ಮೈಸೂರಿಗೆ ಹೋಗಬೇಕೆಂದಿದ್ದವರು ತಮ್ಮ ಊರಿನ ಕಡೆಗೆ ಹೊರಟರು. ಅಲ್ಲಿ ಅವರ ತಾಯಿ, ತಮ್ಮ, ತಂಗಿ ಎಲ್ಲರೂ ಇದ್ದರು. ಅವರಿಗೆ ಒಂದು ಮಾತು ತಿಳಿಸಿ ಬೇಗ ಬಂದು ಬಿಡೋಣವೆಂಬುದು ಅವರ ಉದ್ದೇಶ.

೨

ವೆಂಕಟರಮಣಯ್ಯನವರದು ದೊಡ್ಡ ಕುಟುಂಬ; ಅವರು ಐದಾರು ಜನ ಅಣ್ಣತಮ್ಮಂದಿರು, ನಾಲ್ಕೈದು ಜನ ಅಕ್ಕ ತಂಗಿಯರು: ಅವರೇ ಹಿರಿಯರು. ತಮ್ಮಂದಿರು ಕೆಲವರು ಕೆಲಸದಲ್ಲಿದ್ದರು; ಸರ ಕಾರದ ನೌಕರಿ ಕೆಲವರಿಗೆ–ಮೇಷ್ಟರು, ಗುಮಾಸ್ತರು ವಗೈರೆ; ಒಬ್ಬರು ಲಾಯರು; ಮತ್ತೊಬ್ಬನನ್ನು ದತ್ತುಕೊಟ್ಟಿತ್ತು—ಆತ ಬಲು ದೂರದಲ್ಲಿ ದ್ದನು. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂಬಂತೆ ಕೊಟ್ಟ ಗಂಡೂ ಕುಲಕ್ಕೆ ಹೊರಗಾಗಿ—ವರ್ಷಕ್ಕೊಂದು ಸಲವೂ ಅವನ ವರ್ತಮಾನ ಬರುತ್ತಿರಲಿಲ್ಲ. ಕೇಳಿದರೆ “ಅವನು ಜಮೀನುದಾರ, ಪುಣ್ಯವಂತ, ಮಕ್ಕಳು ಮರಿಗಳಾಗಿವೆ, ಅವನಿಗೇನು ಕಮ್ಮಿ, ಅವನು ಒಳ್ಳೇ ಪಾಳೆಯ ಗಾರನ ಹಾಗಿದ್ದಾನೆ” ಎನ್ನುವರು. ಇನ್ನಿಬ್ಬರು ಓದುತ್ತಿದ್ದರು. ತಾಯಿಯು ಊರಲ್ಲಿದ್ದುಕೊಂಡು ಪಿತ್ರಾರ್ಜಿತವಾದ ಜಮೀನುಗಳನ್ನು ನೋಡಿಕೊಂಡು, ಅವಕಾಶವಾದಾಗ ಸೊಸೆಯ ಬಾಣಂತನಕ್ಕೆಂದು ಆ ಮಗನ ಮನೆಗೂ ಈ ಮಗನ ಮನೆಗೂ ಹೋಗುತ್ತಿದ್ದರು. ಈಗ ಅವರ ಕೊನೆಯ ಮಗಳು ಋತುಮತಿಯಾಗಿ ಎರಡುವರ್ಷವಾಗಿತ್ತು. ಅಳಿಯ ಎಲ್‌ಎಲ್.ಬಿ.ಗೆ ಓದುತ್ತಿದ್ದು ಪರೀಕ್ಷೆ ಪ್ಯಾಸಾದ ಹೊರತು ಪ್ರಸ್ತ ಮಾಡಿಕೊಳ್ಳುವುದಿಲ್ಲವೆಂದಿದ್ದದ್ದರಿಂದ ಆ ಹುಡುಗಿಗೆ ಕಾವಲಾಗಿ ಆ ಊರಿನಲ್ಲೇ ಇರುತ್ತಿದ್ದರು. “ನೀವು ಬೇಕಾದಾಗ ಸೊಸೆಯನ್ನು ಕರೆದು ಕೊಂಡು ಹೋಗುವಿರಂತೆ; ಅವಳಿಗೆ ಸೆರೆ ತಪ್ಪಿಸಿಬಿಡಿ; ಆಮೇಲೆ ಆ ಹುಡುಗಿಯನ್ನು ಎಲ್ಲಾದರೂ ಬಿಟ್ಟು ನಾನು ಕಾಶಿಗೆ ಹೊರಟು

ಹೋದೇನು ; ನನಗೆ ಈ ಸಂಸಾರ ಸಾಕಾಗಿದೆ '' ಎಂದು ಆಕೆ ಎಷ್ಟೋ ಸಲ ಬೀಗರಿಗೆ ಹೇಳಿದರೂ ಅವರ ಮಾತು ಮಾತ್ರ ನಡೆಯಲಿಲ್ಲ. ಆಕೆಗೆ ಅದೊಂದು ಕೊರಗು ಇತ್ತಾದ್ದರಿಂದ ಯಾವ ಮಾತನ್ನು ತೆಗೆಯಲಿ, ಆಕೆ ಆದರ ಪ್ರಸ್ತಾಪವನ್ನೆತ್ತಿ ಸುಳುವಾಗಿಯೊ, ಸೂಕ್ಷ್ಮವಾಗಿಯೊ, ನಯವಾಗಿಯೊ, ಧೈರ್ಯವಾಗಿಯೊ, ' ಆದು ನೆರವೇರಲಿ ; ಆ ಮೇಲೆ ಮಿಕ್ಕ ಮಾತು ' ಎನ್ನುವರು. ಮನೆಯವರಾಗಲಿ, ನೆರೆಯವರಾಗಲಿ ತಮ್ಮ ಕೆಲಸವಾಗಬೇಕಾದರೆ ಅವರ ಮಗಳ ಪ್ರಸ್ತದ ವಿಚಾರ ತೆಗೆದು, ಅವರನ್ನು ಹೊಗಳಿ, ಅವರ ಮಗಳನ್ನು ನೋಡಿ " ಅಯ್ಯೋ ಪಾಪ ! " ಎಂದು ಮರುಕಪಟ್ಟು ಅಳಿಯನನ್ನು ಸ್ವಲ್ಪ ಹಳಿದು ಬಿಟ್ಟರೆ, ಅವರ ಕೆಲಸ ಆಗುವುದು ಖಂಡಿತ. ಇಂಥ ಸ್ಥಿತಿಯಲ್ಲಿ ವೆಂಕಟರಮಣಯ್ಯನವರು ಊರಿಗೆ ಹೋಗಿ " ಸೀತೆ ಕಂಡೆ '' ಎಂದು ಆಂಜನೇಯ ಹೇಳಿದ ಹಾಗೆ, '' ಅಮ್ಮ, ನಿನ್ನ ಅಳಿಯನ್ನ ಒಪ್ಪಿಸಿದ್ದೇನೆ" ಎಂದು ಹೋಗಿ ಇಳಿಯುತ್ತಿದ್ದ ಹಾಗೇ ಹೇಳಿದರು. ಆಕೆ ಸಂಭ್ರಮವನ್ನು ತೋರಿಸಲಿಲ್ಲ; " ಒಳ್ಳೆಯದಪ್ಪ '' ಎಂದು ಮಾತ್ರ ಎಂದರು. ಅವರ ಮನಸ್ಸಿನ ಸಂತೋಷವು ಫಲದಲ್ಲಿ ತೋರಿತು.—ಆವೊತ್ತು ಬೆಳಗ್ಗೆ ಸೊಗಸಾದ ಕಾಫಿ, ತುಂಬ ತೆಂಗಿನಕಾಯಿ ಹಾಕಿ ರೊಟ್ಟಿ, ಕೆನೆ ಮೊಸರು, ಮಧ್ಯಾಹ್ನಕ್ಕೆ ರುಚಿಯಾದ ಅಡಿಗೆ, ಅಪರಾಹ್ಣಕ್ಕೆ ಬೊಂಬಾಯಿಬೋಂಡ ಟೀ, ಇವೆಲ್ಲಾ ಬಂದುವು.

ಹಸು ' ಸೊರು ' ಬಿಟ್ಟಹಾಗಾಯಿತು ;—ಇನ್ನು ಎಷ್ಟು ಹಾಲು ಕರೆದರೂ ಬರುವುದು !

" ಹಾಗೇ ಕಮಲಮ್ಮನ ಮದುವೇನೂ ಮಾಡಿಬಿಡೋಣವೆಂದಿದ್ದೇನೆ.'' ಎಂದರು ವೆಂಕಟರಮಣಯ್ಯನವರು.

" ಆಗಬಹುದು ! "

ಈಗ ಎರಡು ತಿಂಗಳ ಹಿಂದೆ ಅವರೇ ಈಗಾಗಲೇ ಏನು ಅವಸರ? ಹುಡುಗಿ ಇನ್ನೂ ಲಂಗ ಹಾಕಿಕೊಂಡು ಓಡಾಡುತ್ತಿದ್ದಾಳೆ—ಸ್ಕೂಲಿಗೆ ಹೋಗುವ ಹುಡುಗಿ ಎಂದಿದ್ದರು.

" ಹನುಮು ಮದುವೆ ಈಗಲೇ ಆಗಬೇಕೇ ?"

“ ಅವನಿಗೇನು ಅವಸರ! ಮುಂದಿನ ವರ್ಷವಾಯಿತು ; ಹುಡುಗ ವೈ ನೆರೆದುಬಿಡುತ್ತಾನೇನು ? ”

ಹುಡುಗನಿಗೆ ಇಪ್ಪತ್ತು ವರ್ಷವಾಗಿತ್ತು ; ಅವನೇ ಕಿರಿಯ ಮಗ ನಾಗಿದ್ದದ್ದರಿಂದ ಅವನ ಮೇಲೆ ತುಂಬಾ ಮಮತೆ. ಅವನಿಗೆ ಹೆಣ್ಣು ನೋಡಲಿಲ್ಲವೆಂದು ಅವರೇ ಮೂರು ವರ್ಷದಿಂದ ತಗಾದೆ ಮಾಡು ತ್ತಿದ್ದರು.

“ ಮತ್ತೆ, ಈ ಖರ್ಚೆಲ್ಲಾ ಇಟ್ಟುಕೊಂಡರೆ ಈಗ ನಿನ್ನ ರೂಪಾಯಿ ಕೊಡುವುದಕ್ಕಾಗುವುದಿಲ್ಲವಲ್ಲ ! ”

“ ಇಲ್ಲದಿದ್ದರೆ ಇಲ್ಲ ; ಹೆಣ್ಣು ಹೆಂಗಸು ರೂಪಾಯಿ ಇಟ್ಟುಕೊಂಡು ನಾನು ಮಾಡುವುದೇನು ? ”

ಹೀಗೇ—ಹಾಲು ಕರೆದದ್ದೂ ಕರೆದದ್ದೇ ; ಹಸು ಕೊಟ್ಟದ್ದೂ ಕೊಟ್ಟದ್ದೇ !

೩

ಸಾಯಂಕಾಲ ಊಟವಾದ ಮೇಲೆ ಅಂಗಳದಲ್ಲಿ ಚಾಪೆ ಹಾಕಿ ಕೊಂಡು ಎಲ್ಲರೂ ಕುಳಿತರು. ಅಣ್ಣ ಬಂದನೆಂಬ ವರ್ತಮಾನ ತಿಳಿದು ಜಮೀನ್‌ದಾರ (ಉರುಫ್ ಪಾಳೇಗಾರ) ಹೊರತು ಮಿಕ್ಕವರೆಲ್ಲರೂ ಬಂದಿದ್ದರು. ಮಧ್ಯಾಹ್ನ ಹೆಚ್ಚು ಮಾತಿಗೆ ಅವಕಾಶವಿರಲಿಲ್ಲ. ಊರಿ ನವರೆಲ್ಲರೂ ಒಬ್ಬರಾದ ಮೇಲೆ ಒಬ್ಬರಂತೆ ಭೇಟಿಗೆ ಬರುತ್ತಿದ್ದರು. ವೆಂಕಟರಮಣಯ್ಯನು ಬಂದವರನ್ನು, ತನಗೆ ಎಷ್ಟು ಕೆಲಸವಿರಲಿ, ನಿಷ್ಠುರವಾಗಿ ಹೋಗಿ ಎನ್ನುವುದಿಲ್ಲ; ತಾನೂ ಏಳುವುದಿಲ್ಲ. ಒಳಗೇ ಇದ್ದುಕೊಂಡು ಇಲ್ಲವೆಂದಾದರೂ ಎನ್ನಿಸಿಕೊಂಡಾನು, ಮಾತಾಡುತ್ತಿರು ವಾಗ ಎಷ್ಟು ಕೆಲಸವಿರಲಿ ಬೇಜಾರಾಗಲಿ ಅದನ್ನು ತೋರ್ಪಡಿಸಿ ಕೊಳ್ಳುವುದಿಲ್ಲ. ಆದ್ದರಿಂದ ಮಧ್ಯಾಹ್ನವೆಲ್ಲಾ ಮದುವೆ ವಿಚಾರ ಮಾತನಾಡಬೇಕೆಂದು ಮನಸ್ಸು ಕುದ್ದುಕೊಳ್ಳುತ್ತಿದ್ದರೂ ಅದಕ್ಕೆ ಅವ ಕಾಶವಿಲ್ಲದೆ, ಗುಡಿಗೆ ಬಂದ ಭಕ್ತಾದಿಗಳಿಗೆ ಪ್ರಸಾದ ಕೊಟ್ಟಂತೆ, ಮನೆಗೆ ಬಂದ ಜನಕ್ಕೆ ನಯವಾದ ಮಾತು ಮೈಸೂರು ಬೆಂಗಳೂರು ವರ್ತಮಾನ ಮುಂತಾದವುಗಳನ್ನು ಕೊಡಬೇಕಾಗಿತ್ತು.....

" ಏನಣ್ಣ, ಹಾಗಾದರೆ ಈ ವರ್ಷವೇ ಮದುವೆ ಮಾಡುತ್ತೀ ಯೇನು ? ಮೊನ್ನೆ ತಾನೆ ಸಾಲ ತೆಗೆದೆ ! ತಿರುಗಿ ದುಡ್ಡೆಲ್ಲಿದೆ ಈಗ ? "

" ಇನ್ನೂರು ರೂಪಾಯಿ ಸಿಕ್ಕುವುದಿಲ್ಲವೇನೋ ? ಬ್ಯಾಂಕಿನಲ್ಲಿ ಓವರ್ ಡ್ರಾ ಮಾಡಿದರೂ (ಹೆಚ್ಚಾಗಿ ತೆಗೆದು ಕೊಂಡರೂ) ಆಯಿತು ! "

" ಇನ್ನೂರು ರೂಪಾಯಿನಲ್ಲೇನಾಗುತ್ತಣ್ಣ ! ಪ್ರಸ್ತ ಬೇರೆ ಆಗ ಬೇಕಾಗಿದೆ ! "

ತಾಯಿ—" ಇನ್ನೆಷ್ಟು ಖರ್ಚುಮಾಡಬೇಕೆಂದಿದ್ದೀಯೆ ನಿನ್ನ ಮನಸ್ಸಿನಲ್ಲಿ ? ಅವನೇನು ಗಡ್ಡೆ ಹತ್ತಬೇಕೋ ಬೇಡವೊ ? "

ಶಾಮು—" ಅಲ್ಲಮ್ಮ ! ನನ್ನ ಹಿರಿಯ ಮಗಳ ಮದುವೆಯನ್ನು ಎಷ್ಟೋ ಮಿತವಾಗಿ ಮಾಡಿದೆ. ವರೋಪಚಾರವಿಲ್ಲ, ವರದಕ್ಷಿಣೆಯಿಲ್ಲ. ಆದರೂ ಒಂದು ಸಾವಿರ ರೂಪಾಯಿಗೆ ಮೀರಿ ಹೋಯಿತು ! "

ತಾಯಿ—" ನಿನ್ನ ಮಾತು ಬಿಡಪ್ಪ ; ನೀನು ಯಾವಾಗಲೂ ಸ್ವಲ್ಪ ಧಾರಾಳವೇ ! ಇದರ ಮೇಲೆ ಲಾಯರು ; ಕಕ್ಷಿಗಾರರು ಎಲ್ಲಾ ತಂದು ಹಾಕುತ್ತಾರೆ ; ಅವರೆಲ್ಲಾ ಓದಿಸುವುದನ್ನು ಸೇರಿಸಿದರೇ ಇನ್ನೊಂದು ಹುಡುಗಿಯ ಮದುವೆಯಾಗಿ ಹೋಗುತ್ತೆ ! "

ಶಾಮು—"ಎಲ್ಲಮ್ಮ, ಶಾರದೆಗೂ ಹನ್ನೆರಡು ತುಂಬಿಹೋಯಿತು, ಕೈಯಲ್ಲಿ ಕಾಸಿಲ್ಲದೆ ಮುಂದಿನ ವರ್ಷಮಾಡಬೇಕೆಂದು ಬಿಟ್ಟಿದ್ದೇನೆ."

ವೆಂಕಟ—"ಕೈಯಲ್ಲಿ ಕಾಸಿಲ್ಲದೆ ಮನೆ ಹೇಗೆ ಕಟ್ಟಿಸುತ್ತಿದ್ದೀಯೋ ? ಈಗ ಮನೆಗೆ ಎಷ್ಟು ಸಾಲ ಮಾಡಿದ್ದೀಯೋ ? "

ಶಾಮು—" ಮನೆಗೇನೋ ಇದುವರೆಗೆ ಸಾಲಮಾಡಿಲ್ಲ ಅಣ್ಣ ! "

ತಾಯಿ–"ಅಷ್ಟೇಕಪ್ಪ?ನಾನು ಮಾಡಿಸುತ್ತೇನೆ-ಈಗ ಕಮಲಮ್ಮನ ಮದುವೆ ಇನ್ನೂರು ರೂಪಾಯಿನಲ್ಲಿ ಆಗಬೇಕೆಂದು ನಿಷ್ಕರ್ಷೆಯಾಗಿದೆ ಯಷ್ಟೆ ; ನೀನೂ ಇನ್ನೂರು ರೂಪಾಯಿ ಕೊಡು. ನಿನ್ನ ಮಗಳ ಮದುವೆ ಯನ್ನೂ ಈಗಲೇ ಮಾಡಿಬಿಡೋಣ.''

ಶಾಮು—"ನನ್ನ ಕೈಯಲ್ಲಿ ಕಾಸಿಲ್ಲ ; ನೀವೇನಾದರೂ ಮಾಡಿ ಕೊಳ್ಳಿ !''

ವೆಂಕಟ—"ಯಾರಾದರೂ ಸಾಲ ಕೊಟ್ಟರೆ ?''

ಶಾಮು—"ಯಾರಾದರೂ ಸಾಲಕೊಟ್ಟು, ಇನ್ನೂರು ರೂಪಾಯಿ ಯಲ್ಲಿ ಆಗಿ, ನೀವು ನಿಂತು ಮಾಡುವುದಾಗಿದ್ದರೆ, ನನ್ನದೇನು ಅಡ್ಡಿ! ನನ್ನ ಜವಾಬ್ದಾರಿಯೇ ತಪ್ಪಿಹೋಯಿತು!''

ತಾಯಿ—"ಮಗು, ನನಗೆ ನೀನು ಕೊಡಬೇಕಾಗಿದ್ದ ಇನ್ನೂರು ರೂಪಾಯಿ ಕೊಟ್ಟರೋ!''

ಹೀಗೆ ಎರಡು ಮದುವೆ ಒಂದು ಪ್ರಸ್ತ ನಡೆಯುವಂತೆ ನಿಷ್ಕರ್ಷೆ ಯಾಯಿತು; ಜೋಯಿಸರನ್ನು ಕರೆಯಿಸಿ ಲಗ್ನ ಕಟ್ಟಿಸಿದ್ದಾಯಿತು. ಲಗ್ನ ಕಟ್ಟುವುದು ಬಹಳ ಸುಲಭವಾಗಿತ್ತು.—ಒಬ್ಬರಿಗಾದರೂ ಜಾತಕ ಬರೆಯಿಸಿರಲಿಲ್ಲ. ಹುಟ್ಟಿದ ಹೊತ್ತು ಜ್ಞಾಪಕವಿರಲಿಲ್ಲ. ಪಂಚಾಂಗದಲ್ಲಿ "ಲಗ್ನಗಳು'' ಎಂದು ಬರೆದಿದ್ದನ್ನು ನೋಡಿ ಒಂದು ಆರಿಸಿಕೊಳ್ಳುವುದು ಹೊತ್ತೇ? ಆದರೆ ಮೂರು ಶುಭಲಗ್ನಗಳು ನಡೆಯಬಹುದೇ ಎಂದು ಜೋಯಿಸರು ಒಂದು ಕೊಂಕು ತೆಗೆದು ಹನುಮುವಿನ ಮದುವೆಯನ್ನೂ ಸೇರಿಸಿದರಾಯಿತು ಎಂದು ತಾವೇ ಪರಿಹಾರವನ್ನು ಹೇಳಿದರು. ಅವರ ಷಡ್ಡಕನ ಮಗಳೇ ಆ ಹುಡುಗನಿಗೆ ಲಗ್ನವಾಗಬೇಕಾಗಿತ್ತು. ಇಷ್ಟ ರಲ್ಲಿ ಅದೂ ಒಂದು ಸೇರಿಹೋದರೆ ತಮ್ಮ ಹೆಣ್ಣಿನ ಮದುವೆಯೂ ಹಗುರವಾಗಿ ನಡೆದು ಹೋಗುತ್ತೆಂದು ಅವರ ಯೋಚನೆ.

ವೆಂಕಟರಮಣಯ್ಯನವರಿಗೆ ಪರಮ ಸಂತೋಷವಾಯಿತು. ಇತರರು ನಾಲ್ಕೈದು ಸಾವಿರ ರೂಪಾಯಿ ಖರ್ಚು ಮಾಡಿ ಮಾಡುವು ದನ್ನು ತಾವು ನಾನೂರು ಐನೂರು—ನಾನೂರೇ!—ರೂಪಾಯಿನ ಒಳಗೆ ಮಾಡಿ ಮುಗಿಸಿಬಿಡುತ್ತೇನೆಂದು ಆವೊತ್ತೆಲ್ಲಾ ಮನಸ್ಸಿನಲ್ಲೇ ಗುಣಿಸಿದ್ದೂ ಗುಣಿಸಿದ್ದೇ! ರಾತ್ರಿ ನಿದ್ರೆಯೇ ಬರಲಿಲ್ಲ. ಅಂತು, ಮದುವೆಗೆ ಮಾಡಿದ್ದ ಇನ್ನೂರು ರೂಪಾಯಿನ ಅಂದಾಜೇನೋ ತ್ರಿಗುಣವಾಯಿತು.

೪

ಎಲ್ಲ ನಿಷ್ಕರ್ಷೆಯಾದ ಹಾಗಾಯಿತು. ಇನ್ನು ಬೇಗ ಮೈಸೂರಿಗೆ ಹೋಗಿ ಲಗ್ನಕ್ಕೆ ಏರ್ಪಾಡು ಮಾಡಬೇಕು. ಆದರೆ ಅಲ್ಲಿಗೆ ಹೊರಡುವು ದಕ್ಕಿಂತ ಮುಂಚೆ ವೆಂಕಟರಮಣಯ್ಯನವರಿಗೆ ತಾವರೆಕೆರೆಯಲ್ಲಿದ್ದ ಅವರ ದೊಡ್ಡಪ್ಪನವರನ್ನು ನೋಡಿಕೊಂಡು ಬರಬೇಕೆಂದು ಮನಸ್ಸು

ಬಂತು. ಅವರ ದೊಡ್ಡಪ್ಪನವರ ಮನೆಯಲ್ಲಿಯೆ ಅವರು ಬೆಳೆದದ್ದು ಹೆಚ್ಚು; ಅವರಿಗೆ ವಿಶ್ವಾಸ ಬಹಳ; ಮಾತು ಕಮ್ಮಿಯಾದರೂ ಮಮತೆ ಹೆಚ್ಚು. ಆದರೆ ಅವರಿಗೆ ವೃದ್ಧಾಪ್ಯದ ಅಶಕ್ತಿಯಿಂದಲೂ, ವೆಂಕಟರಮಣ ಯ್ಯನವರಿಗೆ ಅಧಿಕಾರದ ತೊಂದರೆಯಿಂದಲೂ ಒಬ್ಬರೊಬ್ಬರನ್ನು ನೋಡಿ ಹತ್ತು ಹನ್ನೆರಡು ವರ್ಷವಾಗಿಹೋಗಿತ್ತು. ಈಗ ಅವರನ್ನು ನೋಡಿಕೊಂಡು ಬಂದು ಅವರಿಗೆ ಈ ಶುಭ ಲಗ್ನಗಳ ವಿಚಾರ ತಿಳಿಸಿ ಅವರ ಹೆಸರಿನಲ್ಲಿ ಲಗ್ನಪತ್ರಿಕೆ ಬರೆಸುವುದಾಗಿ ಹೇಳಿ ಬರೋಣವೆಂದು ಅಲ್ಲಿಗೆ ಹೊರಟರು. ಹಿಂದಿನ ಕಾಲದ ಮುದುಕರು; ನೋಡಿ ಬಹಳ ಸಂತೋಷಪಟ್ಟರು. ಇಷ್ಟರ ಮಟ್ಟಿಗೆ ನಮ್ಮ ವಂಶದಲ್ಲಿ ೨೦೦-೩೦೦ ರೂಪಾಯಿ ಸಂಬಳ ತಂದವರು ಯಾರೂ ಇರಲಿಲ್ಲವಪ್ಪ ಎಂದರು. ಕಣ್ಣುತುಂಬ ನೀರು. ತಬ್ಬಿಕೊಂಡು ಮುದ್ದಾಡುವುದು ಒಂದು ಕಡಿಮೆ. ಹೊರಡುವಾಗ "ಎಲ್ಲಿ ಮದುವೆ?" ಎಂದು ಕೇಳಿದರು.

"ಇನ್ನೆಲ್ಲಿ, ಮೈಸೂರಿನಲ್ಲೋ, ಬೆಂಗಳೂರಿನಲ್ಲೋ ನಡೆಯಬೇಕು."

"ಸರಿ ಹಾಗಾದರೆ—ನಾವೇನು ಬರುವ ಹಾಗಿಲ್ಲ. ತಿಮ್ಮಲಾಪುರದಲ್ಲಿ (ವೆಂಕಟರಮಣಯ್ಯನವರ ಊರು) ಆಗಿದ್ದರೇ ಬರುವುದು ಕಷ್ಟ—ಏನೋ ಆದರೂ ಒಂದು ಪಕ್ಷ ಯೋಚಿಸಬಹುದಾಗಿತ್ತು. ಮೈಸೂರೆಂದರೇನು ನಾವೆಂದರೇನು?"

"ಬೇಕಾದರೆ ಛಾರ್ಜು ಕೊಡುತೀನಿ ಬನ್ನಿ ದೊಡ್ಡಪ್ಪ!"

"ನೀನೇನೋ ಪುಣ್ಯವಂತ, ದುಡ್ಡುಕೊಟ್ಟೀಯೆ—ತ್ರಾಣ ಕೊಟ್ಟೀಯಾ? ಮನೆಯಲ್ಲಿ ಅವಳಿಗೆ ಮೈಯಲ್ಲಿ ಚೆನ್ನಾಗಿಲ್ಲ; ದನಕರು ಎಲ್ಲಾ ಇವೆ. ಬಿಟ್ಟು ಬರುವುದು ತಾನೇ ಹೇಗೆ? ಏನೋ ನೋಡಪ್ಪ, ನಿಮ್ಮೂರಿನಲ್ಲೇ ಮಾಡುವಹಾಗಿದ್ದರೆ ನಾನೂ ಬಂದರೂ ಬರ್ತೀನಿ; ನಾನು ಇನ್ನು ಯಾವ ಉತ್ಸವ ನೋಡಬೇಕು? ನಿಮ್ಮ ಅತ್ತೆ ಮಾವ ಅವರೂ ಬಂದಾರು. ನನ್ನಹಾಗೆ ಇನ್ನೊಂದು ನಾಲ್ಕು ಜನ ಮುದುಕರಿದ್ದಾರೆ—ಇಲ್ಲಿ ಮಾಡಿದರೆ ಬರುವವರು. ನಿನಗೇನು ಜನಗಳಿಗೆ ಕಡಿಮೆ ಇಲ್ಲ, ಮೈಸೂರಿನಲ್ಲಿ ಮಾಡಿದರೆ—ನೆಂಟರು, ಇಷ್ಟರು, ಸ್ನೇಹಿತರು

ಬೇಕಾದ ಹಾಗಿದ್ದಾರೆ; ಅದ್ಧೂರಿಯಾಗಿ ಮಾಡಬಹುದು; ನಮಗೆ ಅದನ್ನು ನೋಡುವ ಪ್ರಾಪ್ತಿಯಿಲ್ಲ ಅಷ್ಟೇಯೆ."

ವೆಂಕಟರಮಣಯ್ಯನವರು ಈಗಿನ ಕಾಲದವರಾದರೂ ಹಿಂದಿನ ಸಂಪ್ರದಾಯ, ಶಾಸ್ತ್ರ, ಗುರುಗಳು, ಹಿರಿಯರು, ಇವರಲ್ಲಿ ಭಕ್ತಿ. ಅಂಥ ಅಂತಃಕರಣದ ಜನ ಕಣ್ಣು ತುಂಬ ನೋಡಿ ವಿಶ್ವಾಸವಿಟ್ಟು ಬಂದು ಆಶೀರ್ವಾದ ಮಾಡಿದರೆ ಎಷ್ಟೋ ಶ್ರೇಯಸ್ಸು ಎಂದು ಅವರ ನಂಬಿಕೆ. ಅಲ್ಲದೆ ಪಟ್ಟಣವಾಸಕ್ಕಿಂತ ಹಳ್ಳಿಯಲ್ಲಿ ಮಾಡಿಬಿಟ್ಟರೆ ಸುಲಭವಾಗಿ ಮಾಡಬಹುದೆಂದು ತೋರಿತು. ಅವರ ತಾಯಿಯೂ ಅದಕ್ಕೆ ಒಪ್ಪಿದರು. ಅವರ ಸೋದರ ಸೊಸೆಯ ಅಳಿಯ, ನಾದಿನಿಯ ಮೊಮ್ಮಗಳ ಗಂಡ..... ಮುಂತಾದವರೆಲ್ಲಾ ಊಟದೆಲೆ, ಸೌದೆ, ಕುಂಬಳಕಾಯಿ ಮುಂತಾದವುಗಳನ್ನು ತರಬಹುದೆಂದೂ ಅದರಿಂದ ಮದುವೆಯ ಖರ್ಚು ಎಷ್ಟೋ ಕಮ್ಮಿಯಾಗುವುದೆಂದೂ ಹೇಳಿದರು. ಆದ್ದರಿಂದ ಮದುವೆಗಳೆಲ್ಲವೂ ಅವರ ಹಳ್ಳಿಯಲ್ಲಿಯೇ ನಡೆಯಬೇಕೆಂದು ನಿಶ್ಚಯವಾಯಿತು.

❧

ಬೆಂಗಳೂರಿಗೆ ಬಂದು ಎಲ್ಲವನ್ನೂ ಶ್ರೀಪತಿಗೆ ವರದಿ ಒಪ್ಪಿಸಿಯಾಯಿತು. ನಾನು "ನಿಮ್ಮೂರಿನಲ್ಲಿ ಮದುವೆ ಮಾಡುವಂಥ ದೊಡ್ಡ ಮನೆ ಇದೆಯೇ?" ಎಂದು ಕೇಳಿದೆ.

"ಛತ್ರವಿದೆ; ಅದನ್ನು ಬಿಡಿಸಿಕೊಂಡರಾಯಿತು."

"ಬೀಗರನ್ನೂ ನೆಂಟರನ್ನೂ ಇಳಿಸುವುದಕ್ಕೆ?"

"ಅಲ್ಲೆ ಎಲ್ಲಾದರೂ ಇಳಿಸುವುದು."

"ಪಾತ್ರೆಗಳು?"

"ಪಾತ್ರೆಗಳೆಷ್ಟಾಗಬೇಕು? ಹಂಡೆಗಳು ಸಿಕ್ಕುವುದಿಲ್ಲವೇ, ಅವೇ ತಪ್ಪಲೆಯಾಯಿತು; ಕೊಳದಪ್ಪಲೆಗಳು ಸಿಕ್ಕುತ್ತವೆ; ಅವಕ್ಕೆ ಕಲಾಯ ಮಾಡಿಸಿದರೆ ಆಯಿತು. ಮುಖ್ಯವಾಗಿ ಅನ್ನಸಾರಿಗೆ; ಮಿಕ್ಕಪಾತ್ರೆಗಳಿದ್ದರೂ ಸರಿ ಇಲ್ಲದಿದ್ದರೂ ಸರಿ—ಇರುವದರಲ್ಲಿಯೇ ಮಾಡಿಕೊಳ್ಳಬಹುದು!"

"ತರ್ಕಾರಿ ಸಿಕ್ಕುತ್ತದೆಯೇ ನಿಮ್ಮೂರಿನಲ್ಲಿ?"

"ಹಳ್ಳಿಯ ತರಕಾರಿ—ಹಲಸಿನಕಾಯಿ, ಬಾಳೆಕಾಯಿ; ಸಾಲದ್ದಕ್ಕೆ ಆಲೂಗೆಡ್ಡೆ ಎಲ್ಲೆಲ್ಲೂ ಸಿಕ್ಕುತ್ತೆ. ಇಲ್ಲದಿದ್ದರೆ ಆದೇ ಬೇಡ; ಅಷ್ಟೊ ಅಷ್ಟು ಸುಲಭವೇ ಆಯಿತು!"

ಹೀಗೇ ಯಾವ ಯಾವುದನ್ನು ಕೇಳಿದರೂ ಅದಕ್ಕೆಲ್ಲಾ ಅವರು ಬಹು ಸುಲಭವಾಗಿ ತೀರ್ಮಾನಗಳನ್ನು ಹೇಳಿ ಬಿಡುತ್ತಿದ್ದರು. ಪಟ್ಟಣವಾಸದ ಮದುವೆಯನ್ನು ನೋಡಿದ್ದ ನನಗೆ ಒಂದೊಂದೂ ಒಂದೊಂದು ದೊಡ್ಡ ಬೆಟ್ಟವಾಗಿ ಕಾಣುತ್ತಿತ್ತು. ಹೆಣ್ಣು ಮಗಳ ಮದುವೆಯನ್ನೇ ಮಾಡಿ ಅರಿಯದ ಅವರಿಗೆ ಯಾವುದೂ ದೊಡ್ಡದಾಗಿ ಕಾಣುತ್ತಿರಲಿಲ್ಲ. ಮದುವೆಯ ಮನೆಯಲ್ಲಿ ಓಡಾಡಬೇಕೆಂದಿದ್ದ ನನ್ನ ಉತ್ಸಾಹಕ್ಕೆ ಭಂಗ ಬಂತು. "ಹಾಗಾದರೆ ನಾವೆಲ್ಲ ನಿಮ್ಮ ಮನೆಯ ಮದುವೆಗೆ ಬರಬಾರದೆಂದು ನಿಮ್ಮೂರಿನಲ್ಲಿ ಮಾಡಬೇಕೆಂಬ ಆವಟ ತೆಗೆದಿರುವ ಹಾಗೆ ಕಾಣುತ್ತೆ" ಎಂದೆ.

"ಹಾಗೆಂದರೇನಯ್ಯಾ; ನೀವೆಲ್ಲಾ ಬರದೇ ಉಂಟೆ?"

"ನಮಗೆಲ್ಲಾ ರೈಲ್ ಛಾರ್ಜು ಕೊಟ್ಟು ಕರೆದುಕೊಂಡು ಹೋಗಬೇಕು."

"ಅಗತ್ಯವಾಗಿ ಆಗಲಿ"

"ಹಾಗಾದರೆ ಖರ್ಚು ದುಬಾರಿಯಾಗುತ್ತದಲ್ಲ!"

"ನಾನು ಆಗಲೇ ಲೆಕ್ಕಹಾಕಿದ್ದೇನೆ. ಸರ್ಕಾರಿ ಮೀಟಿಂಗುಗಳು ನಡೆಸಿದ ಹಾಗೆ; ಎಲ್ಲಿ ಮಾಡಿದರೂ ಟ್ರಾವೆಲಿಂಗ್ ಅಲೋವೆನ್ಸ್ ಇದ್ದೇ ಇದೆ.— ಹಳ್ಳಿಯಲ್ಲಿ ಮಾಡಿದರೇ ಕಮ್ಮಿ."

ಇದೆಲ್ಲಾ ಉಪಚಾರದ ಮಾತು, ಇವನು ಕರೆದುಕೊಂಡು ಹೋಗಲಿಲ್ಲ, ನಾನು ಹೋಗಲಿಲ್ಲ—ಎಂದುಕೊಂಡೆ.

ಊರಿಗೆ ಹೋಗಿ ಹೆಂಡತಿಗೆ ರಿಪೋರ್ಟನ್ನು ಒಪ್ಪಿಸಿಯಾಯಿತು. ಆಕೆಯು ಎರಡನೆಯ ಹೆಂಡತಿ, ಆದರೂ ಗಂಡನಿಗೆ ವಿರೋಧವಾಗಿ ಹೋಗುತ್ತಿರಲಿಲ್ಲ; ಸವತಿಯ ಮಕ್ಕಳೆಂದು ಅವರ ಮಕ್ಕಳಲ್ಲಿ ಭೇದವನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಅವರು ಹೇಳಿದ್ದನ್ನೆಲ್ಲಾ ಅನುಮೋದಿಸಿ, "ನೀವು ಹೇಗೆ ಬೇಕಾದರೂ ಮಾಡಿಕೊಳ್ಳಿ; ನನ

ಮಾತು ಒಂದಿದೆ, ಅದನ್ನು ಮಾತ್ರ ನಡೆಯಿಸಿ ಕೊಡಿ " ಎಂದರು.

" ಅದೇನು ? ನಿನಗೊಂದು ಕಲಾಪತ್ತಿನ ಸೀರೆಯಾಗಬೇಕೇನೊ! ಇಲ್ಲ, ಚಿನ್ನದ ಡಾಬೋ ? "

" ಅದೆಲ್ಲಾ ಇರಲಿ ಅಂದ್ರೆ; ಬಂಗಾರದ ಡಾಬು ಹಾಕಿಕೊಂಡರೂ ೪೦೦ ರೂಪಾಯಿ ಸಂಬಳದವರ ಹೆಂಡತಿ ಅನ್ನುತ್ತಾರೆ ಬರಿಯ ಸೊಂಟ ದಲ್ಲಿದ್ದರೂ ಅನ್ನುತ್ತಾರೆ. ಅದರ ಮಾನ ಅವಮಾನ ನನಗೇನು !— ಹುಡುಗಿಗೆ ಮಾತ್ರ ಒಳ್ಳೆಯದು ಒಂದು ಸೀರೆ, ಅಚ್ಚೇರು ಬಂಗಾರ ವಾದರೂ ಹಾಕಬೇಕು. ತಾಯಿ ಇಲ್ಲದ ಹುಡುಗಿ, ಅವಳ ಮೇಲೆ ಹೊಟ್ಟೆಕಿಚ್ಚು, ಏನೂ ಮಾಡಿಸಲಿಲ್ಲ ಎಂದು ನನ್ನ ಮೇಲೆ ಅಪವಾದ ಬರುತ್ತೆ " ಎಂದರು. ಅವರಿಗೆ ಪರಮ ಸಂತೋಷವಾಯಿತು. ಇನ್ನೂ ಸ್ವಲ್ಪ ಖರ್ಚಾದರೂ ಚಿಂತೆಯಿಲ್ಲ. ಹೀಗೆ ಮಾಡುವುದೇ ಸರಿ ಎನ್ನಿಸಿತು. ಅಷ್ಟೇ ಅಲ್ಲ; ಇಷ್ಟು ದೂರಾಲೋಚನೆ ಯಿಂದಲೂ ವಿವೇಕದಿಂದಲೂ ಸಲಹೆಯನ್ನು ಕೊಟ್ಟ ತಮ್ಮ ಹೆಂಡ ತಿಗೂ ಒಂದು ಕಲಾಪತ್ತಿನ ಸೀರೆಯನ್ನು ತರಬೇಕೆನ್ನಿಸಿತು.—ಆದರೆ ಹೆಂಡತಿಗೆ ತಂದರೆ, ತಂಗಿಗೂ ಕಲಾಪತ್ತಿನ ಸೀರೆಯನ್ನು ತರಬೇಕು ; ಖರ್ಚು ಕೈಮೀರಿ ಹೋಗುತ್ತದೆ. ಆಗಲಿ—ನೋಡೋಣ—ಎಂದು ಕೊಂಡರು. ಮರುದಿವಸ ತಮ್ಮ ಅಗ್ಗದ ಮದುವೆಯ ಪ್ರಯತ್ನವೆಲ್ಲಾ ಎದ್ದು ಹೋದೀತೆಂಬ ಹೆದರಿಕೆಯಿಂದ ಈಗ ಕಲಾಪತ್ತಿನ ಸೀರೆಯ ಯೋಚನೆ ಬೇಡವೆಂದೂ ಬೇಕಾದರೆ ಕಲಾಪತ್ತಿನ ಮರ್ಸೆರೈಸ್ ಸೀರೆ ಯನ್ನು ಇಡೋಣವೆಂದೂ ಹೇಳಿದರು. ಆದರೆ ಉಪಯೋಗವಾಗಲಿಲ್ಲ. ತನಗಿಲ್ಲದಿದ್ದರೂ ಚಿಂತೆಯಿಲ್ಲ, ಮಗಳಿಗೆ ಕಲಾಪತ್ತಿನ ಸೀರೆ ಇಲ್ಲದಿದ್ದರೆ ತಾನು ಹಸೆಯ ಮೇಲಕ್ಕೆ ಬರುವುದಿಲ್ಲವೆಂದು ಆಕೆ ಹಟ ಮಾಡಿದಳು. ಕೊನೆಗೆ ಹಾಗೆಯೇ ಆಗಲೆಂದು ಒಪ್ಪಬೇಕಾಯಿತು. ನಾಲ್ಕು ಸೀರೆಗೆ ಇನ್ನೂರೈವತ್ತು ರೂಪಾಯಿಯಾಗುತ್ತದೆ ತಾನೇ ! ಕೊಟ್ಟುಬಿಟ್ಟರಾ ಯಿತು ಎಂದು ಸಮಾಧಾನ ಮಾಡಿಕೊಂಡರು. ' ಹೆಂಗಸರ ಜವಳಿ ಯೆಲ್ಲಾ ಅಷ್ಟರಲ್ಲಿಯೇ ಮುಗಿಯಬೇಕು ; ತಮ್ಮನ ಹೆಂಡತಿಗೂ ಒಂದೇ ಸೀರೆ; ಅದನ್ನೇ ಮದುವೆಯಲ್ಲೆಲ್ಲಾ ಓಡಿಯಾಡಿಸಿಬಿಡುವುದು.

ಯಾರಿಗೂ ಕುಬುಸದ ಕಣ ಬೇಡ.' ಎಂದು ಕೊಂಡರು. ಇನ್ನು ಗಂಡ ಸರ ಜವಳಿ-ಅಳಿಯಂದಿರಿಗೆ ಕಲಾಪತ್ತಿನ ಪಂಚೆ ಬೇಕೋ ಬೇಡವೋ? ಏನೂ ಬೇಡ. ಹತ್ತಿರದಲ್ಲಿಯೇ ಕಲಾಪತ್ತಿನ ಸೀರೆ ಉಟ್ಟುಕೊಂಡು ಹುಡುಗಿ ಕೂತಿರುತ್ತಾಳಲ್ಲ, ಅಷ್ಟೇ ಸಾಕು! ಭಾವನಿಗೋ?—ತಾಯಿ ಏನನ್ನುತ್ತಾಳೋ! ಈಗ ಗೊತ್ತಾಯಿತು, ಅವರು ಶ್ರೀಕಂಠಯ್ಯನವರ ಮಗುಟವನ್ನು ಸ್ತೋತ್ರಮಾಡಿದ್ದು.-ತಮ್ಮ ಅಳಿಯನಿಗೆ ಕಲಾಪತ್ತಿನ ಮಗುಟವಾಗಬೇಕು. ವಿಚಾರ ಮಾಡಿದ್ದರಲ್ಲಿ ಅವರ ಈ ಆಶಯವು ವ್ಯಕ್ತವಾಯಿತು, ಒಂದಲ್ಲ, ಎರಡು--ಉಡುವುದಕ್ಕೆ ಒಂದು, ಹೊದೆಯು ವುದಕ್ಕೆ ಒಂದು ಎಂದು ಗೊತ್ತಾಯಿತು. ಅದಕ್ಕೆ ಪ್ರತಿ ಹೇಳಿ ಪ್ರಯೋ ಜನವಿಲ್ಲ; ಹಾಗೇನಾದರೂ ಮಾಡಿದರೆ ಈ " ಮೇಲ್ಪಂಕ್ತಿಯ ಮದುವೆ " ಗೆ ತಳಹದಿಯೇ ಕಳಚಿಬೀಳುತ್ತಿತ್ತು. ಇನ್ನು ಒಬ್ಬರಿಗೊಂದು ಮತ್ತೊಬ್ಬರಿಗೊಂದು ಮಾಡುವುದು ಹೇಗೆ? ವರರೆಲ್ಲರಿಗೂ ಕಲಾಪತ್ತಿನ ಮಗುಟಗಳನ್ನು ಕೊಡಬೇಕೆಂದು ನಿಷ್ಕರ್ಷೆಯಾಯಿತು. ಪಂಚೆ ಗಳೇನೋ ಮೇಲುಕೋಟೆಯವೇ ಸಾಕು ; ಶಲ್ಯ ಬೇಡ. ತನ್ನ ಅಳಿ ಯನಿಗೆ ಮಗುಟ ಕೊಡಬೇಕೆಂಬ ಯೋಚನೆ ಇರಲಿಲ್ಲ. ಈಗಲೂ ನಿಲ್ಲಿಸಿಬಿಡೋಣವೆಂದು ಎಂದು ಕೊಂಡಾಯಿತು.—ಅವನೇನು ಕೇಳುವ ಹಾಗಿಲ್ಲ. ಆದರೆ ಮಿಕ್ಕ ಮದುವಣಿಗರೆಲ್ಲಾ ಕಲಾಪತ್ತಿನ ಹೊಸ ಮಗುಟ ಗಳನ್ನು ಉಟ್ಟುಹೊದ್ದು ತಿರುಗುತ್ತಿರುವಾಗ ಅವನೊಬ್ಬ ಹೇಗೆ ಸುಮ್ಮ ನಿರುವುದು?....ಇದ್ದರೇನು?—ಹೀಗೇ ನೋಡುತ್ತ ಹೋದರೆ ಎಷ್ಟು ಖರ್ಚು! ಆದರೆ ಮಂಗಳ ಸ್ನಾನ ಮಾಡಿ ಹಸೆಯ ಮೇಲೆ ಕುಳಿತರೆ ಉಡುವುದಕ್ಕಾಗಲಿ, ಹೊದಿಯುವುದಕ್ಕಾಗಲಿ ಮನೆಯಲ್ಲಿ ಒಂದು ಒಳ್ಳೆಯ ಮಗುಟವಿರಲಿಲ್ಲ. ಆದ್ದರಿಂದ ಅವನಿಗೂ ಒಂದು ಜೊತೆ ಮಗುಟ ಮಂಜೂರಾಯಿತು. ಅಷ್ಟೇ! ಇನ್ಯಾರಿಗೂ ಏನೂ ಇಲ್ಲ. ತಾಯಿಯೂ ತಮಗೆ ಸೀರೆ ಬೇಡವೆಂದರು; ಮನೆದೇವರಿಗೂ ಮಡಿಸೀರೆ ಬೇಡ ;—ಒಂದು ಖರ್ಚಿಯ . ಕಣವನ್ನೂ, ಒಂದು ಪಾವಲಿಯನ್ನೂ ಇಟ್ಟರಾಯಿತು. ಯಾರಿಗೂ ಉಡುಗೆರೆ ಬೇಡ—ಪ್ರಸ್ತದ ಹುಡುಗರಿಗೂ ಹಾಸಿಗೆ ಹೊದಿಕೆ ಆಮೇಲೆ ಕೊಟ್ಟರಾಯಿತು. ಈ ಹೆಚ್ಚು ಜವಳಿಯನ್ನು

ಏನಿದ್ದರೂ ೨೦೦ ರೂಪಾಯಿನಲ್ಲಿ ಮುಗಿಸಿಬಿಡಬೇಕು ಎಂದು ಇತ್ಯರ್ಥ ವಾಯಿತು. ಹೀಗೇ ಒಂದೊಂದು ಮಾತಿಗೆ ನಾಲ್ಕೈದು ರೂಪಾಯಿ ಉಳಿತ—ಇನ್ನೂರು ಮುನ್ನೂರು ರೂಪಾಯಿ ಹೆಚ್ಚು ಖರ್ಚು!

ಇನ್ನು ಒಡವೆಗಳು—ಯಾರಿಗೂ ಇಲ್ಲ! ಹೆಂಡತಿಗೆ ಬಂಗಾರದ ಡಾಬು ಮಾಡುವುದಕ್ಕೆ ಕೊಟ್ಟಿತ್ತು. ಅದನ್ನು ವಜಾ ಮಾಡಿಸಿ, ಮಜೂರಿ ಬಿಟ್ಟು, ಮಿಕ್ಕಿದ್ದಕ್ಕೆ ಕಮಿಷನ್ ಕೊಟ್ಟು ಹಣ ಹಿಂದಕ್ಕೆ ತೆಗೆದುಕೊಂಡಾಯಿತು. ಹೆಣ್ಣು ಹುಡುಗರಿಗೆ ಒಂದೊಂದು ಸಣ್ಣದಾಗಿ ತಾಳಿ ಮಾತ್ರ; ಯಾರಿಗೂ ಉಂಗುರವಿಲ್ಲ, ಒಡ್ಯಾಣವಿಲ್ಲ.

ಜ್ಯೇಷ್ಠಮಾಸದಲ್ಲಿ ತಿಮ್ಮಲಾಪುರದಲ್ಲಿ ಲಗ್ನಗಳು ನೆರವೇರ ಬೇಕು.—ಮೊದಲು ಪ್ರಸ್ತ, ಆಮೇಲೆ ಮದುವೆಗಳು ಲಗ್ನಪತ್ರಿಕೆ ಗಳನ್ನು ಅಚ್ಚುಮಾಡಿಸಲೇ ಇಲ್ಲ. ಅದರಲ್ಲಿ ಕಂಡಹಾಗೆ ಎಂಟು ಹತ್ತು ರೂಪಾಯಿಗಳು ಉಳಿದುವು! ಹತ್ತಿರದ ನೆಂಟರಿಗೆ ಮಾತ್ರ ಹೇಳಿ ಕಳುಹಿಸಲಾಯಿತು. ಪಟ್ಟಣವಾಸದವರಿಗೆ ಯಾರಿಗೂ ಹೇಳಲೇ ಇಲ್ಲ. ಅವರು ಹೇಗಿದ್ದರೂ ಬರುವುದಿಲ್ಲ; ಲಗ್ನಪತ್ರಿಕೆ ಕಳುಹಿಸಿ ಅದೇ ಊರಿನಲ್ಲಿ ಲಗ್ನಮಾಡಿದರೂ ಬರುವುದಕ್ಕೆ ಬಿಂಕ! ಸಾಯಂಕಾಲ ಸಂಗೀತವಿದೆಯೇ ಮೇಳವಿದೆಯೆ—ಎಂದು ಕೇಳುವರು; ಆದ್ದ ರಿಂದ ಅವರ ಗೋಜೇ ಬೇಡ. ಆದರೆ ಎಂಟು ದಿನ ಮುಂಚಿತವಾಗಿ ಸುತ್ತುಮುತ್ತಿನ ಗ್ರಾಮದಲ್ಲೆಲ್ಲಾ ಈ ಮದುವೆಗಳ ಪ್ರಸ್ತಾಪ ಹರಡಿ ಕೊಂಡಿತು. ನಾಲ್ಕು ಲಗ್ನಗಳು ನಡೆಯುತ್ತವಂತೆ—ಇನ್ನೂ ಧರ್ಮದ ಮದುವೆಗಳು ಎಷ್ಟೋ ಅಂತೆ! ಪುಣ್ಯವಂತರು—ಅರಮನೆಯಿಂದ ರಾಜ ಮರ್ಯಾದೆ, ಖಿಲ್ಲತ್ತು ಎಲ್ಲಾ ಬರುತ್ತವಂತೆ - ದಿನವೂ ಒಂದೊಂದು ಭಕ್ಷ್ಯವಂತೆ, ಅಡಿಗೆಯವರನ್ನು ಉಡುಪಿಯಿಂದ ಕರೆಸಿದ್ದಾರಂತೆ— ಎಂದು ಏನೇನೋ ವರ್ತಮಾನ ಹರಡಿಕೊಂಡಿತು. ಈ ದೊಡ್ಡ ಉತ್ಸವ ವನ್ನು ನೋಡುವದಕ್ಕೆ ಎಷ್ಟೆಷ್ಟೋ ದೂರದ ನೆಂಟರು "ಅಯ್ಯೋ ನಾವೇನು ಹೊರಗಿನವರೇ? ನಮಗೇನು ಹೇಳಿ ಕಳುಹಿಸಬೇಕೇ-ಯಾರ ಮನೆಯ ಕೆಲಸ!" ಎಂದು ಗಾಡಿಗಳಮೇಲೆ ದೇವರ ಸಮಾರಾಧನೆಯ ಹೊತ್ತಿಗೇ ಆಳು ಕಾಳುಗಳ ಸಹಿತ ಬಂದು ಇಳಿಯಲು ಮೊದಲು

ಮಾಡಿದರು. ಅಷ್ಟೊತ್ತೇ ಬಂದ ಜನರನ್ನು ಇಳಿಸುವುದಕ್ಕೆ ಸ್ಥಳ ಸಾಲದು; ಅವರನ್ನು ಸುಧಾರಿಸುವುದಕ್ಕೆ ಜನರಿಲ್ಲ. ಅಡಿಗೆಗೆಂದು ಜೋಡಿಸಿದ್ದ ಹಂಡೆ ಕೊಳದಪ್ಪಲೆಗಳು ಸ್ನಾನದ ನೀರುಗಳಿಗೇ ಸಾಲ ದಂತಾದುವು. ಊರಿನಲ್ಲಿ ಹೊಳೆಯಿಲ್ಲ; ಕೆರೆ ಬತ್ತಿಹೋಗಿತ್ತು; ಭಾವಿ ಗಳ ನೀರೇ ಆಧಾರ. ಸಾಲದ್ದಕ್ಕೆ ಮಳೆಬೇರೆ ಹಿಡಿದುಕೊಂಡಿತು. ಗಾಡಿ, ಎತ್ತು ಕಟ್ಟುವುದಕ್ಕೆ ಜಾಗವಿಲ್ಲ: ಅವುಗಳಿಗೆ ಮೇವು ಒದಗಿಸುವುದು ಕಷ್ಟವಾಯಿತು. ಛತ್ರವೆಲ್ಲಾ ಸೋರುತ್ತಿತ್ತು; ಊರಲ್ಲಿ ಕೋತಿಗಳ ಕಾಟದಿಂದ ಮನೆಗಳೆಲ್ಲವೂ ಒಂದರಿಗಳಾಗಿದ್ದುವು. ಬ್ರಾಹ್ಮ ಣರ ಮನೆಗಳಿದ್ದದ್ದೇ ಸ್ವಲ್ಪ; ಅವೂ ಚಿಕ್ಕವು! ಅವು ಯಾವುದೂ ಒಂದೊಂದು ಸಂಸಾರ ಇಳಿಯುವುದಕ್ಕೂ ಸಾಲದು. ಆದ್ದರಿಂದ ಗಂಟು ಗಳನ್ನು ಇಳಿಸಿದವರು ಇಳಿಸಿದರು, ಇಲ್ಲದವರು ಗಾಡಿಯಲ್ಲೇ ಇದ್ದರು. ಸ್ನಾನವಾದರಾಯಿತು, ಇಲ್ಲದಿದ್ದರೆ ಇಲ್ಲ. "ಮೊದಲ ದಿನ; ಗಲಾಟೆ; ಇನ್ನೂ ಅಡಿಗೆಯವರು ಬಂದಿರಲಾರರು; ಬಂದಮೇಲೆ ಎಲ್ಲಾ ಸರಿಹೋಗುತ್ತದೆ; ಸ್ಕೂಲು ಕಟ್ಟಡ ಬಿಡಿಸಿಕೊಡುತ್ತಾರೆ ಇಳಿದು ಕೊಳ್ಳುವುದಕ್ಕೆ"—ಎಂದು ಎಲ್ಲರೂ ಸುಮ್ಮನಿದ್ದರು. ದೇವರ ಸಮಾ ರಾಧನೆಯ ದಿನವೇ ಪ್ರಸ್ತ. (ಅದರಲ್ಲಿ ಒಂದು ದಿವಸ ಕೂಡಿ ಬಂತು!) ಮೊದಲನೆಯ ದಿನವೆಂದು ಆ ಊರಿನದೇ ಒಂದು ದಿವಸದ ಮಟ್ಟಿಗೆ ವಾಲಗ. ಆ ದಿನ ಅಚ್ಚಮ್ಮನವರದೇ ಅಡಿಗೆ, ಬಂದವರು ಸಹಾಯ ಮಾಡಲು ಸ್ನಾನಮಾಡಿ ಮಡಿ ಒಣಗಿಸಿಕೊಂಡು ಬರುವುದೇ ಕಷ್ಟ ವಾಯಿತು. ಸಾಯಂಕಾಲ ಐದುಗಂಟೆಗೆ ಮೊದಲನೆಯ ಪಂಕ್ತಿಯ ಊಟ. ಊಟಕ್ಕೆ ಎಲೆಗಳು ಸಾಲವು. ಹಳ್ಳಿಯಿಂದ ಬಂದ ನೆಂಟರು ಹತ್ತಿಸಿದ ಎಲೆ ಇಲ್ಲದೆ (ಹೊಸದಾಗಿ ಹತ್ತಿಸುವುದಕ್ಕೆ ಅವಕಾಶವಿಲ್ಲದೆ) ಬಿಡಿ ಎಲೆಗಳನ್ನು ತಂದು ಬಿಟ್ಟಿದ್ದರು. ಅವು ಪಿಂಡಿಪಿಂಡಿಯಾಗಿ ಬಿದ್ದಿ ದ್ದುವು. ತಿಂಡಿ ಕೊಡುವುದಕ್ಕೆ ಅನುಕೂಲವಾಗಿದ್ದುವು. ಆದರೆ ಆ "ಮನೆ ಹಾಳು" ಕಾಫಿ ತಿಂಡಿಯ ಏರ್ಪಾಡಿನ ಗೋಜಿಗೇ ಹೋಗಿರ ಲಿಲ್ಲ. 'ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅತ್ತರು' ಎಂಬಂತೆ ಬಿಡಿ ಎಲೆ ಇಟ್ಟುಕೊಂಡು ಹತ್ತಿಸಿದೆಲೆಗೆ ಅತ್ತಾ್ಯಯಿತು. ಆ ದಿನ ರಾತ್ರಿ ಬಂದ

ನೆಂಟರೆಲ್ಲರೂ ಮಲಗುವುದಕ್ಕೆ ಮುಂಚೆ ನಾಲ್ಕು ನಾಲ್ಕು ಕೊಡ ನೀರು ಸೇದಿ ಹಾಕಬೇಕೆಂದೂ ಐದೈದು ಎಲೆ ಹತ್ತಿಸಿ ಹಾಕಬೇಕೆಂದೂ ನಿಬಂಧನೆ ಯಾಯಿತು. ಮದುವೆಗೆಂದು ಸೇರಿಸಿಟ್ಟಿದ್ದ ಸಾಮಗ್ರಿಯಲ್ಲಿ ಅರ್ಧವೆಲ್ಲಾ ಒಂದು ಹೊತ್ತಿಗೇ ಮುಗಿದು ಹೋಯಿತು. ರಾತ್ರಿ ಒಂಬತ್ತು ಗಂಟೆಗಿಟ್ಟಿದ್ದ ಲಗ್ನವು ಹನ್ನೆರಡು ಗಂಟೆಗಾಗಿ ಬೆಳಗಿನ ಜಾವ ಐದು ಗಂಟೆಗೆ ಊಟದ ಶಾಸ್ತ್ರವಾಯಿತು. ಇದು ಮೊದಲನೆಯ ದಿನದ ಕಥೆ. ಇನ್ನು ಮುಂದೆ ಸುಮಾರು ಎಂಟು ಹತ್ತು ದಿನಗಳಾದರೂ ಹೀಗೇ ನಡೆಯ ಬೇಕು. ಏಕೆಂದರೆ ಒಂದೊಂದು ಮದುವೆಗೆ ಮಧ್ಯೆ ಒಂದು ಎರಡು ದಿನ ಅಂತರವಿತ್ತು. ಎಲ್ಲಾ ಒಂದೇ ದಿನ ನಡೆಯಲು ನಕ್ಷತ್ರ ಗೊತ್ತಿದ್ದ ವಧೂವರರಿಗೆ ಚಂದ್ರ ತಾರಾಬಲ ಹೊಂದುತ್ತಿರಲಿಲ್ಲ. ಮಂಗಳವಾರ ಅಮಾವಾಸ್ಯೆ ವ್ಯತೀಪಾತ ವೈಧೃತಿ—ಇವುಗಳ ಕಾಟ ಬೇರೆ!

ಅಚ್ಚಮ್ಮನವರಿಗೆ ಮರುದಿನ ಏಳುವುದಕ್ಕೇ ಕೈಲಾಗದು; ಆದರೂ ಹೇಳಿಕೊಳ್ಳುವಂತಿಲ್ಲ. ಮಗಳ ಪ್ರಸ್ತವಾಯಿತಲ್ಲ ಎಂಬ ಸಂತೋಷ ದಲ್ಲಿ ಎಲ್ಲವೂ ಮುಚ್ಚಿಹೋಗಿತ್ತು. ಬಂದ ನೆಂಟರು ಪ್ರಯಾಣದ ಆಯಾಸದಿಂದಲೂ ರಾತ್ರಿ ನಿದ್ದೆಗೆಟ್ಟಿದ್ದರಿಂದಲೂ ಬೆಳಗ್ಗೆ ಒಂಬತ್ತು ಗಂಟೆಯಾದರೂ ಒಬ್ಬರೂ ಏಳಲಿಲ್ಲ, ಮಕ್ಕಳು ರಾತ್ರಿ ಹೊತ್ತಾದ್ದರಿಂದ ಊಟವೇ ಮಾಡದೆ ಹಾಗೇ ನಿದ್ದೆಹೋಗಿ ಎದ್ದು ಹಸಿವಿನಿಂದ ಅಳುತ್ತಿದ್ದವು. ಕಾಫೀ ತಿಂಡಿಯ ಏರ್ಪಾಡಿಲ್ಲ. ಕೊಂಡುಕೊಳ್ಳಬೇಕೆಂದರೂ ಊರಿನಲ್ಲಿ ಒಂದು ತಿಂಡಿಯ ಅಂಗಡಿಯಿಲ್ಲ; ಕೊಂಡುಕೊಂಡರೆ ಕಾಸಿಗೆ ಒಂದು ಪೆಪ್ಪರ್‌ಮೆಂಟು. ಅದೂ ಊರೆಲ್ಲಾ ಹುಡುಕಿದರೆ ಒಂದು ನೂರು ನೂರೈವತ್ತು ಪೆಪ್ಪರ್‌ಮೆಂಟು ಸಿಕ್ಕೀತು. ಇನ್ನೂ ವೆಂಕಟರಮಣಯ್ಯನವರ ತಮ್ಮಂದಿರು ಬೀಗರು ಮುಂತಾದವರನೇಕರು ಬಂದಿರಲಿಲ್ಲ. (ಅವರೆಲ್ಲರೂ ಒಪ್ಪತ್ತು ಮಾತ್ರ ಮುಂಚೆ ಬರಬೇಕೆಂದು ಗೊತ್ತಾಗಿತ್ತು). ಹೀಗಿದ್ದೂ ಒಂದೇ ದಿನಕ್ಕೆ ಸಾಕು ಸಾಕಾಗಿಹೋಗಿ ಅಚ್ಚಮ್ಮನವರು ಮಗನನ್ನು ಕರೆದು ಯೋಚನೆಮಾಡಿದರು. ಕೊನೆಗೆ, "ಪ್ರಸ್ತ ನಡೆದದ್ದಂತೂ ನಡೆದುಹೋಯಿತು; ಮದುವೆಗಳನ್ನು ರಾಮದುರ್ಗದಲ್ಲಿ ಮಾಡೋಣ; ಅಲ್ಲಿ ಶಾಮು ಮನೆ ಇನ್ನೂ ವಿಸ್ತಾರವಾಗಿದೆ; ಅವನಿಗೆ

ಜನ ಸಹಾಯವಿದೆ; ಅಂಗಡಿ ಮುಂಗಟ್ಟುಗಳಿವೆ; ಬೇಕಾದರೆ ಅಡಿಗೆ ಯವರೂ ಸಿಕ್ಕುತ್ತಾರೆ" ಎಂದು ತಾಯಿ ಹೇಳಿದ್ದನ್ನು ವೆಂಕಟರಮಣಯ್ಯ ನವರು ಅನುಮೋದಿಸಿದರು. ರಾಮದುರ್ಗವು ತಕ್ಕಮಟ್ಟಿಗೆ ದೊಡ್ಡ ಊರು. ತಿಮ್ಮಲಾಪುರದಿಂದ ಗಾಡಿಯಲ್ಲಿ ಒಂದು ರಾತ್ರಿಯ ಪ್ರಯಾಣ, ಬಸ್ಸಿನಲ್ಲಿ ಒಂದು ಒಂದೂವರೆ ಗಂಟೆ ಹೊತ್ತಿನಲ್ಲಿ ಹೋಗಬಹುದು. ಆದರೆ ಬಂದ ಇಷ್ಟು ಜನಕ್ಕೂ ಬಸ್ಸು ಒದಗಿಸುವುದು ಕಷ್ಟ—ಛಾರ್ಜು ದುಬಾರಿಯಾಗುತ್ತದೆ. ಆದ್ದರಿಂದ ಅಂದಿನ ರಾತ್ರಿಯೇ, ಬಂದಿದ್ದ ಗಾಡಿ ಗಳನ್ನೇ ಕಟ್ಟಿಸಿ, ಎಲ್ಲರೂ ಅದರಲ್ಲಿಯೇ ಸಂವರಿಸಿ ಕುಳಿತುಕೊಂಡು ಸಾಮಾನುಗಳನ್ನು ಹಾಕಿ ಹಿಡಿಸದವುಗಳನ್ನು ಕಮಾನಿನಮೇಲೆ ಕಟ್ಟಿಸಿ ಹೊರಟರು. ಮರುದಿನ ಬೆಳಗ್ಗೆ ಇದ್ದಕ್ಕಿದ್ದ ಹಾಗೆ ರಾಮರಾಯರ ಮನೆಗೆ ಮುತ್ತಿಗೆ ಹಾಕಿದಹಾಗೆ ಗಾಡಿಗಳು, ಜನಗಳು! ಒಂದು ತಿಂಗಳ ಮುಂಚೆ ಆಗಿದ್ದರೆ ಸ್ಕೂಲು ಕಟ್ಟಡವು ಖಾಲಿಯಾಗಿತ್ತು. ಅದನ್ನು ತೆಗೆದುಕೊಂಡು ಇವರೆಲ್ಲರನ್ನೂ ಸುಖವಾಗಿ ಇಳಿಸಬಹುದಾಗಿತ್ತು ಆದರೆ ಈಗ ಸ್ಕೂಲು ಆರಂಭವಾಗಿ ಅದು ಸಾಧ್ಯವಿರಲಿಲ್ಲ. ಆದ್ದರಿಂದ "ಭೂತದ ಮನೆ" ಯೆಂದು ಪ್ರಸಿದ್ಧವಾಗಿದ್ದ ಒಂದು ಖಾಲಿ ಮನೆಯನ್ನು ಬಿಡಿಸಿಕೊಂಡು ಅಲ್ಲಿ ಬಂದವರನ್ನೆಲ್ಲಾ ಇಳಿಸಿದರು; ಮನೆಗೆ ಯಾರಾದರೂ ಬಂದು ಇದ್ದರೆ ಸಾಕೆಂದು ಮನೆಯವರು ಅದನ್ನು ಸಂತೋಷವಾಗಿ ಬಿಟ್ಟು ಕೊಟ್ಟರು. ಅದರ ಬಾಡಿಗೆ ಉಳಿತಾಯವಾಯಿತು. ಅಚ್ಚಮ್ಮನವರು ಕೈಲಾಗದೆ ವೈನೋವೆಂದು ಮಲಗಿಬಿಟ್ಟರು. ವಿಧಿಯಿಲ್ಲದೆ ಹತ್ತು ಗಂಟೆಯ ಮೇಲೆ ಅಡಿಗೆಯವರಿಗೆ ಹೇಳಿ ಕಳುಹಿಸಲು ಲಗ್ನ ಕಾಲವಾದ್ದರಿಂದ ಒಬ್ಬ ಸಿಕ್ಕುವುದೇ ಕಷ್ಟವಾಯಿತು. ಎಲ್ಲರೂ ಹಸಿವಿನಿಂದ ಬಳಲಿದ್ದದ್ದರಿಂದ ಕಾಫಿ ಇಲ್ಲದೆ ಬರಿ ಉಪ್ಪಿಟ್ಟನ್ನು ಮಾಡಿ ಒದಗಿಸಿದ್ದಾಯಿತು. ಆಮೇಲೆ ಅಡಿಗೆಯ ಪ್ರಯತ್ನ. ಅಡಿಗೆಯವರಿಗೆ ಚೆನ್ನಾಗಿ ಅನುಭವವಿರಲಿಲ್ಲ. ಸಾಲದ್ದಕ್ಕೆ ಶಾಮ ರಾಯರು, ಹಳ್ಳಿಯ ದಪ್ಪಕ್ಕಿಯನ್ನು ತಮ್ಮೂರಿನಲ್ಲಿ ಉಪಯೋ ಗಿಸ ಕೂಡದೆಂದೂ ತಮಗೆ ಮಾನ ಹೋಗುವುದೆಂದೂ ತಾವು ಬೇರೆ ಸಣ್ಣಕ್ಕಿಯನ್ನು ತರಿಸಿಕೊಡುವೆನೆಂದೂ ಹಟಮಾಡಿದರು. ಅಂತು,

ಆವೊತ್ತು ಅನ್ನ ಕಾಣುವುದು ದುರ್ಲಭವಾಗಿ ಕೊನೆಗೆ ಟೆಲಿಗ್ರಾಂ ಕೊಟ್ಟು ಬೆಂಗಳೂರಿನಿಂದ ಅಡಿಗೆಯವರನ್ನು ಕರೆಸಬೇಕಾಯಿತು. ಲಗ್ನಕಾಲವಾದ್ದರಿಂದ ಅವರಿಗೆ ಒಂದಕ್ಕೆರಡು ಛಾರ್ಜು ರೈಲು ಖರ್ಚು ಮುಂತಾದ್ದು ಬೇರೆ. ರಾಮದುರ್ಗದಲ್ಲಿ ನೀರಿಗೆ ತೊಂದರೆಯಾದ್ದರಿಂದ ನೀರು ಒದಗಿಸುವುದಕ್ಕೆ ಹೆಚ್ಚು ಛಾರ್ಜು. ಅವರೂ ಮೂರನೆಯ ದಿನ ಬಂದು ಇಳಿದರು. ಬಾಳೆ ಎಲೆಯನ್ನು ಹಿರಿಯೂರಿನಿಂದ ಟೆಲಿಗ್ರಾಂ ಕೊಟ್ಟು ತರಿಸಬೇಕಾಯಿತು—ಅದು ಆವೂರಿನಲ್ಲಿ ಸಿಕ್ಕುತ್ತಿದ್ದ ಮುತ್ತುಗದ ಎಲೆಗಿಂತ ಅಗ್ಗ: ಹೀಗೇ ಮಿಕ್ಕಾದ ಕಾಲದಲ್ಲಿ ಆರು ಕಾಸಿನ ಕಾರ್ಡಿನಲ್ಲಿ ಆಗುತ್ತಿದ್ದ ಕೆಲಸಕ್ಕೆ ಹನ್ನೆರಡಾಣೆ ಒಂದು ರೂಪಾಯಿನ ಟೆಲಿಗ್ರಾಂ! ಬಾಳೆ ಎಲೆ ಬಂದರೆ ಅದನ್ನು ನೋಡಿಕೊಳ್ಳುವವರಿಲ್ಲ; ಅರ್ಧಕ್ಕರ್ಧ ಕೆಟ್ಟು ಹೋಯಿತು. ದೊನ್ನೆಗಳು ಬೇಡವೆಂದು ಮೊದಲು ಗೊತ್ತಾಗಿತ್ತು; ಆದರೆ ಆಮೇಲೆ, ಬಂದವರಿಗೆಲ್ಲಾ ನೀರು ಕುಡಿಯುವುದಕ್ಕೆ ಪಾತ್ರೆಯಿಲ್ಲದೆ ದೊನ್ನೆಯ ಕಟ್ಟುಗಳನ್ನು ಒಂದಕ್ಕೆರಡರಷ್ಟು ತರಿಸಬೇಕಾಯಿತು. ಅವೂ ಒಳ್ಳೆಯ ತರಗಿನ ದೊನ್ನೆಗಳಲ್ಲ; ಮುತ್ತಗದೆಲೆಯವು........

ನಗದು ಹಣವೆಲ್ಲಾ ಖರ್ಚಾಗಿ ಹೋಯಿತು. ದಿನಸಿಯನ್ನು ಸಾಲ ಮಾಡಿತ್ತು; ಜವಳಿಗೂ ಬಂಗಾರಕ್ಕೂ ಆಮೇಲೆ ಕೊಟ್ಟರಾಯಿತು ಎಂದು ಸುಮ್ಮನಿದ್ದರು. ಆದರೂ ಮೇಲು ಖರ್ಚಿಗೇ ದುಡ್ಡು ಸಾಲದೆ ಹೋಯಿತು. ಶಾಮರಾಯರು 'ನಾನು ಮೊದಲೆ ಹೇಳಲಿಲ್ಲವೇ, ನನ್ನ ಹತ್ತಿರ ಎಲ್ಲಿದೆ?' ಎಂದು ಕೈ ಅಲ್ಲಾಡಿಸಿ ಬಿಟ್ಟರು; ಸರಿ, ಪುನಃ ಬೆಂಗಳೂರಿಗೆ ಟೆಲಿಗ್ರಾಂ; ಟೆಲಿಗ್ರಾಂ ಮೇಲೆ ಮಣಿಯಾರ್ಡರು; ಅದಕ್ಕೆ ಮುಲ್ತಾನಿಯ ಬಡ್ಡಿ. ವಾಲಗ ಮೊದಲು ಬೇಡವೆಂದಿದ್ದದ್ದು ಈಗ ಬೇಕಾಯಿತು. ವಾಲಗದವರೇ ಬಂದು ಬಂದು ಪೀಡಿಸಲು ಮೊದಲು ಮಾಡಿದರು. ಲಾಯರು ಶಾಮರಾಯರ ಮನೆಯಲ್ಲಿ ವಾಲಗವಿಲ್ಲದೆ ಮದುವೆಯಾಯಿತೆಂದು ಬೇರೇ ಗುಲ್ಲೇಳುತ್ತದೆ! ಆದ್ದರಿಂದ ಅದೂ ಆಗಲಿ ಎಂದು ಒಪ್ಪಿಕೊಂಡಾಯಿತು. ಅವರು ನಾಲ್ಕಾರು ಕಡೆ ಒಪ್ಪಿಕೊಂಡು, ಬಂದಾಗ ಬಂದರು ಹೋದಾಗ ಹೋದರು ಎಂದಾಗಿ ಹೊತ್ತಿಗೆ

ಸರಿಯಾಗಿ ಇರದೆ ಕೊನೆಗೆ ಜಗಳ ಕಾದುಕೊಂಡು ಹೋದರು. ಪಾತ್ರೆಗಳೇನೋ ದೊಡ್ಡದೊಡ್ಡವು ಸಿಕ್ಕಿದವು. ಆ ವೂರಿನ ಕೆಲವು ವೈಶ್ಯರು ಇವುಗಳನ್ನು ಇಟ್ಟುಕೊಂಡಿದ್ದು ಇಂಥ ಕಾಲದಲ್ಲಿ ಬಾಡಿಗೆಗೆ ಕೊಡುತ್ತಿದ್ದರು. ಬಾಡಿಗೆಏನೋ ಸ್ವಲ್ಪ ಹೆಚ್ಚಾಗಿಯೇ ಇತ್ತು. ಆದರೆ ಸಮಯದಲ್ಲಿ ಮಾನ ಉಳಿಯಿತು. ಮದುವೆ ಎಂಟು ದಿನವೂ—ಹದಿನೈದು ದಿನವೂ—ನಿತ್ಯ ಬೇಳೆಹುಳಿ ಅನ್ನ, ಎಂದೋ ಒಂದು ದಿನ ಒಬ್ಬಟ್ಟು, ಬೇರೆ ಭಕ್ಷ್ಯವಿಲ್ಲ—ಎಂದು ಮಾಡಿದ ಏರ್ಪಾಡು ಬದಲಾಯಿಸಿತು. ಶಾಮರಾಯರ ಬೀಗರು ಅಸಮಾಧಾನ ಮಾಡಿಕೊಂಡದ್ದರಿಂದ ಅವರನ್ನು ಒಪ್ಪಿಸಲು, ಒಂದು ಔತನ. ಶಾಮರಾಯರ ಲಾಯರು-ಸ್ನೇಹಿತರು ಕಕ್ಷಿಗಾರರು ಇವರಿಗೆ ಒಂದು ದಿನ ಔತಣ—ಹೀಗೆ ಎರಡು ಮೂರು ತಕ್ಕಮಟ್ಟಿಗೆ ಭಾರಿ ಔತಣಗಳು ನಡೆಯಬೇಕಾಯಿತು. ಈ ಲಾಯರುಗಳೂ ಕಕ್ಷಿಗಾರರೂ ಧಾರೆಯ ದಿವಸ ಶಾಮರಾಯರ ಮಗಳಿಗೆ ಬೆಳ್ಳಿಯ ಬಟ್ಟಲು ತಟ್ಟೆ ಬಂಗಾರದ ಮೊಗ್ಗು, ಹೂವು, ಕಾಯಿ-ಮುಂತಾದವುಗಳನ್ನು ಏನೇನೋ ಓದಿಸಿದ್ದರು. ಆದ್ದರಿಂದ ಅವರನ್ನು ಅಲಕ್ಷ್ಯ ಮಾಡುವ ಹಾಗಿರಲಿಲ್ಲ. ಅವರಿಗೋಸ್ಕರ ನಿತ್ಯವೂ ಕಾಫಿ ತಿಂಡಿಯ ಏರ್ಪಾಡೂ ಆಗಬೇಕಾಯಿತು. ಸಮಯದಲ್ಲಿ ಒಳ್ಳೆಯ ಕಾಫಿಪುಡಿ ಸಿಕ್ಕದು; ಬೀಜ ತಂದು ಹುರಿದದ್ದು ಸ್ವಲ್ಪ ಹೆಚ್ಚಾಯಿತು; ಅದನ್ನು ಬಿಸಾಡುವುದಕ್ಕಿಲ್ಲ; ಆದ್ದರಿಂದ ಅದನ್ನೇ ಉಪಯೋಗಿಸಿದ್ದಾಯಿತು. ಸಕ್ಕರೆಗೆ ಬದಲಾಗಿ ಕರಿಯ ಬೆಲ್ಲ—ನೆಂಟರು ತಮ್ಮೂರುಗಳಿಂದ ತಂದದ್ದು; ಪಾಯಸಕ್ಕೂ ಅದೇಯೆ.

ಬೆಂಗಳೂರಿಂದ ಟೆಲಿಗ್ರಾಂ ಮೇಲೆ ಎರಡು ಮೂರು ಸಾರಿ ಹಣ ತರಿಸಿಕೊಂಡದ್ದು ನನಗೆ ತಿಳಿಯಿತು. ಆದ್ದರಿಂದ ಈ "ಅಗ್ಗದ ಮದುವೆ" ಹೇಗೆ ನಡೆಯಿತೋ ನೋಡೋಣವೆಂದು ನಾನೂ ಕೊನೆ ಮದುವೆಯ ನಾಗೋಲಿ ಹೊತ್ತಿಗೆ ರಾಮದುರ್ಗಕ್ಕೆ ಹೋದೆ; ಸೋನೆ ಮಳೆ; ಆದ್ದರಿಂದ ಮಾಡುವುದಕ್ಕೆ ಕೆಲಸವಿಲ್ಲದೆ ಹಿಂದಿನ ಕಥೆಯನ್ನೆಲ್ಲಾ ಕೇಳಿದ್ದಾಯಿತು. "ಏತಕ್ಕೆ ಅಷ್ಟು ರೂಪಾಯಿ ತರಿಸಿಕೊಂಡೆ?" ಎಂದು ಕೇಳಿದೆ? ವೆಂಕಟರಮಣಯ್ಯನವರು ಹೊರಡುವಾಗ, ಅವರ ತಂಗಿಯ ಗಂಡನು

ತನ್ನ ಕೈಯಲ್ಲಿ ಕಾಸಿಲ್ಲ, ಖರ್ಚಿಗೆ ಕೊಟ್ಟರೆ ಬರುತ್ತೇನೆಂದನಂತೆ; ಆಗ ಕೈಲಿದ್ದ ಇನ್ನೂರು ರೂಪಾಯಿಗಳನ್ನು ಅವನಿಗೆ ಕಳುಹಿಸಿಯಾಯಿತು. ಶಾಮರಾಯರ ಬೀಗರು—"ನಮಗೆ ಖರ್ಚಿಗಿಲ್ಲ, ಸಾಲ ಕೊಡಿಸಿದರೂ ಸರಿಯೇ. ಮಗನಿಗೆ ವಜ್ರದ ಉಂಗುರ, ಕಲಾಬತ್ತಿನ ಪಂಚೆ, ಬೆಳ್ಳಿಯ ತಂಬಿಗೆ ತಟ್ಟೆ ಕೊಡಬೇಕು" ಎಂದರಂತೆ. ಅವರಿಗೆ "ಸಾಲ" ಕೊಡಬೇಕಾಯಿತು. ಈ "ಸಾಲ" ಗಳೆಲ್ಲಾ ಹಿಂದಕ್ಕೆ ಬರುವ ಸಾಲ ಗಳಲ್ಲ. ನಾನು ಹೋದ ದಿವಸ ಫೋಟೋ ತೆಗೆಯಿಸುವುದಕ್ಕೆ ಏರ್ಪಾಡು ನಡೆಯುತ್ತಿತ್ತು. ಹೀಗೆ ನಾಲ್ಕೈದು ಮದುವೆಗಳು ಒಟ್ಟಿಗೆ ನಡೆದು ನೂರಾರು ಜನ ನೆಂಟರಿಷ್ಟರು ಸೇರಿದಾಗ ಒಂದು ದೊಡ್ಡ ಸೈಜಿನ ಫೋಟೋ ತೆಗೆಯಿಸಬೇಕೆಂದು ಅದಕ್ಕಾಗಿ ಒಬ್ಬನನ್ನು ಎಲ್ಲಿಂದಲೋ ಕರೆಯಿಸಿದ್ದರು. ಮರುದಿನ ಮೆರವಣಿಗೆಯಾಗಬೇಕಾಗಿತ್ತು. ಅದು ಕೂಡದೆಂದು ಮೊದಲಿನ ಏರ್ಪಾಡು. ಆದರೆ ಶಾಮರಾಯರ ಕಕ್ಷಿಗಾರ ನೊಬ್ಬನು ತನ್ನ ಮೋಟಾರನ್ನು ಮೆರವಣಿಗೆಗೆ ಕೊಟ್ಟಿರುತ್ತೇನೆಂದು ಹೇಳಲು ಶಾಮರಾಯರ ಹೆಂಡತಿಗೆ ತನ್ನ ಮಗಳು ಮೋಟಾರಿನಲ್ಲಿ ಕುಳಿತು ಮೆರವಣಿಗೆ ಹೋದದ್ದನ್ನು ನೋಡಬೇಕೆಂದು ಚಪಲವುಂಟಾ ಯಿತು. ಬಂದ ನೆಂಟರಿಷ್ಟರಿಗೆ ಮೊದಲಿಸಿಂದಲೂ, ದೊಡ್ಡ ಮೆರವಣಿಗೆ ಯಾಗುವುದಂತೆ, "ಜಂಬೂ ಸವಾರಿ" ಯಂಥ ಮೆರವಣಿಗೆಯಂತೆ ಎಂದು ಸಂಭ್ರಮವೇ ಸಂಭ್ರಮ—ಮೆರವಣಿಗೆ ಇಲ್ಲವೆಂದರೂ ಯಾರೂ ನಂಬುತ್ತಿರಲಿಲ್ಲ. ಗಟ್ಟಿಯಾಗಿ ಹೇಳಿದರೆ "ಅಯ್ಯೋ, ನಾವು ದೂರ ದೇಶ ಯಾಕೆ ಬಂದೇವು? ಏನೋ ಒಂದು ಉತ್ಸವ ನೋಡೋಣವೆಂದು ಚಪಲ; ನಾವಿನ್ನೆಲ್ಲಿ ನೋಡಬೇಕು" ಎಂದು ಲೊಟಗುಟ್ಟುವರು. ಇವರೆಲ್ಲರ ತೃಪ್ತ್ಯರ್ಥವಾಗಿಯೂ, ಮೋಟಾರು ಬಿಟ್ಟಿ ಬಂದದ್ದರಿಂದಲೂ ಮೆರವಣಿಗೆಗೂ ಒಪ್ಪಿದಂತಾಯಿತು. ಆದರೆ ಒಂದು ಮೋಟಾರು ಸಾಲದು. ಆದ್ದರಿಂದ ಇನ್ನೆರಡು ಮೋಟಾರಿಗಾಗಿ ಆ ಕಕ್ಷಿಗಾರನಿಗೇ ಹೇಳಿತು. ಆತನು ತರಿಸಿಯೂ ತರಿಸಿದನು. ಆದರೆ ಮಳೆ ಹಿಡಿದು ಮರುದಿನ ಮೆರವಣಿಗೆ ನಿಂತು ಆ ಮೋಟಾರಿನವರು ಐವತ್ತು ರೂಪಾಯಿ ಹೆಚ್ಚಾಗಿ ಬಾಡಿಗೆ ಕೇಳಿದರು. ಅವರನ್ನು ಬಿಡಲಾರದೆ ಕಳು.

ಹಿಸಲಾರದೆ ಮೂರು ದಿನದ ಮೇಲೆ ಮಳೆ ಸ್ವಲ್ಪ ತಗ್ಗಿದಾಗ ಮೆರವಣಿಗೆ ಶಾಸ್ತ್ರ ಮಾಡಿಯಾಯಿತು. ಬಾಣಬಿರುಸು ತರಿಸಿದ್ದು ನೆನೆದು ಹೋಯಿತು. ಜನಗಳು ಹಿಂದೆ ಹೋಗಲು ಮಳೆ; ಛತ್ರಿ ಇದ್ದವರು ಮಾತ್ರ ಹೊರಟರು. ಹೆಂಗಸರು ಛತ್ರಿಯನ್ನೊಲ್ಲರು; ಆದರೆ ಅವರಿಲ್ಲ ದಿದ್ದರೆ ವಿಧಿಯಿಲ್ಲ. ಆವೊತ್ತು, ಬೇರೆ ವಾಲಗದವರಿಗೆ ಹೇಳಿದ್ದು ಅವರು "ಡೋಲು ನೆನೆದು ಹೋಗಿದೆ" ಎಂದು ಇಬ್ಬರು ಮಾತ್ರ ಬಂದರು. ಡೋಲಿಲ್ಲದೆ, ಮೆರವಣಿಗೆಗೆ ಹೋಗುವಾಗ ಆಜುಬಾಜು ಮನೆಯವರು ಎಚ್ಚರವಾಗದೆ, ಎಂಥ ಮೆರವಣಿಗೆಯೆಂದು ಅವರನ್ನೂ ಅವರಿಗೆ ಕೊಟ್ಟ ಅಡ್ವಾನ್ಸನ್ನೂ ಬಿಟ್ಟು ಆಗ ಹತ್ತಿರದ ಊರಿಗೆ ಹೋಗಿದ್ದ ಒಂದು ಬ್ಯಾಂಡಿನವರನ್ನು ಕರೆಯಿಸಿ ಮಹಾ ಧ್ವನಿಯಿಂದ ಮೆರವಣಿಗೆ ಹೊರಟು ಬೆಳಗಿನ ಜಾವದ ಹೊತ್ತಿಗೆ ಮನೆಗೆ ಬಂದಾಯಿತು.

ಇನ್ನು, ಬಂದ ನೆಂಟರನ್ನು ಹೊರಡಿಸುವ ಪ್ರಯತ್ನ. ಆದರೆ ಅರಿಸಿನ ಕುಂಕುಮ ಉಡುಗೆರೆ ಕೊಡದೆ ಕಳುಹಿಸುವುದು ಹೇಗೆ? ಮೊದಲೇ ಅದಕ್ಕೆ ಏರ್ಪಾಡು ಮಾಡಿಕೊಂಡಿರಲಿಲ್ಲ. ಆದ್ದರಿಂದ ಆ ಊರಿನಲ್ಲಿಯೇ ಮುಲ್ತಾನಿಯೊಬ್ಬನ ಅಂಗಡಿಯಲ್ಲಿ ಒಂದಕ್ಕೆರಡಾಗಿ ಕೆಲವು ಖಣಗಳನ್ನು ಕೊಂಡು, ಅವುಗಳನ್ನು ಕೊಡುವವರಿಗೆ ಕೊಟ್ಟು, ಒಂದೆರಡು ರೂಪಾಯಿಗಳನ್ನು ಇಟ್ಟು ಕೊಡುವವರಿಗೆ ಕೊಟ್ಟು ಕಳು ಹಿಸಿದ್ದಾಯಿತು. ಆದರೂ ದುರ್ಗವನ್ನು ನೋಡಿಕೊಂಡು ಹೋಗುತ್ತೇ ವೆಂದು ಕೆಲನರು ನಿಂತರು, ಕುಮಾರಸ್ವಾಮಿಯ ಕ್ಷೇತ್ರಕ್ಕೆ ಹೋಗಿ ಬರುತ್ತೇವೆಂದು ನಿಲ್ಲುವವರು ನಿಂತರು. ಮರುದಿನ ಅಮಾವಾಸ್ಯೆ; ಆಮೇಲೆ ತಿಂಗಳ ಕಂಬೋಲಿ; ಅಂತೂ ಅವರೆಲ್ಲರೂ ಹೋಗಿ ಯಥಾ ಸ್ಥಿತಿಯಾಗುವ ಹೊತ್ತಿಗೆ ಸುಮಾರು ಒಂದು ತಿಂಗಳಾಯಿತು. ಅಲ್ಲಿಯ ವರೆಗೂ ಅಡಿಗೆಯವರಿರಬೇಕಾಯಿತು. ಇಲ್ಲದಿದ್ದರೆ ಅಡಿಗೆ ಮಾಡು ವವರಾರು? ಅವರಿಗೇ ಅಸ್ವಾಸ್ಥ್ಯವಸ್ಥೆಯಾಗಿ ಹೋಯಿತು. ಮಿಕ್ಕವರಿಗೆ ಸರಿಯಾಗಿ ಅನ್ನವಿಲ್ಲದೆ ನಿದ್ರೆಯಿಲ್ಲದೆ ಮಂಕು ಹಿಡಿದು ಕೈಕಾಲು ಬಿದ್ದು ಹೋಗಿತ್ತು. ಅವರೆಲ್ಲರಿಗೂ ಎರಡೆರಡು ಕಪ್ ಸೊಗಸಾದ ಕಾಫಿಕುಡಿಸಿ ಬಿಟ್ಟಿದ್ದರೆ ಹೊಸ ಜೀವ ಬರುತ್ತಿತ್ತು. ಆದರೆ ಆ ಊರಿನಲ್ಲಿ ಉಡುಪಿ

ಹೋಟೆಲಿಲ್ಲ, ಆನಂದ ಭವನವಿಲ್ಲ. ಮನೆಯಲ್ಲಿ (ಹಿಂದೆಯೆ ಹೇಳಿದಂತೆ) ಎಲ್ಲರಿಗೂ ನಿತ್ಯವೂ ಕಾಫಿ ಏರ್ಪಾಡಿಲ್ಲ. ಆದ್ದರಿಂದ ಎಲ್ಲಕ್ಕೂ ಆ ಪರಿಚಾರಕರೇ ದಿಕ್ಕಾಯಿತು. (ಅವರ ಕೈಯಲ್ಲಿ ಕಳ್ಳತನದಿಂದ ಮಾಡಿಸಿಕೊಂಡು ಕುಡಿದವರು ಕುಡಿದೇ ಕುಡಿದರು). ಪಾತ್ರೆಗಳಿಗೆ ಕೊಟ್ಟ ಬಾಡಿಗೆ, ಅವುಗಳನ್ನು ಸಾಗಿಸಿದ ಖರ್ಚು ಇವೇ ಅವರ ಮಜೂರಿಯ ಸರಿಸಮಕ್ಕೆ ಬಂತು.

* * * *

ಮದುವೆಯೆನೋ ಆಯಿತು; ಅಗ್ಗವಾಗಿಯೂ ಆಯಿತು. ಯಾರಿಗೆ ಅಗ್ಗವಾಯಿತು? ಯಾರಿಗೆ ಆಯಿತೋ ಅವರಿಗೆ ಆಯಿತು! ಅಗ್ಗವಾಗಿ ಮಾಡಬೇಕೆಂದಿದ್ದವರಿಗೆ ಮಾತ್ರ ಆಗಲಿಲ್ಲ; ಅವರಿಗೆ ಒಂದಕ್ಕೆ ಹತ್ತು ಖರ್ಚಾಯಿತು; ಒಂದಕ್ಕೆ ಹತ್ತು ಶ್ರಮವಾಯಿತು; ಅನುಕೂಲ ವಿತರಣೆ ವಿಜೃಂಭಣೆ ಮಾತ್ರ ಹತ್ತಕ್ಕೆ ಒಂದಾಯಿತು. ಅಗ್ಗವಾಗಿ ನಡೆಯಿತೆಂಬ ಸಮಾಧಾನವಿಲ್ಲ; ಖರ್ಚಾದರೂ ಚಿಂತೆಯಿಲ್ಲ ಚೆನ್ನಾಗಿ ನಡೆಯಿತೆಂಬ ಸಂತೋಷ ಮೊದಲೇ ಇಲ್ಲ. ಅಂತು ನಡೆದೇನೋ ನಡೆಯಿತು.

೧೯೨೯. ಶ್ರೀಪತಿ.



# ಬಂಗಲಿಯ ವಾಸ

ನಮ್ಮಂಥ ಸಣ್ಣ ಸಣ್ಣ ಸರ್ಕಾರಿ ನೌಕರರಿಗೆ ದೊಡ್ಡ ದೊಡ್ಡ ಊರಿಗೆ ವರ್ಗವಾಗುವುದು ಬಹು ಕಷ್ಟ. ಅದಕ್ಕೆ ಆಗಲೇ ಮಲೆನಾಡು ಸರ್ವೀಸು ಮುಗಿದಿರಬೇಕು, ಎಷ್ಟೆಷ್ಟೋ ಸಿಪಾರಸು ಸರಬರಾಯಿ ಆಜೂಜುವಾರಿ ಆಗಬೇಕು. ಆದರೆ ನನ್ನ ಪುಣ್ಯಕ್ಕೆ ಇದಾವುದೂ ಇಲ್ಲದೆ ಈ ಊರಿಗೆ ವರ್ಗವಾಯಿತು. ದೊಡ್ಡ ಊರುಗಳಲ್ಲೇನು ಬೇಕಾದಷ್ಟು ಬಾಡಿಗೆ ಮನೆ ಸಿಕ್ಕುತ್ತೆ, ಹಳ್ಳಿಗಳ ಹಾಗಲ್ಲ ಎಂದು ಮೈಸೂರು ಬೆಂಗಳೂರಿನಲ್ಲಿದ್ದು ಬಂದವರೆಲ್ಲರೂ ಹೇಳುತ್ತಿದ್ದರು. ಆದ್ದರಿಂದ ನನಗೆ ವರ್ಗದ ಆರ್ಡರು ಬಂದ ಕೂಡಲೆ ಹೆಂಗಸರು ಮಕ್ಕಳೆಲ್ಲರನ್ನೂ ಕರೆದು ಕೊಂಡೇ ಹೊರಟುಬಿಟ್ಟೆ. ಯಾರೋ ಹಳೆಯ ಪರಿಚಯದವರನ್ನು ಹುಡುಕಿಕೊಂಡುಹೋಗಿ, ಯಜಮಾನ ಮನೆಯಲ್ಲಿಲ್ಲದಿದ್ದರೂ ಆತನ ತಾಯಿಯನ್ನು ಹೆಸರು ಹಿಡಿದು ಕೂಗಿ, ಒಳಗೆ ನುಗ್ಗಿ, ಬಲವಂತವಾಗಿ ಗಂಟಿಟ್ಟು, ಊಟಮಾಡಿ ಆಯಿತು. ಕೈಗೆ ನೀರು ಬೀಳುವುದೊಂದೇ ತಡ, ಮನೆ ನೋಡುವದಕ್ಕೆ ಹೊರಟೆ; ಮನೆಗಳು ಯಾವ ಯಾವ ಮೂಲೆಗಳಲ್ಲಿ ಖಾಲಿ ಇದ್ದವೋ ಏನೋ; ಬೀದಿ ಸಾಲಾಗಿ, ಸ್ಕೂಲು ಅಂಗಡಿ ಮುಂಗಟ್ಟೆಗೆ ಹತ್ತಿರವಾಗಿ, ಲಕ್ಷಣವಾಗಿ, ಅಗ್ಗವಾಗಿ ಇರುವ ಬಾಡಿಗೆ ಮನೆಯೊಂದೂ ಕಾಣಲಿಲ್ಲ. ಹಾಗೇ ಅಲ್ಲಿ ಇಲ್ಲಿ ವಿಚಾರಿಸುತ್ತ ಅಂಗಡಿ ಬೀದಿಗೆ ಬರಲು ಅಲ್ಲಿ ಯಾರೋ ಒಬ್ಬರು ನನ್ನ ಪ್ರಶ್ನೆಗೆ "ಬಾಡಿಗೆ ಮನೆ ಇಲ್ಲಿ ಯಾವುದೂ ಇಲ್ಲ." ಎಂದು ತಟ್ಟನೆ ಅಂದು ಬಿಟ್ಟು ಆಮೇಲೆ "ಇದರ ಹಿಂದಿನ ಸಾಲಿನಲ್ಲೇನೋ ಒಂದಿದೆ, ಆದರೆ ಅದು ನಿಮಗೆ ಸರಿಹೋಗುತ್ತದೆಯೋ ಇಲ್ಲವೋ!" ಎಂದು ನಿದಾನವಾಗಿ ಕುಗ್ಗಿದ ಸಂದೇಹ ಸ್ವರದಲ್ಲಿ ಗೊಣಗಿದರು.

"ಅದೇಕೆ, ಹಾಗಂತೀರಿ?"

"ಆ? –" ಎಂದು ಕತ್ತೆತ್ತಿ ನನ್ನ ಮುಖವನ್ನು ಸ್ವಲ್ಪ ಹೊತ್ತು ನೋಡಿ, ಆಮೇಲೆ,

“ಯಾಕೂ ಇಲ್ಲ, ಒಳಸಂಸಾರ!—”

“ಒಳಸಂಸಾರವಾದರೇನು ಚಿಂತೆಯಿಲ್ಲ ಸ್ವಾಮಿ, ನಾವು ಜಗಳ ವಾಡುವುದಿಲ್ಲ, ಹಳ್ಳಿಯವರು.”

“ನೊ—ೀ—ಡಿ; ನೋಡುವುದಕ್ಕೇನು!”

“ಹಾಗಾದರೆ ಆ ಮನೆ ತೋರಿಸುತೀರಾ?”

“ಇಗೋ ನೋಡಿ, ಈ ರಸ್ತೆಗೆ ಹಿಂದಿನ ರಸ್ತೆ; ಬೀದಿಸಾಲಾಗಿದೆ. ದೊಡ್ಡ ಬಂಗಲಿ; ರಸ್ತೆಯಕಡೆ ಬಾಗಿಲ ಮೇಲೆ To let (ಬಾಡಿಗೆಗೆ ದೊರೆಯುತ್ತೆ) ಎಂದು ಬರೆದಿದೆ.”

“ನೀವೂ ಅಲ್ಲಿಯತನಕ ಬಂದರೆ ಅನುಕೂಲ; ನಾನು ಈ ಊರಿಗೆ ಹೊಸಬ; ನೀವು ಇದೇ ಬೀದಿಯವರು ಅಂತ ಕಾಣುತ್ತೆ; ತಮಗೆ ಆ ಮನೆಯವರು ಗುರುತಿದ್ದರೂ ಇರಬಹುದು.”

“ಗುರುತೇನೋ ಇದೆ; ಆದರೆ—”

“ಮತ್ತೆ ಅಷ್ಟರಮಟ್ಟಿಗೆ ಉಪಕಾರ ಮಾಡಿ ಸ್ವಾಮಿ!”

ಹೀಗೆ ಬಲವಂತದಿಂದ ಆತನು ನನ್ನ ಜೊತೆಯಲ್ಲಿ ಬಂದು ಆ ಮನೆಯ ಗೇಟಿನ ಹತ್ತಿರ ನಿಂತು “ಇಗೋ ಈ ಭಾಗ ಬಾಡಿಗೆಗೆ ಕೊಡುತ್ತಾರೆ” ಎಂದು ತೋರಿಸಿದರು.

“ಬನ್ನೀ ಸ್ವಾಮಿ, ನೀವೂ ಒಳಕ್ಕೆ!”

“ಇಲ್ಲ; ನೀವೇ ಹೋಗಿ ವಿಚಾರಿಸಿ.”

ನಾನು—ಇದೇನು ಹೆಜ್ಜೆ ಹೆಜ್ಜೆಗೂ ಬಲವಂತ ಮಾಡುಸ್ನಾನ! ಈ ಪಟ್ಟಣವಾಸದ ಜನಗಳೇ ಇಷ್ಟು; ಹಳ್ಳಿಯವರು, ಹೊಸಬರು, ಎಂದರೆ ಸ್ವಲ್ಪವೂ ಉಪಕಾರ ಬುದ್ಧಿಯೇ ಇಲ್ಲ, ಎಂದುಕೊಂಡು ಒಳಕ್ಕೆ ಹೋದೆ.—ಇಷ್ಟರಮಟ್ಟಿಗಾದರೂ ಉಪಕಾರ ಮಾಡಿದನಲ್ಲ ಎಂಬ ಕೃತಜ್ಞತೆ ಇಲ್ಲ! ಅಷ್ಟು ಸಹಾಯ ತಾನೇ ಮಾಡಬೇಕೆಂದು ಏನು ಅಗತ್ಯ?

೨

ಮನೆಯು ದೊಡ್ಡಗಾರೆಯ ಮನೆ. ಬೆಲ್ಲದ ಅಚ್ಚಿನ ಹಾಗೆ ಚಚ್ಚೌಕವಾಗಿದೆ. ಮಹಡಿ ಇಲ್ಲದಿದ್ದರೂ ಎತ್ತರವಾಗಿ ಕಟ್ಟಿದ್ದರಿಂದ

ಭವ್ಯವಾಗಿದೆ. ದೊಡ್ಡ ಕಾಂಪೌಂಡು; ಆದರೆ ಸುತ್ತ ತಂತಿ ಕಟ್ಟಿದೆ; ಗೋಡೆ ಇಲ್ಲ; ಎರಡು ಕಡೆಗೆ ದೊಡ್ಡ ರಸ್ತೆ; ಆ ಎರಡು ಕಡೆಗೂ ಬಾಗಿಲು; ಆದರೆ ಅವೆರಡೂ ಹಾಕಿವೆ; ಅಕ್ಕ ಪಕ್ಕಗಳಲ್ಲಿ ಮುಂದಕ್ಕೆ ಚಾಚಿಕೊಂಡಿರುವ ಮೂರು ಮುಖದ ಕೊಠಡಿಗಳು; ಅವೂ ಬಾಗಿಲು ಮುಚ್ಚಿವೆ. ಆದ್ದರಿಂದ ಒಂದು ಗಳಿಗೆ ಹಾಗೇ ಸುಮ್ಮನಿದ್ದು ನೋಡಿ ಆಮೇಲೆ ಧೈರ್ಯಮಾಡಿ ಬಾಗಿಲು ತಟ್ಟಿದೆ; ಉತ್ತರವಿಲ್ಲ; ಮನೆಯಲ್ಲಿ ಯಾರೂ ಇದ್ದಹಾಗೇ ಕಾಣಲಿಲ್ಲ; ಮತ್ತಷ್ಟು ಹೊತ್ತು ನೋಡಿ ಹೊರಟು ಹೋಗಬೇಕೆಂದಿದ್ದೆ. ಅಷ್ಟು ಹೊತ್ತಿಗೆ, ಯಾರೋ ಒಬ್ಬಾಕೆಯು ಬಿಳಿಯ ಸೀರೆಯುಟ್ಟು ಅದೇ ಗೇಟನಿಂದಲೇ ಬಂದು ಮೆಲ್ಲ ಮೆಲ್ಲಗೆ ಮನೆಯ ಹಿಂದಕ್ಕೆ ಹೋದರು. ಆಮೇಲೆ 'ಮನೆಯ ಯಜಮಾನರು ಆಫೀಸಿಗೆ ಹೋಗಿರಬಹುದು, ಮಿಕ್ಕವರೆಲ್ಲರೂ ಹಿಂದಿರಬಹುದು' ಎಂದು ನಾನು ಹಿಂದುಗಡೆ ಹೋದೆ. ಅಲ್ಲಿ ಒಂದು ಪಡಸಾಲೆಯಲ್ಲಿ ಮತ್ತೊಬ್ಬ ಶ್ವೇತಾಂಬರಧಾರಿಯಾದ ಮುದುಕಿ—ಮುದುಕಿಯೇನು, ವಿಧವೆ. ಅಲ್ಲಿ ಯಾರೂ ಗಂಡಸರು ಕಾಣಲಿಲ್ಲವಾಗಿ, ಅನುಮಾನಿಸುತ್ತಾ ನಿಂತಿರಲು, ಆಕೆಯೇ ಸ್ವಲ್ಪ ದಪ್ಪವಾದ ದನಿಯಲ್ಲಿ "ಯಾರಪ್ಪ ?–ಎಂದರು.

"ಈ ಮನೆ ಬಾಡಿಗೆಗೆ ದೊರೆಯುತ್ತೆ ಅಂತ ಹಾಕಿತ್ತು; ಅದನ್ನು ಕೇಳೋಣ ಅಂತ ಬಂದೆ."

"ಹೌದು, ದೊರೆಯುತ್ತೆ."

"ಗಂಡಸರು ಯಾರೂ ಇಲ್ಲವೋ ?"

"ಒಳಗಿದ್ದಾರೆ; ಬೇಕಾದರೆ ಹೋಗಿ ನೋಡಿ."

ನಾನು ಕೋಟು ರುಮಾಲುಗಳನ್ನು ಸರಿಮಾಡಿಕೊಂಡು ಗಂಭೀರವಾಗಿ ಒಳಕ್ಕೆ ಹೋದೆ. ಒಳಗೆ ಚೌಕವಾಗಿ ಎತ್ತರವಾಗಿ ದೊಡ್ಡ ನಡುಮನೆ, ಅದರ ಮಧ್ಯೆ ಒಂದು ಪರದೆ. ಆ ಪರದೆಯ ಹಿಂದೆ ಒಬ್ಬ ನಡುವಯಸ್ಸಿನಾತನು ಒಂದು ಚಾಪೆಯ ಮೇಲೆ ಒಂದು ಕೊಳಕು ದಿಂಬನ್ನು ಹಾಕಿಕೊಂಡು ಸುರುಟಿಕೊಂಡಿದ್ದಾನೆ. ಗಡ್ಡ ಬೆಳ್ಳಗೆ ಮುಳ್ಳುಮುಳ್ಳಾಗಿ ಬೆಳೆದಿದೆ. ಒಂದು ತುಂಡು ಸುತ್ತಿಕೊಂಡು, ಮೇಲೆ ಒಂದು ಮಲೆಯಾಳದ ಚೌಕವನ್ನು ಹಾಕಿಕೊಂಡಿದ್ದಾನೆ. ಮುಖವು ಶೋಭೆಬಂದು ಸ್ವಲ್ಪ

ಇಳಿದಿದ್ದ ಹಾಗೆ ದದ್ದರಿಸಿಕೊಂಡಿದೆ; ಅದರಲ್ಲಿ ಅಲ್ಲಲ್ಲೇ ಸಿಡುಬಿನ ಹಳ್ಳಗಳು; ಹಣೆಯಲ್ಲಿ ಒಂದು ಗಂಧದ ಬಟ್ಟು. ಆತನನ್ನು ನೋಡಿದರೆ ಯಾಕೋ ಮನೆಯ ಯಜಮಾನನೆನ್ನಿಸುವ ಹಾಗಿರಲಿಲ್ಲ. ಆದರೂ ಮತ್ತಾರೂ ಕಾಣದ್ದರಿಂದ "ಸ್ವಾಮೀ?" ಎಂದೆ. ಆತನು ಸ್ವಲ್ಪ ತಬ್ಬಿಬ್ಬಾಗಿ ಯಾರು ಏನು ಎಂದು ವಿಚಾರಿಸಿ, ಕೊನೆಗೆ, "ಒಳಗೆ ಹೆಂಗಸರಿದ್ದಾರೆ; ಅವರನ್ನು ಕೇಳಿ" ಎಂದುಬಿಟ್ಟನು. ಆದ್ದರಿಂದ ಯಾರನ್ನು ಹೆಂಗಸೆಂದು ಅಲಕ್ಷ್ಯ ಮಾಡಿ ಹೊರಟು ಹೋಗಿದ್ದೆನೋ ತಿರುಗಿ ಅಲ್ಲಿಗೇ ಬೇಸ್ತುಮುಖಹಾಕಿಕೊಂಡು ಸಂಕೋಚ ಪಟ್ಟುಕೊಳ್ಳುತ್ತಾ ಬರಬೇಕಾಯಿತು. ಆಕೆ ನಗುನಗುತ್ತಾ "ಏನು? ಏನಂದರು ಗಂಡಸರು?" ಎಂದು ಮೂದಲಿಕೆಯ ಸ್ವರದಿಂದ ಮಾತನಾಡುತ್ತಾ, ನಾವು ಎಷ್ಟು ಜನವೆಂದು ಕೇಳಿದರು.

"ಗಂಡ, ಹೆಂಡತಿ, ಎರಡು ಮಕ್ಕಳು—ನಾಲ್ಕೇ ಜನ" ಎಂದು ಉತ್ತರಕೊಟ್ಟೆ.

ಅದನ್ನು ಕೇಳಿ ಆಕೆಗೆ ಸಮಾಧಾನವಾದಂತೆ ತೋರುತ್ತದೆ. "ಸರಿ, ನಮಗೆ ಹೆಚ್ಚು ಜನವಿದ್ದು ಗಲಾಟೆಯಾಗಕೂಡದು" ಎಂದು ಹೇಳಿ ಬಾಡಿಗೆಯನ್ನು ಗೊತ್ತುಮಾಡಿದರು.

ಕೂಡಲೇ ನಮ್ಮ ಹೆಂಗಸರನ್ನು ಕರೆತಂದು ಆ ಮನೆಯನ್ನು ತೋರಿಸಿದೆ. ಅದನ್ನು ನೋಡುತ್ತಿದ್ದಹಾಗೆ ಅವಳು "ಇಷ್ಟು ದೊಡ್ಡ ಮನೆ ಯಾಕೇಂದ್ರೇ? ಬಾಡಿಗೆ ಹೆಚ್ಚಲ್ಲವೇ?" ಎಂದು ಕೇಳಿದಳು.

"ಇಲ್ಲ ಹತ್ತೇ ರೂಪಾಯಿ! ಈ ಊರಿಗೆ ಇದೇ ಬಹಳ ಕಮ್ಮಿ" ಎಂದೆ. ಅಷ್ಟು ಹೊತ್ತಿಗೆ ಮನೆಯೊಳಕ್ಕೆ—ಹಿಂದಿನಿಂದಲೇ—ಹೋದೆವು. ನಡುಮನೆ, ಕೊಠಡಿ, ಅಡಿಗೆಮನೆ, ಬಿಸಿಲು ಮಚ್ಚು, ಹಿತ್ತಿಲು ಎಲ್ಲಾ ನೋಡಿದೆವು. "ಹಾಲ್ ದೊಡ್ಡದಾಗಿದೆ; ಇದರ ಮಧ್ಯದ ಪರದೆ ತೆಗೆದು ಹಾಕಿದರೆ ನಮ್ಮ ಅಮ್ಮಯ್ಯನ ಮದುವೆ ಇಲ್ಲೇ ಮಾಡಬಹುದು" ಎಂದಳು ನನ್ನ ಹೆಂಡತಿ. "ಬಿಸಿಲು ಮಚ್ಚು ಚೆನ್ನಾಗಿದೆ—ಬೆಳದಿಂಗಳ ಊಟ ಮಾಡಬಹುದು" ಎಂದಳು ನನ್ನ ಮಗಳು. "ಸುತ್ತ ದೊಡ್ಡ ಕಾಂಪೌಂಡು ಇದೆ—ಬೇಕಾದಹಾಗೆ ಗಾಳಿ ಬೆಳಕು ಬರುತ್ತದೆ. ಗಿಡ

ಗೆಂಟೆ, ತರಕಾರಿ ಬೆಳೆದುಕೊಳ್ಳಬಹುದು'' ಎಂದೆ ನಾನು. ನೀರಿಗೂ ತುಂಬ ಅನುಕೂಲವಾಗಿತ್ತು; ನಮ್ಮ ಅಡಿಗೆಮನೆಗೇ ಒಂದು ಬೇರೆ ನಲ್ಲಿ ಇತ್ತು; ಬಚ್ಚಲುಮನೆ ಬೇರೆ ಬೇರೆ ಇತ್ತು. ಅಲ್ಲಿಗೂ ನಲ್ಲಿ ಇದ್ದು, ಒಂದರಿಂದಲೇ ಎರಡು ಬಚ್ಚಲು ಮನೆಗೂ ಎರಡು ಕಡೆಯಿಂದ ನೀರು ಬರುತ್ತಿತ್ತು. ಆದ್ದರಿಂದ, ಎಲ್ಲಾ ಅನುಕೂಲವಾಗಿದೆಯೆಂದೂ ಈ ವೂರಿನಲ್ಲಿರುವವರೆಗೂ ಆ ಮನೆ ಬಿಟ್ಟು ಬೇರೆಮನೆಗೆ ಹೋಗಬೇಕಾದ್ದಿಲ್ಲವೆಂದೂ ನಿರ್ಧರ ಮಾಡಿಕೊಂಡೆವು.

ರಾತ್ರಿ ಅಲ್ಲಿಯೇ ಅಡಿಗೆ ಊಟವಾಯಿತು. ಸಾಮಾನುಗಳನ್ನು ಸಾಗಿಸಿ ಹೊಂದಿಸಿ ಜೋಡಿಸಿಕೊಂಡು ಮಾಡಬೇಕಾದ್ದರಿಂದ ಸ್ವಲ್ಪ ಹೊತ್ತಾಯಿತು. ಕೃಷ್ಣಪಕ್ಷವಾದ್ದರಿಂದ ಆಗತಾನೆ ಕೆಂಪಗೆ ಚಂದ್ರೋದಯವಾಗುತ್ತಿತ್ತು. ಮನೆಯವರೆಲ್ಲರೂ ಮಲಗಿದ್ದರು. ಹೊರಗೂ ಜನ ಸಂಚಾರವಿರಲಿಲ್ಲ. ಮಕ್ಕಳೂ ಮಲಗಿದ್ದವು. ಆದ್ದರಿಂದ ನಾವು ಆ ಮಬ್ಬು ಬೆಳದಿಂಗಳಲ್ಲಿ ಎಲೆಯಡಿಕೆ ಹಾಕಿಕೊಳ್ಳುತ್ತಾ ಜಗುಲಿಯ ಮೇಲೆ ಕುಳಿತುಕೊಂಡೆವು ಸುತ್ತಲೂ ದೊಡ್ಡ ಕಾಂಪೌಂಡು; ಅದರಲ್ಲಿ ಎಲ್ಲೋ ಎರಡು ಮೂರು ಮಾತ್ರ ಎತ್ತರವಾದ, ಪ್ರೇತಾಕಾರದ, ಬಡಕಲು ಮರಗಳು. ಅವುಗಳಲ್ಲಿ ಹೆಚ್ಚು ಕೊಂಬೆಗಳೂ ಎಲೆಗಳೂ ಇಲ್ಲ—ಅವು ಉದುರಿ ಕೆಳಗೆ ಬಿದ್ದು ಒಣಗಿ ಹೋಗಿದ್ದುವು; ಸ್ವಲ್ಪ ಗಾಳಿ ಬಂದರೂ ಅವು ಸರಿಯುತ್ತ ಮರಮರ ಶಬ್ದ ಮಾಡುತ್ತಿದ್ದುವು. ಎದುರಿಗೆ, ಯಾವಾಗಲೋ ಹುವ್ವಿನಗಿಡಗಳನ್ನು ಹಾಕಿದ್ದು ಅವುಗಳ ಗುರುತುಗಳು ಕಾಣುತ್ತಿದ್ದುವು ;ಒಂದು ಜಾಜಿಯ ಬಳ್ಳಿ ಮಾತ್ರ ಪೊದೆಪೊದೆಯಾಗಿ ಗಂಟು ನಿಂತಿತ್ತು; ಅದರಲ್ಲಿ ಹೂ ಇಲ್ಲ; ಹೂವು ಬಿಟ್ಟು ಆ ಬೆಳದಿಂಗಳಲ್ಲಿ ಗಂಟಾಗಿ ಅರಳುತ್ತಿದ್ದರೆ ನಾವು ಕುಳಿತಿದ್ದ ಸ್ಥಳಕ್ಕೆ ಸುವಾಸನೆಯು ಬರಬೇಕಾಗಿತ್ತು. ದೂರದಲ್ಲಿ, ಆ ಕಾಂಪೌಂಡಿನ ಒಂದು ಮೂಲೆಯಲ್ಲಿ, ಒಂದು ಅರಳಿಯ ಮರ; ಎಳೆಯ ಬೆಳದಿಂಗಳು ಅದರೊಳಗೆ ನುಸಿದು ಕೆಳಗೆ ನೆರಳು ನೆರಳಾಗಿತ್ತು. ಸ್ವಲ್ಪ ಹೊತ್ತಿನ ಮೇಲೆ ಮೋಡ ಮುಚ್ಚಿಕೊಂಡು ಆ ಬೆಳದಿಂಗಳೂ ಮಂಕಾಯಿತು. ಇದ್ದಕ್ಕಿದ್ದ ಹಾಗೇ ನನ್ನ ಹೆಂಡತಿ ಆ ಕಡೆ ದೃಷ್ಟಿಸಿ ನೋಡುತ್ತ "ಅಲ್ಲಿ ನೋಡಿ ಅಂದ್ರೆ! ಯಾರೋ ಕೂತ ಹಾಗಿದೆ! ಅಲ್ಲವೆ?" ಎಂದಳು.

" ಎಲ್ಲಿ ? "

" ಆ ಅರಳೀ ಮರದ ಕೆಳಗೆ ! "

" ಸರಿಸರಿ, ಹೆಂಗಸರಿಗೆ ಇನ್ನೇನೂ ಯೋಚನೆಯೆ ಇಲ್ಲ! ಹೋಗು ಒಳಗೆ."

" ನಿಜವಾಗಿ, ನೋಡಿ ಅಂದ್ರೆ ! "

ನನಗೂ ಯಾಕೋ ಹಾಗೇ ತೋರಿತು. ನೆರಳಿನಲ್ಲಿ ಕತ್ತು ಅಲ್ಲಾಡಿಸುತ್ತಾ ಇರುವಂತೆ ಕಂಡಿತು.

ಹೋಗಲಿ, ಇಷ್ಟು ಹೊತ್ತಿನಲ್ಲಿ ಇದರ ವಿಚಾರವೇನು—ಎಂದು ಬೆಳದಿಂಗಳ ವಿಹಾರವನ್ನು ಅಷ್ಟಕ್ಕೇ ಮುಕ್ತಾಯಮಾಡಿ ಒಳಗೆ ಹೋಗಿ ಮಲಗಿಕೊಂಡೆವು. ರಾತ್ರಿ ನಿದ್ರೆ ಚೆನ್ನಾಗಿ ಬರಲಿಲ್ಲ ; ಹುಡುಗರು ಕನವರಿಸಿಕೊಳ್ಳುತ್ತಿದ್ದುವು ; "ಹೊಸ ಜಾಗ; ಕ್ರಮೇಣ ಎಲ್ಲ ಸರಿ ಹೋಗುತ್ತದೆ '' ಎಂದು ಸಮಾಧಾನ ಮಾಡಿಕೊಂಡೆವು

೩

ಮರುದಿನ, ಮನೆಯ ಯಜಮಾನರಾರೋ ನೋಡಬೇಕೆಂದು ಪ್ರಯತ್ನಪಟ್ಟೆ. ಮುನ್ನಿನ ದಿನ ಕಂಡಾತನೇ ಯಜಮಾನನೆಂದು ನಂಬುವ ಹಾಗಿರಲಿಲ್ಲ. ಆದರೆ ವಿಚಾರಮಾಡಿದ ಮೇಲೆ ಆತನೇ ಯಜಮಾನನೆನಿಸಿಕೊಂಡಿದ್ದನೆಂದೂ, ಆ ಮನೆಯಲ್ಲಿದ್ದ ಮುತ್ತೈದೆ ಆತನ ಹೆಂಡತಿಯೆಂದೂ, ವಿಧವೆ ಅತ್ತೆಯೆಂದೂ, ಮನೆಯಲ್ಲಿ ಮತ್ತಾರೂ ಇರಲಿಲ್ಲವೆಂದೂ ಗೊತ್ತಾಯಿತು. ಹೀಗೆ ಮಾತನಾಡುತ್ತಾ ಇರುವಾಗ ಕಿಟಕಿಗಳು ಢಬಢಬನೆ ಬಡಿಯುತ್ತಿದ್ದುವು. ಅದನ್ನು ಕೇಳಿ ಆತನು ಅಶಾಂತನಾಗಿ "ಯಾಕೆ? ನಿಮ್ಮ ಕಡೆ ಕಿಟಕಿಗಳನ್ನು ತೆಗೆದಿದ್ದೀರೇನು ?" ಎಂದು ಕೇಳಿದನು.

" ಹೌದು ; ಗಾಳಿ ಬೆಳಕು ಬೇಡವೆ? ಒಳಗೆಲ್ಲಾ ಏನೋ ಮಣಕು ವಾಸನೆ ಇಟ್ಟುಕೊಂಡಿತ್ತು."

" ಗಾಳಿ ಬೆಳಕು ಎಷ್ಟಾಗಬೇಕು ? ಬೇಕಾದಾಗ ಒಂದು ಕಿಟಕಿ ತೆಗೆದುಕೊಂಡರೆ ಸಾಕು. ನಾವು ನೋಡಿ, ಕಿಟಕಿ ಬಾಗಿಲನ್ನೇ ತೆರೆಯುವುದಿಲ್ಲ.''

ಆತ ಹೇಳಿದ್ದು ನಿಜ. ಬೆಳಗ್ಗೆ ಹತ್ತು ಗಂಟೆಯಾಗಿದ್ದರೂ ಕೊಠಡಿಯ ಕಿಟಕಿ ಬಾಗಿಲನ್ನು ತೆರೆದಿರಲಿಲ್ಲ. "ಹಾಗಾದರೆ ಇಲ್ಲಿ ಕತ್ತಲೆಯಲ್ಲವೆ?" ಎಂದು ನಾನು ಒಳಕ್ಕೆ ಬಗ್ಗಿ ನೋಡಿದೆ. ಆತನು "ಕತ್ತಲೆಯೂ ಇಲ್ಲ, ಏನೂ ಇಲ್ಲ; ಬೆಳಕಿನಲ್ಲಿ ಏನು ಮಾಡಬೇಕು? ನಡುವೆಯ ಮಾಳಿಗೆ ಬೆಳಕು ಬೇಕಾದಷ್ಟು ಕಾಣಿಸುತ್ತದಲ್ಲ!" ಎಂದನು.

ಬೇಕಾದಷ್ಟೂ ಇಲ್ಲ, ಏನೂ ಇಲ್ಲ; ಮಧ್ಯದಲ್ಲಿ ಮಾತ್ರ ಮಸುಕು ಮಸುಕಾಗಿ ಸ್ವಲ್ಪ ಬೆಳಕು ಬೀಳುತ್ತಿತ್ತು. ಅದರಲ್ಲಿ ನೋಡಲು, ಆ ಕೊಠಡಿಯಲ್ಲಿ ಕರಿಯ ಮರದ ಮಂಚ, ಸೋಫಾ, ಕುರ್ಚಿ, ಮೇಜು, ಬೀರು, ಎತ್ತರವಾದ ಒಂದು ಕೀಲಿನ ನಿಲುಗನ್ನಡಿ ಇವೆಲ್ಲಾ ಇದ್ದುವು. ಆದರೆ ಮಂಚದ ಮೇಲೆ ಹಾಸಿಗೆ ಇಲ್ಲ, ಸೊಳ್ಳೆ ಪರದೆ ಇಲ್ಲ; ನಿಲುವುಗನ್ನಡಿಯ ಮೇಲೆ ಒಂದು ದೊಡ್ಡ ರಗ್ಗು ಕವಿಚಿತ್ತು. "ಇದೇಕೆ ಇದನ್ನು ಮುಚ್ಚಿದ್ದೀರಿ?" ಎಂದು ಕೇಳಿದೆ.

"ಮುಚ್ಚದೆ ಅದನ್ನು ಉಪಯೋಗಿಸುವವರು ಯಾರು?"

"ಮತ್ತೆ, ಮೇಜು ಮಂಚ ಎಲ್ಲಾ ಉಪಯೋಗಿಸುವವರು ಯಾರು?"

"ಯಾರೂ ಇಲ್ಲ."

"ನೀವು?"

"ನಾವು ಯಾರೂ ಆ ಚಿಕ್ಕ ಮನೆಯಲ್ಲಿ ಕೂತು ಮಲಗಿ ಮಾಡುವುದಿಲ್ಲ; ನಾನು ಮಲಗಿಕೊಳ್ಳುವುದು ನಡುವೆಯಲ್ಲಿಯೇ."

"ಏಕೆ?"

ಆತನು ಇದಕ್ಕೆ ಯಾವ ಉತ್ತರವನ್ನೂ ಕೊಡದೆ ಕೊಠಡಿಯ ಬಾಗಿಲನ್ನು ಹಾಕಿಕೊಂಡುಬಿಟ್ಟನು.

ಹಾಲ್‌ನಲ್ಲಿ ಬೆಳಕು ಚೆನ್ನಾಗಿತ್ತು. ಅಲ್ಲಿ ಹೆಚ್ಚು ಸಾಮಾನಿಲ್ಲ. ಕೆಳಗೆ ಒಂದು ಚಾಪೆ. ಪಕ್ಕದಲ್ಲಿ ಒಂದು ಒಣಕಲು ಬೆಂಚು. ಗೋಡೆಯ ಮೇಲೆ ಎದುರು ಬದರಾಗಿ ಎರಡು ಪಟಗಳು; ಒಂದು ಹೆಂಗಸಿನದು, ಮತ್ತೊಂದು ಗಂಡಸಿನದು. "ಇದು ಯಾರದ್ದು ಪಟ, ನಿಮ್ಮ ಮಗನದೋ?" ಎಂದು ಕೇಳಿದೆ.

"ಅಲ್ಲ—ನನಗೆ ಗಂಡು ಮಕ್ಕಳಿಲ್ಲ, ಎಂದು ಹೇಳಿದೆನಲ್ಲ ಆಗಲೆ!"

"ಹೌದು ಹೌದು; ಯಾರಾದರೂ ಇದ್ದಿದ್ದು ಹೋಗಿರಬಹುದು ಎಂದು ಕೇಳಿದೆ. ಈಕೆ ಯಾರು ಆತನ ಹೆಂಡತಿಯೋ!"

"ಅಲ್ಲ; ಅದು ನನ್ನ ಮಗಳ ಪಟ."

"ಆಕೆ ಎಲ್ಲಿ"

"ಮದರಾಸಿಗೆ ಕೊಟ್ಟದೆ."

"ಆಕೆಗೆ ಮಕ್ಕಳೋ?"

"ಮಕ್ಕಳೂ ಇಲ್ಲ ಏನೂ ಇಲ್ಲ. ಹೋದ ವರ್ಷ ಇಲ್ಲಿಗೆ ಕರೆದು ಕೊಂಡು ಬಂದು ನಾಗರ ಪ್ರತಿಷ್ಠೆ ಮಾಡಿಸಿದೆವು."

ಈಗ ಜ್ಞಾಪಕಕ್ಕೆ ಬಂತು—ನಿನ್ನೆ ರಾತ್ರಿ ನಾವು ಅರಳೀ ಮರದ ಕೆಳಗೆ ನೋಡಿದ್ದು ನಾಗರ ಕಲ್ಲಿರಬಹುದು!—ಆದರೂ ನಾಗರ ಕಲ್ಲು ಅಷ್ಟು ಎತ್ತರ ಇರುತ್ತದೆಯೆ?

"ಈತ ಯಾರು ಹಾಗಾದರೆ? ಈತನನ್ನು ಎಲ್ಲಿಯೋ ನೋಡಿದ ಹಾಗಿದೆ!"

"ಆತನನ್ನು ನೀವು ಕಂಡಿರಲಾರಿರಿ; ಆತ ನಮ್ಮ ಅತ್ತೆ ಇದ್ದಾರಲ್ಲ, ಅವರ ಭಾವನವರ ಮಗ."

"ಅವರೆಲ್ಲಿದ್ದಾರೆ?"

"ಅವರು ಈಗ ಇಲ್ಲ; ನಾನು ಈ ಮನೆಗೆ ಬಂದ ಹೊಸದರಲ್ಲಿಯೇ ಹೋಗಿಬಿಟ್ಟರು" ಹೀಗೆಂದು ಹೇಳಿ ಒಂದು ಸಾರಿ ಆ ಪಟವನ್ನು ಕತ್ತೆತ್ತಿ ನೋಡಿ, ನನ್ನ ಮುಖವನ್ನು ನೋಡಿ, ಏನೋ ಕೆಲಸವಿರುವಂತೆ ಹೊರಟುಹೋದರು. ನಾನು ಸ್ವಲ್ಪ ಹೊತ್ತು ಅಲ್ಲಿಯೇ ನಿಂತಿದ್ದು 'ಈ ಪಟವು ಯಾರ ಹಾಗೆ?' ಎಂದು ಎಷ್ಟೆಷ್ಟೋ ಜ್ಞಾಪಿಸಿಕೊಂಡು ಕೊನೆಗೆ ನಿರ್ಧರಿಸಲಾರದೆ ಹೊರಟುಹೋದೆ.

೪

ಹಾಗೆ ಎರಡು ಮೂರು ದಿನಗಳು ಕಳೆದವು. ಪರಸ್ಥಳವಾದ್ದರಿಂದ ಮನೆಯಲ್ಲಿ ಒಂದಿದ್ದರೆ ಮತ್ತೊಂದಿರಲಿಲ್ಲ. ಘಳಿಗೆಗೆ ಒಂದುಸಲ ಅದಿಲ್ಲ

ಇದಿಲ್ಲ ಎಂದು ಹೆಂಗಸರು ಹೇಳುವುದು–ನಾನು ಅಂಗಡಿಗೆ ಓಡುವುದು— ಹೀಗೆ ಕಳೆಯಿತು. ಬೆಳಗ್ಗೆ ಸಾಯಂಕಾಲ ಇದೇ ಕೆಲಸ. ಇದು ಸ್ವಲ್ಪ ತಹಬಂದಿಗೆ ಬಂದಮೇಲೆ ಒಂದೆರಡು ದಿನ ಸಿನಿಮ, ವಾಕಿಂಗು, ಎಂದು ಅಲ್ಲಿ ಇಲ್ಲಿ ತಿರುಗಿ ಮನೆಗೆ ಹೊತ್ತಾಗಿ ಬಂದೆ.

"ಇಷ್ಟು ಹೊತ್ತುಮಾಡಿಕೊಂಡು ಬಂದರೆ ಹ್ಯಾಗೆ? ಇಲ್ಲೇನು ನೆರೆಯೇ ಹೊರೆಯೇ? ಅಗ್ರಹಾರದ ಮನೆಯೇ ಬಾಗಿಲಲ್ಲಿ ಕುಳಿತು ಕೊಂಡರೂ ಹೊತ್ತುಹೋಗುವುದಕ್ಕೆ? ಮಕ್ಕಳು ಕತ್ತಲೆಗೆ ಮುಂಚೆ ಮಲಗಿಬಿಡುತ್ತಾರೆ. ಇದೊಂದು ದೆವ್ವದಂಥ ಮನೆಗೆಲ್ಲಾ ನಾನೊಬ್ಬಳೇ ಬಿಕೋ ಅಂತ ಕೂತಿರಬೇಕು .. " ಎಂದು ಆರಂಭವಾಯಿತು.

"ಮನೆಯವರಿದ್ದಾರಲ್ಲ, ಜೊತೆಗೆ!"

"ಸರಿಸರಿ; ಅವರೂ ಕತ್ತಲೆಗೆ ಮುಂಚೆ ಜೈನರ ಹಾಗೆ ಊಟ ಮಾಡಿ ಮಲಗಿಬಿಡುತ್ತಾರೆ; ಯಾಕೆ ಇಷ್ಟು ಹೊತ್ತು ದೀಪ ಉರಿಸಿ ಖರ್ಚು ಮಾಡುತ್ತೀರಿ—ಎಂದು ನನಗೆ ನೀತಿ ಹೇಳುತ್ತಾರೆ. ಅವರು ರಾತ್ರಿಯೂಟದಮೇಲೆ ಹೊರಕ್ಕೆ ಬರುವುದಿಲ್ಲ; ಅವರಿಗೆ ಕತ್ತಲೆಯಲ್ಲಿ ದಿಗಿಲಂತೆ!"

ಮರುದಿನ ಮುಂಚೆಯೇ ಮನೆಗೆ ಬರಬೇಕೆಂದು ನಿಶ್ಚಯಿಸಿದೆ. ಕಚೇರಿಯಿಂದ ಹೊರಡುವಾಗ ಮಳೆ ಬರುವ ಹಾಗಿತ್ತು. ಆದ್ದರಿಂದ ಎಲ್ಲಿಯೂ ನಿಲ್ಲದೇ ಮನೆಗೆ ಬಂದುಬಿಟ್ಟೆ. ಆದರೂ ಆಗಲೇ ಕತ್ತಲೆ ಯಾಗುತ್ತಾ ಬಂದಿತ್ತು. ಬೈಸಿಕಲ್ಲು ಮೋಟಾರು ಇಲ್ಲದವರಿಗೆ ಈ ಹಾಳು ಊರಿನಲ್ಲಿ, ಬರುವ ಸಂಬಳವೆಲ್ಲಾ ಆಯಾಸಪರಿಹಾರಕ್ಕೆ ದೇಹಪೋಷ ಣೆಗೇ ಸರಿಹೋಗುತ್ತೆ. ಬಂದವನು ಬಿಸಿಲುಮಚ್ಚಿನ ಮೇಲಕ್ಕೆ ಹೋದೆ– ಗಾಳಿಯಲ್ಲಿ ತಿರುಗಾಡುತ್ತಿರೋಣ ಎಂತ. ಅಲ್ಲಿ ಯಾರೋ ಒಬ್ಬರು ಆಗಲೇ ತಿರುಗಾಡುತ್ತಿದ್ದರು. ಅವರನ್ನು ನೋಡಿದಾಗ ನನ್ನ ಭಾವ ಮೈದುನನ ಜ್ಞಾಪಕ ಬಂದಿತು. ತಟ್ಟನೆ 'ಏನೋ ಇಲ್ಲಿ......?' ಎಂದ ವನು ಇಲ್ಲಿಲ್ಲಿ ಬಂದಾನು ಎಂದುಕೊಂಡು ಹಿಂತಿರುಗಿ ಬಂದು ಒಳಗೆ ಚಾಪೆ ಹಾಕಿಕೊಂಡು ಉರುಡಿಕೊಂಡೆ.

"ನೋಡೀಂದ್ರೆ!"—

"ಏನಾಶ್ಚರ್ಯ? ಏನು ಆಕಾಶ ಕಳಚಿಕೊಂಡಿತೋ ಭೂಮಿ ತಲೆಕೆಳಕಾಯಿತೋ?"

"ಇದಕ್ಕೇ ನಾನು ಯಾವುದನ್ನೂ ಹೇಳುವುದಕ್ಕೇ ಬರುವುದಿಲ್ಲ. ನಮ್ಮ ಮಾತು ನಿಮಗಾಗುವುದಿಲ್ಲ, ನಿಮ್ಮ ಮಾತು ನಮಗಾಗುವುದಿಲ್ಲ."

"ಹೋಗಲಿ! ಏನು, ಹೇಳಿಬಿಡು."

"ಅಲ್ಲಿ ನೋಡಿ, ಆ ಮುದುಕನನ್ನ ಕಾಲಿನ ಕಸವಾಗಿ ಕಾಣ್ತಾರಲ್ಲ!"

"ಹೌದು, ವಯಸ್ಸಾದ ಮೇಲೆ ಹಾಗೇ! ನಾಳೆ ನಾನು ಮುದುಕನಾದರೂ ನನ್ನನ್ನು ನೀನೂ ಹಾಗೇ ಕಾಣುತೀಯೆ."

"ಹೀಗೆ ಯಾರಾದರೂ ಮಾಡುತಾರೆಯೇ ಅಂದ್ರೆ!"

"ಹ್ಯಾಗೆ?"

"ಆತ ಮುಟ್ಟಿದ್ದು ಮನೆಯಲ್ಲಿ ಮತ್ತ್ಯಾರೂ ಮುಟ್ಟುವುದಿಲ್ಲ. ಆತ ಊಟಮಾಡಿದ ತಟ್ಟೆ, ನೀರು ಕುಡಿದ ಲೋಟಾ, ಇವುಗಳನ್ನು ಮತ್ತೊಂದಕ್ಕೆ ನೋಕಿಸುವುದಿಲ್ಲ. ಅವಕ್ಕೇ ಒಂದು ಗೂಡು ಮಾಡಿದ್ದಾರೆ. ಹೆಂಡತಿ ಅನ್ನಿಸಿಕೊಂಡವಳು, ಆತನ ಊಟವಾದ ಮೇಲೆ ಅವುಗಳನ್ನೆಲ್ಲಾ ತೊಳೆದು ಬೇರೆ ಇಟ್ಟು ಆ ಮೇಲೆ ಮಡಿ ಉಟ್ಟುಕೊಂಡು ತಾನು ಊಟ ಮಾಡುತ್ತಾಳಲ್ಲ!"

"ಮಾಡಲಿ; ಯಾಕೆ ಮಾಡಬಾರದು?"

"ಆತನೇನು ಕಾಯಿಲೆಯವನೇ, ಕ್ಷಯ ರೋಗದವನೇ?"

"ಇರಬಹುದು."

"ಆತನಿಗೇನು ಅಂದ್ರೆ ಖಾಯಿಲೆಯಾಗುವುದಕ್ಕೆ?"

"ಏನೋ ಯಾರಿಗೆ ಗೊತ್ತು?"

"ಸರಿ, ನೀವು ಏನಾದರೂ ಒಂದು ಹಿಡಿದರೆ ಹೀಗೇ; ನೀವು ಆಡಿದ್ದೇ ಮಾತು!"

"ಇಲ್ಲ, ಆಕೆ ಮಾಡಿದ್ದು ಅನ್ಯಾಯ; ಅವಳು ನಿನ್ನ ಹಾಗೆ ಮಹಾ ಪತಿವ್ರತೆಯಲ್ಲ; ಆತ ಅಮೃತ ಕುಡಿದಿದ್ದಾನೆ. ದೇವೇಂದ್ರನ ಮೊಮ್ಮಗ; ಮುಖ ಎಸಳಿಸಳಾಗಿ ತಳತಳನೆ ಹೊಳೆಯುತ್ತಾ ಇದೆ!—ಸರಿಯೆ?"

ಹೀಗೆಂದು ಪುನಃ ಮಹಡಿಯ ಮೇಲಕ್ಕೆಂದು ಹೋದೆ. ಈಗಲೂ ಅದೇ ಮನುಷ್ಯ ಅಲ್ಲಿಯೇ ಇದ್ದಾನೆ! ಆದ್ದರಿಂದ ಕೆಳಕ್ಕಿಳಿದು ಬಂದು ಆಚೆ ಕಡೆಯ ಬಾಗಿಲಿಗೆ ಹೋಗಿ ಅಲ್ಲಿ ನಿಂತಿದ್ದ ಯಜಮಾನನನ್ನು ಕುರಿತು "ಬಿಸಿಲು ಮಚ್ಚಿನ ಮೇಲೆ ಯಾರು ಇರುವವರು? ನಿಮ್ಮ ಮನೆಯವರು ಇನ್ನಾರೂ ಗಂಡಸರಿಲ್ಲ!" ಎಂದು ಮಾತು ತೆಗೆದೆ— ಆತನಿಗೆ ಅದೇಕೋ ರುಚಿಸಲಿಲ್ಲ. ಸ್ವಲ್ಪ ಗಾಬರಿಯಾದವನಂತಾಗಿ "ಯಾಕೆ? ಯಾಕೆ? ಏನಾಯಿತು?" ಎಂದು ನನ್ನನ್ನೇ ಕೇಳಿ ಹೊರಟೂ ಹೋದನು. ಇದೇಕೆಂಬುದು ಅರ್ಥವಾಗಲಿಲ್ಲ. ಮರುದಿನ ನೋಡಲು, ಮಹಡಿಯ ಮೆಟ್ಟಿಲ ತುಂಬ ಅಡ್ಡಲಾಗಿ ಎರಡು ಮೂರು ಕ್ರೋಟನ್ ಗಿಡಗಳ ದಪ್ಪ ದಪ್ಪ ಕುಂಡಗಳನ್ನು ಇಟ್ಟು ಬಿಟ್ಟಿದ್ದರು. ಅದೇಕೆಂದು ಕೇಳಿದ್ದಕ್ಕೆ "ಹುಡುಗರು ಮಚ್ಚಿನ ಮೇಲೆ ಹತ್ತಿ ಕುಣಿ ಯುತ್ತಿದ್ದರು; ಬಿದ್ದಾರು, ಎಂದು ಸ್ವಲ್ಪ ತಡೆಯಾಗಿಟ್ಟಿದ್ದೇನೆ" ಎಂದು ಉತ್ತರ ಬಂತು.

ಆವೊತ್ತು ರಾತ್ರಿ ಒಂದು ಹೊತ್ತಿನಲ್ಲಿ ಯಾರೋ ವಿಕಾರವಾಗಿ ಅರಚಿಕೊಂಡ ಹಾಗಾಗಿ ಎಚ್ಚರವಾಯಿತು. ಹಾಗೇ ಕಣ್ಣು ಬಿಟ್ಟು ಕೊಂಡು ಮಲಗಿ ಕೇಳುತ್ತಿದ್ದೆ; ಪುನಃ ಒಂದೆರಡು ನಿಮಿಷಗಳ ಮೇಲೆ ಅದೇ ವಿಕಾರವಾದ ಧ್ವನಿ! ರಿಪೀಟರ್ ಅಲಾರಂ ಟೈಂ ಪೀಸಿನಂತೆ ಅರ್ಧರ್ಧ ನಿಮಿಷ ಬಿಟ್ಟು ಬಿಟ್ಟು ಅದೇ ವಿಕಾರವಾದ ಕಿರಿಚಲು! ಈಗ ನನ್ನ ಹೆಂಡತಿ ಮಕ್ಕಳೂ ಅದನ್ನು ಕೇಳಿ ಕಿಟ್ಟನೆ ಕಿರಿಚಿಕೊಂಡು ಎದ್ದರು. ನಾನು ಅವರನ್ನು ಸಮಾಧಾನ ಮಾಡಿ, ಧೈರ್ಯ ಹೇಳಿ, ದೀಪ ಹಚ್ಚೋಣವೆಂದು ಸ್ವಿಚ್ ಹಾಕಿದರೆ ದೀಪ ಹತ್ತದು! ಹೊರಗೆ ಬಗ್ಗಿ ನೋಡಲು ರಸ್ತೆಯ ದೀಪವೂ ಹೋಗಿಬಿಟ್ಟಿತ್ತು; ಕುಟುಕಲು ಮಳೆ, ಕತ್ತಲೆ. ಎಲೆಕ್ಟ್ರಿಕ್ ದೀಪವಿದೆಯೆಂದು ದೀಪದ ಕಡ್ಡಿ ಲ್ಯಾಂಪು ಗಳನ್ನು ಅಸಡ್ಡೆಮಾಡಿ ಎಲ್ಲೋ ಹಾಕಿದ್ದೆವು; ಅವು ಸಿಕ್ಕುವಂತಿರಲಿಲ್ಲ. ಹೊರಗೆ ಎದ್ದು ಹೋಗುವುದಕ್ಕೂ ಏನೋ ಹೆದರಿಕೆ! ನಾನು ಮನೆಗೆ ಕಳ್ಳರು ಬಿದಿರ್ದಬಹುದೆಂದು ಊಹಿಸಿದೆ; ಆದ್ದರಿಂದ ಬಾಗಿಲು ಅಗಣಿ ಗಳನ್ನು ಭದ್ರಮಾಡಿ ಅವಕ್ಕೆ ಬೆಂಬಲವಾಗಿ ಪೆಟ್ಟಿಗೆಗಳನ್ನೆಳೆದು ಗಟ್ಟಿ

ಯಾಗಿ ಮಾತನಾಡುತ್ತ ಮಲಗಿದ್ದೆವು. ಎಷ್ಟು ಹೊತ್ತಾಗಿತ್ತೋ ಅದೂ ಗೊತ್ತಾಗುವ ಹಾಗಿರಲಿಲ್ಲ. ಪುನಃ ಆ ಕೂಗು ಕೇಳದಿದ್ದರೂ, ಅದು ಜ್ಞಾಪಕಕ್ಕೆ ಬಂದಾಗಲೆಲ್ಲಾ ಮೈ ಜುಮ್ಮೆಂದು ನಡುಗುತ್ತಿತ್ತು. ಬೆಳಗಿನ ಜಾವದಲ್ಲಿ ನಿದ್ದೆ ಹತ್ತಿರಬೇಕು. ಎಚ್ಚರವಾದಾಗ ಬಿಸಿಲು ಬಂದು ಹಾಲಿನವನು ಕೂಗುತ್ತಿದ್ದನು.

ರಾತ್ರಿಯ ವಿದ್ಯಮಾನಗಳಿಂದ ನಮ್ಮ ಮುಖವು ಬೆಂಡುತೇಲುತ್ತ, ಕಣ್ಣು ಗುಂಡಿಬಿದ್ದು ತೂಕಡಿಸುವವರಂತೆ ಜೋಲುಮುಖ ಹಾಕಿಕೊಂಡು ಓಡಾಡುತ್ತಿದ್ದೆವು. ಹಗಲು ಹೊತ್ತಾದರೂ ಹಿಂದಿನ ರಾತ್ರಿ ಕೇಳಿದ ವಿಕಾರವಾದ ಕೂಗನ್ನು ನೆನೆಸಿಕೊಂಡರೆ ಮೈ ನಡುಗುವುದು. ಅದು ಕಳ್ಳತನವಾದ್ದಕ್ಕೆ ಕೂಗಿಕೊಂಡದ್ದಲ್ಲವೆಂದು ಬೆಳಗಾದ ಮೇಲೆ ನಿರ್ಧರವಾಯಿತು. ಆದರೆ ಈ ವಿಚಾರವನ್ನು ಯಾರೊಡನೆಯೂ ಕೆದಕಿ ಕೇಳುವುದಕ್ಕೆ ಇಷ್ಟವಿಲ್ಲ. ಆದ್ದರಿಂದ ನಾನು ಬಾಯಿ ಬಿಗಿ ಹಿಡಿದುಕೊಂಡು ಸುಮ್ಮನಿದ್ದೆ. ನನ್ನ ಹೆಂಡತಿ ಮಾತ್ರ ಸುಮ್ಮನಿರಲಿಲ್ಲ. ಮನೆಯ ಹೆಂಗಸರು ಹಿತ್ತಿಲ ಕಡೆಗೂ ಅಡಿಗೆ ಮನೆಗೂ ತಿರುಗಾಡುತ್ತಿದ್ದಾಗ ಹಿಡಿದು ಆ ವಿಚಾರವನ್ನೆತ್ತಿದಳು. ಯಜಮಾನಿಯು ಅಲಕ್ಷ್ಯವಾಗಿ 'ಅದೇ? ನಿಮಗೆ ಹೊಸದು, ಅಷ್ಟೇಯೆ!' ಎಂದರು.

"ಕಳ್ಳರು ಬಿದ್ದರೇನೋ, ಎಂದು ಮಾಡಿಕೊಂಡಿದ್ದೆವು."

"ಕಳ್ಳರೂ ಇಲ್ಲ ಕಾಕರೂ ಇಲ್ಲ!"

"ಮತ್ತೆ ಯಾರು ಹಾಗೆ ಕೂಗಿಕೊಂಡವರು? ಯಾಕೆ?"

"ನಮ್ಮ ಅಳಿಯ ಕನವರಿಸಿಕೊಂಡರು ಅಂತ ಕಾಣುತ್ತೆ!"

"ಕನವರಿಸಿಕೊಂಡರೆ ಹಾಗೆ ವಿಕಾರವಾಗಿ ಕೂಗಿಕೊಳ್ಳುತ್ತಾರೆಯೇ? ಅದ್ಯಾಕೆ?"

"ಯಾಕೇ? ಪುಕುಲುಜೀವ; ಅದಕ್ಕೆ; ನಾವು ಹೆಣ್ಣು ಹೆಂಗಸರು ಎಷ್ಟೋ ವಾಸಿ; ಆತನದು ಗೋಳು; ಅನ್ನಕ್ಕೆ ಗೋಳು, ನೀರಿಗೆ ಗೋಳು, ನಿದ್ರೆಗೆ ಗೋಳು. ಕತ್ತಲೆಯಾದರೆ ಹೊರಕ್ಕೆ ಬಾರ, ಅಲಂಕಾರಕ್ಕೆ ಗಂಡಸು."

ಅಲಂಕಾರವೋ, ಚಮತ್ಕಾರವೋ, ಸದ್ಯ ಕಳ್ಳತನವಲ್ಲವೆಂದು

ಧೈರ್ಯವಾಯಿತು. ಪರಸ್ಥಳಕ್ಕೆ ಬಂದು ಬಂಗಲಿ ವಾಸಕ್ಕೆ ಆಸೆಪಟ್ಟು ಇರುವುದೊಂದೆರಡು ಪಾತ್ರಪರಟೆ ಬಟ್ಟೆಬರೆಗಳನ್ನು ಕಳೆದುಕೊಂಡು ಬಿಟ್ಟರೆ ಆಮೇಲೇನು ಗತಿ!

ಇನ್ನು ಕೆಲವು ದಿನಗಳು ಕಳೆದವು. ಈಗ ಆ ವಿಕಾರಸ್ವರದ ವಿಚಾರವಾಗಿ ಮಾತನಾಡುವಷ್ಟು ಧೈರ್ಯವಾಯಿತು; ಆಮೇಲೆ ಕ್ರಮೇಣ ಆ ಮಾತನ್ನೆತ್ತಿ ಹಾಸ್ಯಮಾಡಿ ನಗುವ ಹಾಗಾಯಿತು. ಅಷ್ಟು ಹೊತ್ತಿಗೆ ಮತ್ತೊಂದು ರಾತ್ರಿ ಅದೇ ಕೂಗು, ಅದೇ ವಿಕಾರಸ್ವರ; ಆದರೆ ಈಗ ನಮಗೆ ಅಷ್ಟೊಂದು ಹೆದರಿಕೆ ಇಲ್ಲ.

ಗೌರಿಹಬ್ಬದ ದಿವಸ ನನ್ನ ಭಾವಮೈದ ಮದರಾಸಿನಿಂದ ಬಂದು ಇಳಿದ. ನನ್ನ ಭಾವಮೈದನು ಬಹಳ ದಿನದಿಂದ ಮದರಾಸಿನಲ್ಲಿಯೇ ಕೆಲಸಮಾಡಿಕೊಂಡು ಅಲ್ಲಿಯೇ ಇದ್ದು ಅಲ್ಲಿಯವರ ಹಾಗೇ ಆಗಿಬಿಟ್ಟಿದ್ದಾನೆ—ಲುಂಗಿ, ಕೋಟು, ಉತ್ತರೀಯ; ತಲೆಗೆ ಕುಚ್ಚುಬಿಟ್ಟಿರುವ ಲಪ್ಪಟ್ಟೆ: ಬಾಯಿಗೆ ಎಲೆಅಡಿಕೆ ಹೊಗೆಸೊಪ್ಪು; ಮಾತಿನಲ್ಲಿ ತಮಿಳುಸ್ವರ ಇತ್ಯಾದಿ. ಮದರಾಸಿನವರಿಗೆ, ನಮ್ಮ ದೇಶ ರಸಬಾಳೆಯ ಹಣ್ಣಿನ ಹಾಗೆ; ಆದ್ದರಿಂದ ನಾವು ಇಲ್ಲಿಗೆ ಬಂದಮೇಲೆ ಮೊದಲನೆಯ ಹಬ್ಬಕ್ಕೇ ಬಂದು ಬಿಟ್ಟನು.

ಗಾಡಿ ಗೇಟಿನ ಹತ್ತಿರ ನಿಂತಿತು. ನನ್ನ ಭಾವಮೈದುನನು ಇಳಿದು ಬಾಗಿಲ ಹತ್ತಿರ ಬರೆದಿದ್ದ ಹೆಸರನ್ನು ಓದುತ್ತಿದ್ದನು. ಮನೆಯ ಯಜಮಾನನು, ಅಲ್ಲಿ ನಿಂತಿದ್ದವನು, ಅವನನ್ನು ಕಂಡೊಡನೆಯೇ ಬಾಗಿಲು ಹಾಕಿಕೊಂಡು ಹಿಂತಿರುಗಿ ಹಿಂತಿರುಗಿ ನೋಡುತ್ತ ಓಡಿ ಬಂದು ಬಿಡೋಣವೇ? ನಾನು ಕಿಟಕಿಯಿಂದ ಕಂಡು ಹೋಗಿ ಕರೆದು ಕೊಂಡು ಬಂದೆ.

"ಅದೇಕಯ್ಯ ಹಾಗೆ ಓಡಿಹೋಯಿತು ಆ ಗೂಬೆ?—ಪೋಲೀಸಿನವರನ್ನ ಕಂಡ ಕಳ್ಳನ ಹಾಗೆ?" ಎಂದು ನನ್ನ ಭಾವಮೈದ ಕೇಳಿದ.

"ಯಾಕೋಪ್ಪ, ಗೊತ್ತಿಲ್ಲ. ಆತ ಇರುವುದೇ ಹಾಗೆ" ಎಂದೆ ನಾನು.

ಆವೊತ್ತೆಲ್ಲಾ ಆತನು ಹೊರಗೆ ಬಂದದ್ದೇ ಇಲ್ಲ. ಆತನನ್ನು ಕೆಣಕ

ಬೇಕೆಂದು ನನ್ನ ಭಾವಮೈದುನನಿಗೆ ಆಸೆ. ನಾನು 'ಹೊಗಲಿ ಬಿಡೊ!' ಎಂದೆ. ಮನೆಯ ಯಜಮಾನಿ ಮಾತ್ರ ಎರಡುಮೂರು ಸಾರಿ ನಮ್ಮ ಮನೆಯ ಮುಂದೆ ಸುಳಿದಾಡಿ, ಎಂದೂ ಒಳಕ್ಕೆ ಬರದಿದ್ದವಳು ಅವೊತ್ತು ಏನೋ ನೆವ ಹಾಕಿಕೊಂಡು ಒಳಕ್ಕೆ ಬಂದು ನಮ್ಮ ಯಜಮಾನತಿ ಯನ್ನು ಕುರಿತು ಆ ಮಾತು ಈ ಮಾತು ಆಡುತ್ತಾ ಬಂದವರು ಯಾರು ಏನು ಎಂದು ವಿಚಾರಿಸಿಕೊಂಡು ಹೋದಳು.

ಊಟವಾದಮೇಲೆ ಅದು ಇದು ಹರಟೆ ಹೊಡೆಯುತ್ತಾ ಹಾಲಿ ನಲ್ಲಿ ಕುಳಿತಿದ್ದೆವು. ಇವೊತ್ತು, ಇನ್ನೂ ಹಗಲಿನಲ್ಲಿಯೇ, ಹಿಂದಿನಂತೆ ಘೋರವಾದ ಕೂಗ—"ಅಯ್ಯೋ! ಅಯ್ಯೋ!" ಎಂದು ಉಸಿರು ಸಿಕ್ಕಿಕೊಂಡು ಸಂಕಟಪಡುತ್ತಿರುವವರಂತೆ ಕೂಗು! ನನ್ನ ಭಾವಮೈ ದುನನು ತಟ್ಟನೆ ಪರದೆಯನ್ನು ತಳ್ಳಿಕೊಂಡು ಆಚೆಕಡೆಗೆ ನುಗ್ಗಿದ. ನೋಡುತ್ತಾನೆ!— ಹಿಂದೆ ನಾನು ಮೊದಲುಸಾರಿ ಕಂಡಂತೆಯೇ ಆ ಮುದುಕ ಒಂದು ಚಾಪೆಯ ಮೇಲೆ ಒಂದು ಬೆಂಡುಮರದ ತುಂಡನ್ನು ತಲೆದಿಂಬಿಗೆ ಇಟ್ಟುಕೊಂಡು ಮಲಗಿದ್ದಾನೆ!—ಕೂಗಿಕೊಳ್ಳುತ್ತಿದ್ದಾನೆ! "ಸ್ವಾಮೀ, ಸ್ವಾಮೀ ಯಾಕೆ ಕೂಗಿಕೊಳ್ಳುತ್ತೀರಿ, ಎಚ್ಚರಮಾಡಿ ಕೊಳ್ಳಿ, ಕನವರಿಕೆಯೇನು?" ಎಂದು ಅಲ್ಲಾಡಿಸಿ ನನ್ನ ಭಾವಮೈದು ನನು ಎಚ್ಚರಮಾಡಿದನು. ಮುದುಕನು ಕಣ್ಣು ಬಿಟ್ಟದ್ದೇತಡ! ನೋಡಿ ಕಿರಿಚಿಕೊಂಡು ಪುನಃ ಕಣ್ಣುಮುಚ್ಚಿಕೊಂಡು ಮಖಾಡೆಯಾಗಿ ಮಲಗಿ ಬಿಟ್ಟನು ಅಷ್ಟುಹೊತ್ತಿಗೆ ಆತನ ಅತ್ತೆಯು "ಏನಿದು ಹುಡುಗಾಟ, ಎಚ್ಚರಮಾಡಿಕೋಬಾರದೆ! ಹಗಲು ಹೊತ್ತೂ ಆರಂಭವಾಗಿ ಹೋಯ್ತ. ತಲ್ಲ ನಿಮ್ಮ ಅವಾಂತರ!" ಎಂದು ಕೂಗಿಕೊಂಡು ಬಂದು, ಅವರ ಹತ್ತಿರ ನನ್ನ ಭಾವಮೈದನ ನಿಂತಿರುವುದನ್ನು ನೋಡಿದಳು. ನಾಲ್ಕು ಕಣ್ಣುಗಳೂ ಸೇರಿದವು. ಆಕೆ ಸುಮ್ಮನೆ ನಿಂತುಬಿಟ್ಟಳು. 'ಪುಕಲು' ಎಂದು ಇತರರನ್ನು ಅಲ್ಲಗಳೆದವಳು ತಾನೇ ನಿಂತ ಕಡೆಯಲ್ಲಿಯೇ ನೀರು ನೀರಾದಳು ಕೊನೆಗೆ ಧೈರ್ಯವನ್ನು ತೆಗೆದುಕೊಂಡು, "ಅವರನ್ನೇನು ಮಾಡುತ್ತೀರಪ್ಪ? ಹೋಗಿ ನಿಮ್ಮಷ್ಟಕ್ಕೆ ನೀವು!" ಎಂದಳು. ನನ್ನ ಭಾವಮೈದುನನೂ "ನಾನೇನು ಮಾಡುತ್ತೇನಮ್ಮ

ಅವರನ್ನ ?'' ಎಂದುಕೊಳ್ಳುತ್ತ ಬಂದು ಬಿಟ್ಟನು. ಬರುತ್ತಾ ಅಲ್ಲಿದ್ದ ಪಟಗಳು ಕಣ್ಣಿಗೆಬಿದ್ದವು. ಅವುಗಳನ್ನು ನೋಡಿಕೊಂಡು ಬರುತ್ತಾ, "ಅಲ್ಲಿರುವ ಪಟ ನೋಡಿದೆಯಾ ಭಾವ ? ಅದು ನನ್ನ ಮುಖದ ಹಾಗೇ ಇಲ್ಲವೇ ?" ಎಂದು ಕೇಳಿದ. "ಹೌದು ಹೌದು. ನಾನು ಬಂದ ದಿನವೇ ಅಂದುಕೊಂಡೆ, ಈ ಮುಖವನ್ನು ಎಲ್ಲಿಯೋ ನೋಡಿದ್ದೇನೆ ಅಂತ. ನೀನು ಚುಕ್ಕಿಬಟ್ಟನ್ನು ಬಿಟ್ಟು ಹಣೆಯಲ್ಲಿ ದಪ್ಪ ಗಂಧದ ಗೀರನ್ನು ಎಳೆದುಕೊಂಡರೆ ನೀನು ಹಾಗೇ ಕಾಣುತ್ತೀಯೆ!" ಎಂದು ನಾನು ಉತ್ತರಕೊಟ್ಟೆ.

೫

ಗಣೇಶನ ಹಬ್ಬ ಮಾಡಿಕೊಂಡು ನನ್ನ ಭಾವಮೈದುನನು ಊರಿಗೆ ಹೊರಟು ಹೋದನು. ಅಷ್ಟುಹೊತ್ತಿಗೆ ನಾವು ಆ ಮನೆಗೆ ಬಂದು ಒಂದು ತಿಂಗಳಾಯಿತು. ನಾನು ಬಾಡಿಗೆಯನ್ನು ತೆಗೆದುಕೊಂಡು ಹೋಗಿ ಕೊಟ್ಟು ರಸೀದಿಯನ್ನು ಕೇಳಿದೆ. ಮುದುಕನು ಬಾಡಿಗೆ ತೆಗೆದುಕೊಳ್ಳ ಲಿಲ್ಲ. ನಾನು "ಏಕೆ ?" ಎಂದು ಕೇಳಿದೆ.

"ನೀವು ಕೊಟ್ಟ ಒಂದು ತಿಂಗಳ ಅಡ್ವಾನ್ಸು ಬಾಡಿಗೆ ಇದೆಯಲ್ಲಾ !"

"ಅದು ಅಡ್ವಾನ್ಸು; ನಿಮ್ಮ ಮೇಲಿರಲಿ; ತಿಂಗಳು ತಿಂಗಳಿಗೆ ಬೇರೆ ಕೊಡುತ್ತಾ ಹೋಗಬೇಕಲ್ಲ !"

"ಬೇಡ !"

"ಹಾಗಂದರೆ ?"

"ನೀವು ಮನೆ ಬಿಟ್ಟು ಬಿಡಿ !"

"ಇದೇನು ಸ್ವಾಮಿ ಹೀಗಂತೀರಿ ? ಇನ್ನೂ ನಾವು ಈ ಮನೆಗೆ ಬಂದು ಒಂದು ತಿಂಗಳು ; ಆಗಲೇ ಹೊರಡು ಅಂತೀರಿ ?"

"ಇಲ್ಲ, ನಮಗೇ ಬೇಕಾಗಿದೆ."

"ಹಾಗಿದ್ದರೆ ನೀವೇ ಇಟ್ಟುಕೊಂಡಿರಬಹುದಾಗಿತ್ತಲ್ಲ, ಯಾಕೆ ಬಾಡಿಗೆಗೆ ಕೊಟ್ಟರಿ ?"

" ಯಾಕಾದರೂ ಆಗಲಿ; ನೀವು ಬಿಟ್ಟುಬಿಡಿ. ನಮ್ಮ ಅತ್ತೆಯ ವರು ಹಾಗೆ ಹೇಳಿದ್ದಾರೆ; ಅವರದು ಮನೆ. "

ನಾವು ಮಾಡಿದ ಅಪರಾಧವೇನು ಗೊತ್ತಾಗಲಿಲ್ಲ; ನನ್ನ ಭಾವ ಮೈದುನನೂ ಏನೂ ಅಂದಿರಲಾರ; ಆದರೆ ಅವನು ಬಂದಾಗಿನಿಂದ ಮನೆಯವರ ನಡತೆಯೇ ಒಂದು ಬಗೆಯಾಗಿ ಹೋಗಿತ್ತು. ನಾನು ಮನೆ ಯಾಕೆಗೆ ಎಷ್ಟೆಷ್ಟೋ ಹೇಳಿದೆ:—ನನಗೆ ಪುರುಸತ್ತಿಲ್ಲ; ಮತ್ತೊಬ್ಬರ ಸಹಾಯವಿಲ್ಲ; ಮತ್ತೊಂದು ಮನೆ ನೋಡಿಕೊಂಡು ಹೋಗುತ್ತೇನೆ; ಇಲ್ಲದಿದ್ದರೆ ನವರಾತ್ರಿ ರಜ ಬರಲಿ, ನಮ್ಮ ಹಳ್ಳಿಗಾದರೂ ಹೊರಟು ಹೋಗುತ್ತೇನೆ . . . . ಎಂದು ಮುಂತಾಗಿ ಏನೇನೋ ಹೇಳಿದೆ. ಆಕೆ ಯಾವ ಮಾತಿಗೂ ಒಪ್ಪಲಿಲ್ಲ. ಅವೊತ್ತಿನಿಂದ ಮೂರುದಿನವಲ್ಲಿ ಮುವ್ವತ್ತುಸಲ " ಯಾವಾಗ ಮನೆ ಬಿಡುತ್ತೀರಿ ? " ಎಂದು ಕೇಳಿದಳು. ನಾನು ಸ್ವಲ್ಪ ಸುಳ್ಳಿಗೆ ಆರಂಭಮಾಡಿ ಮನೆ ನೋಡುತ್ತೇನೆ, ನೋಡು ತ್ತಿದ್ದೇನೆ, ನೋಡಿದ್ದೇನೆ ಎಂದು ಹೇಳುತ್ತಲೇ ಬಂದೆ. ಕೊನೆಗೆ ಮಾತಿಗೆ ಮಾತು ಬೆಳೆದು, " ಹೋಗುವಷ್ಟರಲ್ಲೇ ಆತುರವಾದರೆ ಹೇಗೆ ಮಾಡು ವುದು!—ಹೋಗುವುದಿಲ್ಲ ಎಂದರೆ ಏನು ಮಾಡುತ್ತೀರಿ ? " ಎನ್ನಬೇಕಾ ಯಿತು. ಆಕೆ ಮಾತಿನವಳಲ್ಲ, ಕೆಲಸದವಳು; ಆದ್ದರಿಂದ ಮಾತು ಅಲ್ಲಿಗೇ ನಿಂತಿತು.

ಮರುದಿನ ಕಛೇರಿಯಿಂದ ಮನೆಗೆ ಬರುವ ಹೊತ್ತಿಗೆ ಅಡಿಗೆ ಮನೆಯ ನಲ್ಲಿ ಮುಚ್ಚಿಹೋಗಿತ್ತು. ವಿಚಾರಿಸಿದ್ದರಲ್ಲಿ, ಮನೆಯಾಕೆಯು ಯಾರೋ ನಲ್ಲಿಯ ಕೆಲಸದವರನ್ನು ಕರೆದುಕೊಂಡು ಬಂದು ಅದನ್ನು ಕೀಳಿಸಿ ಮುಚ್ಚಿಸಿ ಬಿಟ್ಟಿದ್ದಳೆಂದು ಗೊತ್ತಾಯಿತು. ಬಚ್ಚಲು ಮನೆಯಲ್ಲಿ ಕೈಕಾಲು ತೊಳೆದುಕೊಳ್ಳೋಣವೆಂದು ಹೋಗಿ ನಲ್ಲಿತಿರುಗಿಸಿದರೆ ಅದ ರಲ್ಲಿ ನೀರಿಲ್ಲ. ಅದರ ಆಚೆಯ ಬಾಯಿಯು ಇನ್ನೊಂದು ಬಚ್ಚಲು ಮನೆಯಲ್ಲಿತ್ತು. ಅದನ್ನು ತಿರುಗಿಸಿ ನೀರು ಬಿಟ್ಟು ಆ ಬಾಗಿಲಿಗೆ ಬೀಗ ಹಾಕಿತ್ತು. ಆ ನಲ್ಲಿ ಸ್ವಲ್ಪ ತಗ್ಗಿನಲ್ಲಿದ್ದದ್ದರಿಂದ ನಮ್ಮ ಬಚ್ಚಲು ಮನೆಗೆ ನೀರಿಲ್ಲ. ನನಗೆ ಬ್ರಹ್ಮೇತಿ ಸಿಟ್ಟು ಬಂತು! ಕಾಲನ್ನು ತೊಳೆದು ಕೊಳ್ಳದೇ ಹಾಗೇ ಮನೆಗೆ ನುಗ್ಗಿ ಆ ಯಜಮಾನತಿಯನ್ನು ಹಿಡಿದು

"ಏನಮ್ಮ, ಹೀಗೆ ಮಾಡುವುದೇ ? ಒಳ್ಳೆಯ ಮಾತಿನಲ್ಲಿ 'ಹೋಗಿ' ಎಂದರೆ ಹೋಗುವುದಿಲ್ಲವೇ ? ನೀರು ನಿಲ್ಲಿಸಿ ಓಡಿಸಬೇಕೆ ? ನಾಳೆ ದಿನ ಉಸಿರು ಕಟ್ಟಿ ಕೊಲ್ಲಿ, ವಿಷ ಹಾಕಿ ಬಿಡಿ !" ಎಂದೆ.

"ಒಳ್ಳೇ ಮಾತಿನಲ್ಲಿ ಹೋಗಬೇಡಿ ಎಂದು ಹೇಳಿದೆನೋ ? ಹೋಗಿ ಹೋಗಿ ಅಂತ ಈಗ ಒಂದು ತಿಂಗಳಿಂದ ಗಂಟಲು ಕಿತ್ತು ಕೊಳ್ಳುತ್ತಿದ್ದೇನೆ!"

"ಇರುವತನಕ ನೀರಿಲ್ಲದಿದ್ದರೆ ಹೇಗೆ ಮಾಡುವುದು ?"

"ಹೇಗಾದರೂ ಮಾಡಿ; ನಲ್ಲಿ ಸೋರಿ ಸೋರಿ ಗೋಡೆಯೆಲ್ಲಾ ಬಿದ್ದುಹೋಗುವಹಾಗಿತ್ತು—ನಮ್ಮ ಯೋಚನೆ ನಮಗೆ."

ಇದು ಒಳ್ಳೇ 'ಪ್ಯಾದೆ ಮಾತು' ಆಯಿತೆಂದು ಮರುದಿನ ಪುನಃ ಯಾತ್ರೆ ಹೊರಟದ್ದೇ! ದೊಡ್ಡ ಊರಿನಲ್ಲಿ ನಲ್ಲಿ ಮುಚ್ಚಿಹೋದರೆ ಏನು ಗತಿ ? ಹತ್ತಿರದಲ್ಲಿ ಭಾವಿಯೋ ? ಕೆರೆಯೋ ? ಇದ್ದರೆತಾನೇ, ನಲ್ಲಿ ಯನ್ನು ಉಪಯೋಗಿಸಿ ದುರಭ್ಯಾಸವಾಗಿ ಮೈ ಬೆಳಸಿದವರು ದೂರದ ನೀರು ಹೊರುವುದು ನಿಜವೊ ?

ಆ ಮನೆಯನ್ನೇನೋ ಬಿಟ್ಟುಬಿಟ್ಟೆವು. ಕಟ್ಟಿಸಿದವರಿಗೆ ಒಂದೇ ಮನೆಯಾದರೆ, ಕಟ್ಟಿಸದಿದ್ದವರಿಗೆ ಊರೆಲ್ಲಾ ಮನೆ. ಪುನಃ ಒಂದು ಒಳ ಸಂಸಾರ! ಬಡವರಿಗೆ ಸ್ವಂತಮನೆ, ಸ್ವತಂತ್ರವಾದ ಮನೆ, ಎಲ್ಲಿ ಬರ ಬೇಕು ?—ಅವರ ಸಂಬಳವೆಲ್ಲಾ ಹಾಕಿದರೂ ಇಲ್ಲ!

ಒಂದು ದಿನ ಆಮಾತು ಈಮಾತು ಬಂದು ಈ ಮನೆಯ ಆಕೆ ನಮ್ಮ ಆಕೆಯನ್ನು ಕುರಿತು ಇದಕ್ಕಿಂತ ಹಿಂದೆ ಯಾವ ಮನೆಯಲ್ಲಿದ್ದೆ ವೆಂದು ಕೇಳಿದಳು. ಇಂಥ ಮನೆಯೆಂದು ಹೇಳಿದಮೇಲೆ ಆಕೆ ಅಸಹ್ಯ ಪಟ್ಟುಕೊಂಡು "ಆ ಮನೆಯೋ ?--ಆ ಮಗನನ್ನ ತಿಂದುಕೊಂಡವಳ ಮನೆ ?" ಎಂದು ಕೇಳಿದಳು. ನಮ್ಮವಳು ಅವಿಶ್ವಾಸದಿಂದಲೂ ಆಶ್ಚರ್ಯ ದಿಂದಲೂ "ಆಕೆಗೆ ಗಂಡುಮಕ್ಕಳೇ ಇಲ್ಲವಂತೆ; ಒಬ್ಬಳೇ ಹೆಣ್ಣು ಮಗಳಂತೆ !" ಎಂದು ಪ್ರಶ್ನೆಮಾಡುವ ಸ್ವರದಲ್ಲಿ ಕೇಳಿದಳು. ಅದಕ್ಕೆ ಆಕೆ—

"ತನ್ನ ಮಗನಲ್ಲ—ತನ್ನ ಭಾವನ ಮಗ, ಯಾರಾದರೇನು ?

ಸತ್ತಾಗ ಹತ್ತು ದಿನ ಸೂತಕ ಬಿದ್ದಿರಲಿಲ್ಲವೇ? ಅವನು ಬದುಕಿದ್ದಿದ್ದರೆ ಈಗ ಆಕೆ ತಿನ್ನುತ್ತಿರುವ ಆಸ್ತಿಯನ್ನೆಲ್ಲಾ ಅನುಭವಿಸಿಕೊಂಡಿರುತ್ತಿದ್ದ."

"ಸರಿಸರಿ! ಏನು ಹಾಗೆಂದರೆ? ಜನಗಳು ಏನಾದರೂ ಒಂದು ಹೆಸರಿಡುತ್ತಾರೆ! ಅವನ ಆಯುಸ್ಸು ತೀರಿತು, ಅವನು ಹೋದ..........."

"ನೀವು ಏನಾದರೂ ಅಂದುಕೊಳ್ಳಿ! ಕಂಡವರೇ ಹೇಳುತ್ತಾರೆ:- —ಆ ಮನೆಯಲ್ಲಿ ಈಗಲೂ ಹಗಲು ಹೊತ್ತೇ ಆ ಹುಡುಗ ಕಾಣಿಸಿಕೊಳ್ಳುತ್ತಾನಂತೆ, ಮಹಡಿಯ ಮೇಲೆ ನಿಂತಹಾಗೆ ಇರುತ್ತಂತೆ, ಚಿಕ್ಕ ಮನೆಯಲ್ಲಿ ಕೂತಹಾಗಿರುತ್ತಂತೆ, ಮಂಚದ ಮೇಲೆ ಮಲಗಿರುವ ಹಾಗಿರುತ್ತಂತೆ, ಮನೆಯವರನ್ನು ಅನ್ನ ತಿನ್ನಗೊಡಿಸುವುದಿಲ್ಲವಂತೆ, ನೀರು ಕುಡಿಯಗೊಡಿಸುವುದಿಲ್ಲವಂತೆ, ರಾತ್ರಿ ಮಲಗಿದ್ದರೆ ಎದೆಯ ಮೇಲೆ ಕೂತುಕೊಂಡು ಕತ್ತು ಮಿಸುಕುತ್ತಾನಂತೆ! ಅದಕ್ಕೇ, ಯಾರಾದರೂ ಜೊತೆಗೆ ಇರಲಿ ಅಂತ, ಮನೆ ದೊಡ್ಡದು ಎಂಬ ನೆವಹೇಳಿಕೊಂಡು, ಆಕೆ ಸಂಸಾರಕ್ಕೆ ಬಾಡಿಗೆಗೆ ಕೊಡುತ್ತಿರುವುದು. ಯಾರು ಬಂದರೂ ಆ ಮನೆಯಲ್ಲಿರುವುದು ತಿಂಗಳೊ ಹದಿನೈದು ದಿನವೊ ಅಷ್ಟೇಯೆ. ಒಬ್ಬರು ಮಾತ್ರ ಯಾರೋಒಂದು ವರ್ಷವಿದ್ದರು. ಅವರು ಇರುವ ತನಕ ಯಾವ ಕಾಟವೂ ಇರಲಿಲ್ಲವಂತೆ ..."

"ಯಾಕೆ?"

"ಯಾಕೆ? ಅವರು ತುಂಬ ಒಳ್ಳೆಯವರಂತೆ, ಸತ್ಯವಂತರಂತೆ, ಆಚಾರವಂತರಂತೆ "

"ಮತ್ತೆ ಅವರನ್ನೂ ಯಾಕೆ ಹೊರಡಿಸಿದರು ?"

"ವರ್ಗವಾಯಿತಂತೆ ಇನ್ನ್ಯಾವುದೊ ಊರಿಗೆ. ಅದನ್ನು ಕೇಳಿ, ಕಾಸು ಅಂದರೆ ಕಿಸಬಾಯಿ ಆಗುವ ಆ ಮನೆಯವರು, 'ಬೇಕಾದರೆ ಇನ್ನೂ ಎರಡು ರೂಪಾಯಿ ಬಾಡಿಗೆ ಕಮ್ಮಿಮಾಡಿಕೊಡುತ್ತೇವೆ, ಈ ಊರಿನಲ್ಲೇ ಇದ್ದು ಬಿಡಿ' ಎಂದು ಹೇಳಿದರಂತೆ. ಸರ್ಕಾರ ನಮ್ಮ ಅಧೀನವೇ ? ಯಾವುದೋ ಊರಿಗೆ ಹಾಕಿಬಿಟ್ಟರು."

"ಇದೆಲ್ಲಾ ಬರೀ ಅಂತೆ ಕಂತೆಯೋ ಯಾರಾದರೂ ನೋಡಿದವರಿದ್ದಾರೆಯೋ?"

" ಸರಿಬಿಡಿ ! ಎಲ್ಲರೂ ಹೇಳುತಾರೆ."

" ಏನು ಹೇಳುತಾರೆ ? "

" ಏನೇನೋ ಹೇಳುತಾರೆ ! "

" ಹೇಳಿ ! ನಾವೂ ಸ್ವಲ್ಪ ಕೇಳೋಣ. "

" ಆ ಮನೆಯಲ್ಲಿದ್ದಾಳಲ್ಲ, ರಾಕ್ಷಸಿ, ಮಡಿಹೆಂಗಸು ಅನ್ನಿಸಿಕೊಂಡವಳು, ಅವಳು ಆ ಹುಡುಗನಿಗೆ—ನಮಗೆ ಯಾಕಮ್ಮಾ ಆ ಮಾತು, ಮಾಡಿದವರ ಪಾಪ ಆಡಿದವರ ಬಾಯಲ್ಲಿ ಅಂತ ! ಅಷ್ಟೇಕಮ್ಮ ಆ ಮನೆಯ ಹುಟ್ಟೇ ನೋಡಿ ಹೇಗಿದೆ ! "

" ಹೇಗಿದೆ ? ಗಾರೆಗಚ್ಚಿನ ತಾರಸಿಮನೆ; ಲಕ್ಷಣವಾಗಿಯೇ ಇದೆ!"

" ಗಾರೆಗಚ್ಚಾದರೇನು, ಮುಖದಲ್ಲಿ ಗೋಳು ಸುರಿಯುತ್ತಿದೆ ! "

" ಅದು ಇರುವುದೇ ಹಾಗೆ ! ಕಟ್ಟಿಸಿದಾಗಿನಿಂದಲೂ ಸುಣ್ಣ ಬಣ್ಣ ಬಳಿಸಿಲ್ಲ, ಮಳೆನೀರು ಬಿದ್ದು ಬಿದ್ದು ಬೂದುಗಟ್ಟಿಕೊಂಡಿದೆ."

" ಅದೂ ಹೋಗಲಿ ! ಆ ಭೂಮಿಯಲ್ಲಿ ಬಿತ್ತಿದ ಬೆಳೆ ಕೂಡ ಬೆಳೆಯುವುದಿಲ್ಲವಲ್ಲ ! ಹಿಂದೆ ಆ ಹುಡುಗ ಇದ್ದಾಗ ಕಾಂಪೌಂಡು ತುಂಬ ಹೂವೋ, ಹಣ್ಣೋ, ಅಷ್ಟು ಚೆನ್ನಾಗಿತ್ತು ! ಈಗ ಕಾಂಪೌಂಡು ತುಂಬ ನೆಗ್ಗಲುಮುಳ್ಳು, ಮುಟ್ಟಿದರೆ ಮುಸಿಯು ! ರಾಗಿ ಜೋಳ ಕೂಡ ಬೆಳೆಯುವುದಿಲ್ಲ ; ಗುತ್ತಿಗೆ ತಗೊಂಡವನೇ ಉಳಿಯುವುದಿಲ್ಲವಂತೆ ! "

" ಇದೆಲ್ಲಾ ಹುಚ್ಚು. ಹಿತ್ತಲಲ್ಲಿ ಎಂಥ ಒಳ್ಳೆಯ ಚಕ್ಕೋತನ ಗಿಡವಿದೆ ! ಗಿಡದ ತುಂಬ ಹಣ್ಣು ! ಒಂದೊಂದು ಕಾಯಿ ಒಂದೊಂದು ತಲೆಬುರುಡೆಯ ಗಾತ್ರ ! "

" ಆ ಹಣ್ಣು ತಿಂದವರು ಮಾತ್ರ ಇಲ್ಲ; ಅದರಲ್ಲಿ ಹಣ್ಣಾಗುವುದಕ್ಕೆ ಮುಂಚೆ ಕಾಯೇ ಕೊಳೆತು ಕೊಳೆತು ಬಿದ್ದುಹೋಗುತ್ತೆ; ಇಲ್ಲ, ಹಣ್ಣಾದರೆ, ಅದರ ತುಂಬ, ಇಷ್ಟಿಷ್ಟು ಗಾತ್ರಕ್ಕೆ, ಅವರೆಕಾಯಿ ಹುಳುವಿನ ಹಾಗೆ ಹುಳು ! "

" ಯಾವುದಕ್ಕೆ ಯಾವುದು ಸಂಬಂಧ ? ಹುಡುಗ ಹೋದರೆ ಹೀಗೆಲ್ಲ ಆಗಬೇಕೆ ? "

" ನನಗೇನು ಗೊತ್ತು ? ಎಲ್ಲರೂ ಆಡಿಕೊಳ್ಳುತ್ತಿರುವುದನ್ನು

ಹೇಳಿದೆ. ನೀವೂ ಇನ್ನೆರಡು ದಿನ ಅಲ್ಲಿಯೇ ಇದ್ದಿದ್ದರೆ ನಿಮಗೇ ಎಲ್ಲಾ ಗೊತ್ತಾಗುತಿತ್ತೇನೋ ! ”

* * * *

ನನಗೆ ದೆವ್ವಭೂತಗಳೆಂದರೆ ನಂಬಿಕೆಯೇನೋ ಇಲ್ಲ; ಆದರೆ ಇದನ್ನೆಲ್ಲಾ ಕೇಳಿದಮೇಲೆ ಹಿಂದೆ ನಡೆದದ್ದೆಲ್ಲಾ ಒಂದೊಂದಾಗಿ ಜ್ಞಾಪಕಕ್ಕೆ ಬಂದು, ಆ ಮನೆಗೆ ‘ ಸುಮ್ಮನೆ ಬಂದು ಇರು ’ ಎಂದರೂ ಪುನಃ ಅಲ್ಲಿಗೆ ಹೋಗುವುದಿಲ್ಲ ಎಂದು ನಿರ್ಧರಮಾಡಿಕೊಂಡು ಬಿಟ್ಟೆ. ಈಗಲೂ ಕತ್ತಲೆಯ ಕಾಲದಲ್ಲಿ ಆ ಕಡೆ ಹೋದಾಗ ಅಲ್ಲಿ ಬಗ್ಗಿನೋಡಬೇಕೆಂಬ ಕುತೂಹಲವುಂಟಾಗುತ್ತದೆ; ಜೊತೆಯಲ್ಲಿಯೇ ಏನೋ ಹೆದರಿಕೆ, ಅಧೈರ್ಯ; ಉತ್ತರಕ್ಷಣದಲ್ಲಿಯೇ, ನಾನು ಯಾರಿಗೆ ಏನು ಅನ್ಯಾಯಮಾಡಿದ್ದೇನೆ ? ನನ್ನನ್ನು ಯಾವ ದೆವ್ವ ಏನು ಮಾಡೀತು ? ಹಾಗಿದ್ದರೆ ಆ ಮನೆಯಲ್ಲಿದ್ದಾಗಲೇ ನನ್ನನ್ನು ಪೀಡಿಸಬಾರದಾಗಿತ್ತೇನು ?—ಎಂದು ಮನಸ್ಸಿನಲ್ಲಿಯೇ ಒಂದು ಒಣ ಧೈರ್ಯ. ಈ ಮಧ್ಯೆ, ಕಾಲು ಮಾತ್ರ ಹೇಳಿದ ಮಾತು ಕೇಳದೆ, ಸರಸರನೆ ಮುಂದೆ ಹೋಗಿಬಿಡುವುದು. ಈಗಲೂ ನಾವಿದ್ದ ಕಡೆಯ ಬಾಗಿಲಿನ ಮೇಲೆ To Let ಎಂದು ಬರೆದೇ ಇದೆ. ಬಾಗಿಲು ಕಿಟಕಿ ಯಾವಾಗಲೂ ಹಾಕಿಯೇ ಇರುವುದರಿಂದ, ಈಚೆಗೆ ಯಾರಾದರೂ ಬಂದಿದ್ದರೋ ಇಲ್ಲವೋ ತಿಳಿಯದು.

೧೯೩೦ ಶ್ರೀಪತಿ

---

# ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ

ಹಿಂದೆ, ನಮ್ಮ ದೇಶದಲ್ಲಿ ಒಬ್ಬ ಅಮಲ್ದಾರರಿದ್ದರಂತೆ. ಅವರ ಹೆಸರೇನೋ ಯಾವ ತಾಲ್ಲೂಕೋ ಜ್ಞಾಪಕವಿಲ್ಲ. ಈ ಕಥೆಯನ್ನು ಹೇಳಿದವರನ್ನು ಕೇಳಿದೆ; ಅವರು ಉದಾಸೀನವಾಗಿ ಯಾರಾದರೇನು, ಎಲ್ಲಿದ್ದರೇನು ಎಂದು ಲೊಚಗುಟ್ಟಿಬಿಟ್ಟರು. ಅಮಲ್ದಾರರೆಂದರೆ ಹಿಂದಿನ ಕಾಲದಲ್ಲಿ ತಾಲ್ಲೂಕಿನ ದೊರೆ. ನಿಜವಾಗಿ ದೊರೆ; ಸರ್ವಾಧಿಕಾರಿ. ಅವರು ಆಡಿದ್ದೇ ಆಟ. ಡೆಪ್ಯುಟಿ ಕಮೀಷನರೂ ಅವರನ್ನು ಅನುಸರಿಸಿಕೊಂಡು ಹೋದರೆ ಮಾನ ಇಲ್ಲದಿದ್ದರೆ ಮಾನಕ್ಕೆ ಮೀರಿದ್ದು. ತಾಲ್ಲೂಕಿನ ಜನರಿಗೆ ಸಬ್‌ಡಿವಿಜನ್ ಆಫೀಸರು ಯಾರೋ, ಡೆಪ್ಯುಟಿ ಕಮೀಷನರು ಯಾರೋ, ಅವರಿಗೆ ಎಷ್ಟು ಅಧಿಕಾರವೋ ಏನೂ ತಿಳಿಯದು. ಅವರಿಗೆ ತಿಳಿದದ್ದು ಒಂದೇ.—ತಮ್ಮ ಊರಿಗೆ, ತಾಲ್ಲೂಕಿಗೆ, ಅಮಲ್ದಾರರೇ ಅಧಿಕಾರಿಗಳು.

ಆ ಅಮಲ್ದಾರರಿಗೆ ತಕ್ಕ ಡೆಪ್ಯುಟಿ ಕಮೀಷನರು ಒಂದು ಸಲ ಬಂದರಂತೆ. ಅವರ ಹೆಸರೂ ಜ್ಞಾಪಕವಿಲ್ಲ. ಅಂತು ಯಾರೋ ಯೂರೋಪಿಯನರು. ಒಂದು ದಿನ ಅಮಲ್ದಾರರಿಗೂ ಇವರಿಗೂ ಗಂಟು ಬಿತ್ತು.—ನಿತ್ಯವೂ ಲಕ್ಷ್ಯವಿಲ್ಲದೆ ಅನ್ನ ಅಗಿದು ನುಂಗುವಾಗ ಒಂದೊಂದು ಸಲ ಹಲ್ಲಿಗೆ ಕಲ್ಲು ಸಿಕ್ಕಿ ಮೈ ಜುಮ್ ಎನ್ನುವ ಹಾಗೆ. ಒಂದು ಕಡೆ ಕದೀಮ ಶ್ಯಾನುಭೋಗ ಇನ್ನೊಂದು ಕಡೆ ಘಾಟಿ ಅಮಲ್ದಾರ ಇವರ ಮಧ್ಯೆ ಡೆಪ್ಯುಟಿ ಕಮೀಷನರು ಕತ್ತರಿಯ ಮಧ್ಯೆ ಅಡಕೆ ಸಿಕ್ಕಿ ನರಳುವ ಹಾಗೆ ನರಳುತ್ತಿದ್ದರು : ಮಾನದಿಂದ ತಪ್ಪಿಸಿಕೊಂಡರೆ ಸಾಕೆಂದು ಕಾಲ ತಳ್ಳುತ್ತಿದ್ದರು. ಆದರೆ ಹಲ್ಲಿಗೆ ಕಲ್ಲು ಸಿಕ್ಕಿದ ಹಾಗೆ, ಕತ್ತರಿಗೆ ಗೋಟು ಸಿಕ್ಕಿದರೆ, ಗೋಟಿನಲ್ಲಿ ಕತ್ತರಿ ಸಿಕ್ಕಿಕೊಂಡು ಕತ್ತರಿಯ ಬಾಯಿ ಹೋಗುತ್ತದೆ. ಹಾಗಾಯಿತು ಈಗ. ಆ ಪ್ರಾಂತವು ಒಂದು ಪುಂಡುಕೊಂಪೆಯೆಂದು ಹೆಸರಾಗಿತ್ತು. ಆದ್ದರಿಂದ ಆ ಡಿಸ್ಟ್ರಿಕ್ಟಿಗೆ ಬಂದ ಡೆಪ್ಯುಟಿ ಕಮೀಷನರುಗಳು ಇರುಷ ನಾಲ್ಕು ದಿನ ಮರ್ಯಾದೆಯಿಂದ ಇದ್ದು ಹೋದರೆ ಸಾಕೆಂದು ಹೇಗೋ ಹಾಗೆ ಇರುತ್ತಿದ್ದರು. ಇದು

ಸರ್ಕಾರಕ್ಕೂ ತಿಳಿದು ಈ ಯೂರೋಪಿಯರ್ನ ಡೆಪ್ಯುಟಿ ಕಮೀಷನರನ್ನು ಆ ಡಿಸ್ಟ್ರಿಕ್ಟಿಗೆ ಹಾಕಿದ್ದರು. ಅವರು ಬಂದ ಸ್ವಲ್ಪ ದಿನದ ತನಕ ವಿದ್ಯಮಾನಗಳನ್ನು ಪರಿಚಯ ಮಾಡಿಕೊಂಡು ಈ ತಾಲ್ಲೂಕಿನ ಅಮಲ್ದಾರರಿಗೆ ಬುದ್ಧಿ ಕಲಿಸಬೇಕೆಂದು ಯೋಚಿಸಿದರು. ಅವರು ದೊಡ್ಡ ಮನೆತನದವರು, ದೊಡ್ಡ ಮನಸ್ಸಿನವರು, ವಿನೋದಪರರು; ಯಾರನ್ನೂ ಹಿಂಸಿಸಿ, ಶಿಕ್ಷಿಸಿ, ಕೆಲಸ ಮಾಡಿಸಿಕೊಳ್ಳುವುದು ಅವರ ಸ್ವಭಾವವಲ್ಲ. ಆದ್ದರಿಂದ ಮುಂದೆ ಏನು ಮಾಡಬೇಕೆಂಬ ನಿಶ್ಚಯವಿಲ್ಲದೆ, ಇದ್ದಕ್ಕಿದ್ದ ಹಾಗೆಯೇ ಯಾರಿಗೂ ಹೇಳದೆ, ಒಂದು ದಿನ ಕುದುರೆ ಹಾಕಿಕೊಂಡು ಆ ತಾಲ್ಲೂಕಿನ ಕಸಬಾಕ್ಕೆ ಬಂದು ತಾಲ್ಲೂಕು ಕಛೇರಿಗೆ ಧುಡುಮ್ಮನೆ ನುಗ್ಗಿದರು. ಕಛೇರಿಯ ನೌಕರರು ಯಾರೆಂದರೆ ಅವರು ಅಲ್ಲಲ್ಲಿ ಹರಟೆ ಹೊಡೆಯುತ್ತಿದ್ದರು. ಗುಲ್ಲೋಗುಲ್ಲಾಗಿತ್ತು. ಅವರಲ್ಲಿ ಒಬ್ಬನನ್ನು ಹಠಾತ್ತಾಗಿ 'ಅಮಲ್‌ದಾರರೆಲ್ಲಿ' ಎಂದು ಕೇಳಿದರು 'ಮನೆಯಲ್ಲಿದ್ದಾರೆ' ಎಂದು ಉತ್ತರ ಬಂತು.

ಅವರಿಗೆ ಈ ಸಾಹೇಬರು ಯಾರೆಂದು ಗುರುತಿರಲಿಲ್ಲ. ಆದರೂ ಅವರು ಹಿಂತಿರುಗಿದ ಕೂಡಲೇ ಗುಸುಗುಸನೆ ಮಾತಿಗೆ ಆರಂಭವಾಗಿ, ಅವರು ಡೆಪ್ಯುಟಿ ಕಮೀಷನರಿರಬಹುದೆಂದೂ ಅಮಲ್ದಾರರ ಮನೆಯ ಕಡೆಗೆ ಹೋದರೆಂದೂ ಅನುಮಾನವಾಗಲು, ಅವರು ಕುದುರೆಯಮೇಲೆ ಅಲ್ಲಿಗೆ ಹೋಗುವುದಕ್ಕಿಂತ ಮುಂಚೆಯೇ, ವರ್ತಮಾನವು ಅಮಲ್ದಾರರಿಗೆ ಹಿತ್ತಿಲುಬಾಗಿಲಿನಿಂದ ಹೋಗಿಬಿಟ್ಟಿತ್ತು.

ಅಮಲ್ದಾರರ ಮನೆ ಯಾವುದು ಎಂದು ಸಾಧಾರಣವಾಗಿ ಯಾರೂ ತೋರಿಸಬೇಕಾಗಿರುವುದಿಲ್ಲ. ಆದರೂ ಸಾಹೇಬರು ಅದನ್ನು ಹುಡುಕಿಕೊಂಡು ಹೋಗುವುದಕ್ಕೆ ಸ್ವಲ್ಪ ಹೊತ್ತೇ ಆಯಿತು. ಕಛೇರಿಯಲ್ಲಿ ಮಾಡಿದಂತೆಯೇ ಇಲ್ಲಿಯೂ ಹೇಳದೆ ಕೇಳದೆ 'ಅಮಲ್ದಾರ್!' ಎಂದು ಕೂಗಿಕೊಂಡು ಒಳಗೆ ನುಗ್ಗಿದರು. ಅಮಲ್ದಾರರು ಒಂದು ಚಾಪೆಯ ಮೇಲೆ ನರಳುತ್ತಾ ಮಲಗಿದ್ದರು.

"ಏನು ಅಮಲ್ದಾರರೇ, ಮಲಗಿಬಿಟ್ಟಿದ್ದೀರಲ್ಲಾ, ಮೈಯಲ್ಲಿ ಸರಿಯಾಗಿಲ್ಲವೋ?"

" ಇಲ್ಲ ಮಹಾಸ್ವಾಮಿ."

" ಮತ್ತೆ, ಬರಿಯ ಚಾಪೆಯ ಮೇಲೆ ಮಲಗಿದ್ದೀರಲ್ಲಾ ! ಯಾರ್ರೀ ಅಲ್ಲಿ ? ಅವರ ಹಾಸಿಗೆಯನ್ನು ಹಾಸಿಕೊಡಿರಿ ! "

" ಬೇಡ, ಮಹಾಸ್ವಾಮಿ, ಬೇಡ; ಚಿಂತೆ ಇಲ್ಲ."

" ಅಯ್ಯಯ್ಯೋ ಉಂಟೇನ್ರಿ ! ' ಎಂದು ಸಾಹೇಬರು ಬಲವಂತ ವಾಗಿ ಹಾಸಿಗೆಯನ್ನು ಹಾಸಿಸಿ ಮಲಗಿಕೊಳ್ಳುವಂತೆ ಮಾಡಿದರು. ತಾವೂ ಹತ್ತಿರದಲ್ಲೇ ಹಾಕಿದ ಒಂದು ಕುರ್ಚಿಯಮೇಲೆ ಕುಳಿತು,

" ಏನು ಖಾಯಿಲೆ, ಜ್ವರವೊ ? " ಎಂದು ತಲೆಯನ್ನು ಮುಟ್ಟಿ ನೋಡಿದರು; ಕೈಯನ್ನು ಹಿಡಿದು ನೋಡಿದರು. ಆದ್ದರಿಂದ ಅವರು 'ಇಲ್ಲ' ಎನ್ನಬೇಕಾಯಿತು. ಮುಖ ಗೆಲುವಾಗಿತ್ತು. ಹಣೆಯಲ್ಲಿ ಗಂಧಾ ಕ್ಷತೆ ಇತ್ತು. ಬಾಯಿತುಂಬಾ ರಂಗುರಂಗಾಗಿ ಎಲೆಅಡಕೆ ಹಾಕಿಕೊಂಡಿ ದ್ದರು. ನಾಡಿ ನೋಡಿದರೆ ಗಟ್ಟಿಮುಟ್ಟಾದವನು ಪೂರ್ಣ ಆರೋಗ್ಯದಲ್ಲಿ ಇರುವನಂತೆಯೇ ಇತ್ತು. ಇದನ್ನು ಗ್ರಹಿಸಿದ ಆ ತಾಲ್ಲೂಕು ದೊರೆಯು, ಕಾಣುವುದಲ್ಲ ನೋಡುವುದಲ್ಲ ಎಂದು ಯೋಚಿಸಿ 'ವಿಪರೀತ ಹೊಟ್ಟೆಯ ನೋವು, ಸ್ವಾಮಿ ' ಎಂದನು. ಸಾಹೇಬರು ' ಅಯ್ಯೋ ಪಾಪ ! ಹೊಸಕ್ಕಿಯ ದೋಷವಿರಬಹುದು. ಈಗ ಇನ್ನೂ ಹೊಸಕ್ಕಿ ಬಂದಿಲ್ಲ ವಲ್ಲಾ! ಎಲ್ಲಿ, ನಾಲಗೆ ತೋರಿಸಿ.' ಎಂದರು. ನಾಲಗೆ ಸ್ವಚ್ಛವಾಗಿತ್ತು. ಹೊಟ್ಟೆಯನ್ನು ಎಲ್ಲಾ ಕಡೆಯೂ ಅಮುಕಿ ನೋಡಿದರು. ಎಲ್ಲೂ ಏನೂ ರೋಗದ ಲಕ್ಷಣಗಳು ಕಾಣಲಿಲ್ಲ.

' ಯಾಕೆ, ಆಸ್ಪತ್ರೆಗೆ ಹೇಳಿ ಕಳುಹಿಸಿ ಔಷಧಿ ತರಿಸಲಿಲ್ಲವೇ ? '

' ನಮ್ಮದು ಹಳೆಯಕಾಲದ ವೈದಿಕ ಸಂಪ್ರದಾಯ, ಸ್ವಾಮಿ; ನಾನು ಆಸ್ಪತ್ರೆಯ ಔಷಧಿ ಕುಡಿಯುವುದಿಲ್ಲ. ಅನಾವಶ್ಯಕವಾಗಿ ಔಷಧಿ ಯನ್ನು ಹೊಟ್ಟೆಗೆ ತುಂಬಿಕೊಳ್ಳಬಾರದೆಂದೂ ಡಾಕ್ಟರುಗಳು ಹೇಳು ತ್ತಾರೆ. ಒಂದು ದಿವಸ ಉಪವಾಸಮಾಡಿಬಿಟ್ಟರೆ ಎಲ್ಲಾ ಸರಿಹೋಗು ತ್ತದೆ.'

' ನೀವು ತಿಳಿದುಕೊಂಡಿರುವುದು ತಪ್ಪು. ಆಗಾಗ್ಗೆ ಹೀಗೆ ನಿಮಗೆ ಹೊಟ್ಟೆಯ ನೋವು ಬರುವುದೆಂದು ಕಾಣುತ್ತದೆ. ಅದಕ್ಕೆ ಒಳಗು

ಚೊಕ್ಕಟವಾಗಬೇಕು. ಹೊಟ್ಟೆಯ ಒಳಗೆ ಇರತಕ್ಕ ಕಲ್ಮಷ ಹೋದರೆ ಎಲ್ಲಾ ಸರಿಹೋಗುತ್ತದೆ.'

'ಹೌದು, ಹೌದು.'

'ನಿಮ್ಮಲ್ಲಿ ಒಳ್ಳೆಯ ಹರಳೆಣ್ಣೆ ಇದೆಯೇ?'

'ಅದಕ್ಕೇನು ಸ್ವಾಮೀ ದರಿದ್ರ! ಬೇಕಾದಷ್ಟು ಇದೆ. ಮನೆಯಲ್ಲೇ ಕಣ್ಣೆದುರಿಗೆ ಹುರಿದು ಅಟ್ಟು ಮಾಡಿಸಿದ ಎಣ್ಣೆ.'

'ಹಾಗಾದರೆ ಸ್ವಲ್ಪ ತರಿಸಿ.'

'ಯಾರೋ ಅಲ್ಲಿ! ಸ್ವಲ್ಪ ಹರಳೆಣ್ಣೆ ತಂದು ಕೊಡೋ.'

ಇಷ್ಟುಹೊತ್ತಿಗಾಗಲೇ ಯಾರೋ ಸಾಹೇಬರು ಬಂದಿದ್ದಾರೆಂದು ಮನೆಯ ಒಳಗೂ ಹೊರಗೂ ಜನಸಂದಣಿ ಸೇರಿಹೋಗಿತ್ತು. ಕೂಡಲೇ ಒಬ್ಬರು ಹೋಗಿ ಎಣ್ಣೆಯ ತಪ್ಪಲೆಯನ್ನೇ ತಂದಿಟ್ಟರು.

'ಒಂದು ಸಣ್ಣ ಲೋಟವನ್ನು ತನ್ನಿ' ಎಂದರು ಸಾಹೇಬರು.

'ಇಷ್ಟು ಗೊತ್ತಾಗಲಿಲ್ಲವೇನ್ರೋ ಕತ್ತೆಗಳ! ಹೊಟ್ಟೆಯ ನೋವಿಗೆ ಹೊಕ್ಕಳಿಗೆ ಹಚ್ಚಿಸಿಕೊಳ್ಳುವುದಕ್ಕೆ ಇಷ್ಟು ಏತಕ್ರೊ?' ಎಂದು ಗದರಿಸಿ ಅಮಲ್‌ದಾರರು ಒಂದು ಸಲ ನರಳಿದರು.

ಲೋಟ ಬಂತು. ಸಾಹೇಬರು, 'ನಿಮಗೆ ಬೇಗ ಪ್ರವೃತ್ತಿ ಆಗುತ್ತದೆಯೋ?' ಎಂದು ಕೇಳಿದರು.

'ಇಲ್ಲ.'

'ಸರಿ, ಹಾಗಾದರೆ' ಎಂದು ಸಾಹೇಬರು ಅರ್ಧಲೋಟ ಎಣ್ಣೆಯನ್ನು ಬಗ್ಗಿಸಿ 'ಎಲ್ಲಿ, ಆ ಎನ್ನಿ!' ಎಂದು ಥಟಕ್ಕನೆ ಮೂಗನ್ನು ಹಿಡಿದು ಬಾಯಿಯ ಹತ್ತಿರ ತಂದರು. ಹಿಂದು ಮುಂದು ನೋಡುವುದಕ್ಕೆ ಅವಕಾಶವಿರಲಿಲ್ಲ. ಎಷ್ಟು ಅಸಹ್ಯವಾದರೂ ಕುಡಿದೇ ಕುಡಿಯಬೇಕಾಯಿತು.

ಇನ್ನೊಂದು ಸಾರಿ ಬಗ್ಗಿಸಿದರು. ಅದನ್ನೂ ತುಟಿಯ ಹತ್ತಿರಕ್ಕೆ ಹಿಡಿದು 'ಇದನ್ನೂ ಕುಡಿಯ ಬೇಕು' ಎಂದರು.

'ಇಲ್ಲ. ಸಾಕು, ಸಾಕು.'

'ನೀವು ಆಗಲೇ ಹೇಳಿದಿರಿ, ನಿಮ್ಮ ಹೊಟ್ಟೆ ಗಡುಸೆಂದು!

ಇನ್ನಷ್ಟು ಕುಡಿಯದಿದ್ದರೆ, ಎಣ್ಣೆ ಹೊಟ್ಟೆಯಲ್ಲಿ ನಿಂತು, ವಿರೋಧವಾದೀತು ಕುಡಿಯಿರಿ, ಕುಡಿಯಿರಿ' ಎಂದು ಅದನ್ನೂ ಕುಡಿಸಿದರು.

ಇಷ್ಟೆಲ್ಲಾ, ಹೆಚ್ಚೆಂದರೆ ಹತ್ತು ನಿಮಿಷಗಳಲ್ಲಿ ನಡೆದು ಹೋಗಿರಬಹುದು ಇದಾದ ಕೂಡಲೆ ಸಾಹೇಬರು 'ಥ್ಯಾಂಕ್ಸ್' ಹೇಳಿ ಸರ್ಕಾರಿ ಬಂಗಲೆಗೆ ಹೊರಟು ಹೋದರು.

ಅವರು ವರ್ತಮಾನ ಕೊಡದೆ ಅಕಸ್ಮಾತ್ತಾಗಿ ಬಂದಿದ್ದರು. ಹಿಂದೆ, ಅದರಲ್ಲಿಯೂ ಗ್ರಾಮಾಂತರಗಳಿಗೆ, ಅಕಸ್ಮಾತ್ ಭೇಟಿ ಕೊಡುವುದು ಕಷ್ಟವಾಗಿತ್ತು. ಆದ್ದರಿಂದ ಕಛೇರಿಯ ಅಧಿಕಾರಿಗಳು ಮನಸ್ವಿ ಆಟ ಆಡುವುದಕ್ಕೆ ಅವಕಾಶವಾಗಿತ್ತು ಈ ತಾಲ್ಲೂಕಿನಿಂದ ಎಷ್ಟೋ ಕಾಗದ ಪತ್ರಗಳಿಗೆ ಉತ್ತರ ಬರದೆ ನಿಂತಿತ್ತು. ಈ ಡೆಪ್ಯುಟಿ ಕಮೀಷನರು ಬಂದಮೇಲಂತೂ ಒಂದು ಕಾಗದಕ್ಕೂ ಉತ್ತರವಿರಲಿಲ್ಲ. ಇದರ ಗುಟ್ಟನ್ನು ತಿಳಿದುಕೊಳ್ಳೋಣವೆಂದು ಹೀಗೆ ಅವರು ಬಂದಿದ್ದರು. ಸಾಯಂಕಾಲದ ಹೊತ್ತಿಗೆ ಊರಲ್ಲೆಲ್ಲಾ ಅವರು ಡೆಪ್ಯುಟಿಕಮೀಷನರು ಎಂದು ತಿಳಿದು, ಬೇಕಾದ ಸರಬರಾಯಿ ಆಯಿತು. ಏನು ತಿಂದರೋ ಬಿಟ್ಟರೋ ಅದೊಂದನ್ನೂ ಅವರು ಉಪಯೋಗಿಸಿಕೊಳ್ಳಲಿಲ್ಲ. ಯಾರಿಗೋ ಹೇಳಿ ಕುದುರೆಯ ಯೋಗಕ್ಷೇಮವನ್ನು ಮಾತ್ರ ನೋಡಿಕೊಂಡಾಯಿತು. ಬೆಳಗ್ಗೆ ಎದ್ದು ನೋಡಲು ಸಾಹೇಬರು ಬಂಗಲಿಯಲ್ಲಿರಲಿಲ್ಲ. ಕುದುರೆಯನ್ನು ಹತ್ತಿಕೊಂಡು ಎಲ್ಲಿಗೋ ಹೊರಟು ಹೋಗಿದ್ದರು. ಮತ್ತೆ ಬರುವುದಿಲ್ಲವೆಂದು ಎಲ್ಲರೂ ತಿಳಿದುಕೊಂಡು ಊರು ತುಂಬ ಒಂದಕ್ಕೆ ಎರಡಾಗಿ ಮಾತನಾಡಿಕೊಳ್ಳುತ್ತಾ ಇದ್ದರು. ಆದರೆ ಮಧ್ಯಾಹ್ನದ ಹೊತ್ತಿಗೆ ಮತ್ತೆ ಸಾಹೇಬರು ಅಮಲ್‌ದಾರರ ಮನೆಯಲ್ಲಿ ಸಿದ್ಧ. ಅಮಲ್‌ದಾರರು ರಾತ್ರಿಯೆಲ್ಲಾ ಎದ್ದು ಎದ್ದು ಸಿದ್ದೆ ಇಲ್ಲದೆ ಸುಸ್ತಾಗಿ, ನಿಜವಾಗಿಯೂ ಕೈಲಾಗದೆ ಮಲಗಿದ್ದರು.

'ಏನು ಅಮಲ್‌ದಾರರೇ, ಇವೊತ್ತು ಹೇಗಿದೆ?'

'ಇವೊತ್ತು ಬಹಳ ಮಟ್ಟಿಗೆ ವಾಸಿ, ಸ್ವಾಮಿ.'

'ಹಾಗಾದರೆ ಇವೊತ್ತು ಒಂದು ಗುಟುಕು ನೆನ್ನೆ ಕುಡಿದ ಔಷಧಿಯನ್ನೇ ಕುಡಿದು ಬಿಡಿ' ಎಂದು ಇನ್ನೂ ಅಲ್ಲಿಯೇ ಇದ್ದ ಎಣ್ಣೆಯ

ತಪ್ಪಲೆಗೆ ಕೈಹಾಕಿದರು. ಅಮಲ್‍ದಾರರು ಥಟ್ಟನೆ ಎದ್ದು ಕುಳಿತು, 'ತಾವು ಅಷ್ಟು ತೊಂದರೆ ತೆಗೆದುಕೊಳ್ಳಬೇಡಿ, ಸ್ವಾಮಿ, ಅದರ ಗುಣವನ್ನು ನಾನು ಆಗಲೇ ಕಂಡಿದ್ದೇನೆ. ನಾನೇ ತೆಗೆದುಕೊಳ್ಳುತ್ತೇನೆ' ಎಂದು ಅವರ ಕೈಯನ್ನು ಹಿಡಿದುಕೊಂಡರು. ಅವರು 'ಹಾಗಾದರೆ ಸರಿ, ತೆಗೆದುಕೊಳ್ಳಿ! ನೀವು ತೆಗೆದುಕೊಳ್ಳುತ್ತೀರೆಂದು ನನಗೆ ಭರವಸೆ ಇದೆ. ಗುಣ ಕಂಡ ಔಷಧಿಯನ್ನು ಯಾರು ಬಿಡುತ್ತಾರೆ? ಅದಿರಲಿ, ಹೇಗಿದ್ದರೂ ಬಂದಿದ್ದೇನೆ. ನಾಳೆ ತಮಗೆ ಗುಣಮುಖವಾದರೆ ಕಛೇರಿಯ ಕಡೆ ಬನ್ನಿ; ನಾನೂ ಸ್ವಲ್ಪ ನೋಡಿಕೊಂಡು ಹೋಗುತ್ತೇನೆ. ನಾನು ಇಲ್ಲಿಗೆ ಬಂದಿದ್ದಕ್ಕೆ ಏನೂ ಗುರುತು ಬೇಡವೆ? ನಮಸ್ಕಾರ' ಎಂದು ಹೊರಟುಹೋದರು.

ಇಷ್ಟು ಹೊತ್ತಿಗೆ ಅಮಲ್‍ದಾರರಿಗೆ ಕಕಮಕ ಹಿಡಿದಿತ್ತು. ಮರುದಿನ ಕಛೇರಿಗೆ ತಪ್ಪಿಸಿಕೊಳ್ಳುವುದಕ್ಕೆ ಏನು ನೆವ ಹೇಳಬೇಕೋ ತೋರದು. ಏಳಲಾರದ ಖಾಯಿಲೆ ಎಂದು ಹೇಳಿ ಊರು ಬಿಟ್ಟು ಹೋಗುವುದು ಒಪ್ಪುವಂತಿರಲಿಲ್ಲ. ಸಾಹೇಬನು ತನಗಿಂತಲೂ ಕದೀಮನಾಗಿ ಕಂಡನು. ಎಲ್ಲಿ ಯಾರನ್ನು ತನ್ನ ಮೇಲೆ ಕಾವಲು ಹಾಕಿದ್ದಾನೋ ಎಂಬ ಶಂಕೆ ಉಂಟಾಯಿತು. ಹೊಟ್ಟೆಯ ನೋವನ್ನು ಮತ್ತೆ ಹೇಳಿದರೆ ಹರಳೆಣ್ಣೆ ತಪ್ಪುವ ಹಾಗಿಲ್ಲ. ಅವನು ಎದುರಿಗೇ ನಿಂತು ಒಂದಕ್ಕೆ ಎರಡರಷ್ಟು ಕುಡಿಸಿಬಿಡುತ್ತಾನೆ. ಇನ್ನೇನಾದರೂ ಖಾಯಿಲೆಯನ್ನು ಹೇಳಿದರೆ ಬೇವಿನ ಎಣ್ಣೆ ಕುಡಿಯಬೇಕೋ ಹೊಂಗೆ ಎಣ್ಣೆ ಕುಡಿಯಬೇಕೋ! ಒಳ್ಳೇ ಗ್ರಹಚಾರ ಬಂತು. ಕತ್ತರಿಯ ಗೋಟನ್ನು ಕತ್ತರಿಸುವುದಕ್ಕೆ ಹೋಗಿ ತಾನೇ ಅದರಲ್ಲಿ ಸಿಕ್ಕಿಕೊಂಡಿತು. ಕಛೇರಿಗೆ ಹೋಗೋಣವೆಂದರೆ, ಅಲ್ಲಿ ಯಾವ ಯಾವ ಕಾಗದದ ಮೇಲೆ, ಎಷ್ಟು ಎಷ್ಟು ತಿಂಗಳಿಂದ, ಎಷ್ಟು ಎಷ್ಟು ಎತ್ತರ ದೂಳು ಕೂತಿತ್ತೋ ಗೊತ್ತಿಲ್ಲ. ಆದ್ದರಿಂದ ಅರ್ಧರಾತ್ರಿಯವರೆಗೂ ಯೋಚನೆಮಾಡಿ ಕಛೇರಿಯವರಿಗೆಲ್ಲಾ ಹೇಳಿ ಕಳುಹಿಸಿ, ಮೊದಲು ಸಾಹೇಬನ ಬಂಗಲಿಗೆ ತನಗೆ ಬೇಕಾದ ನಾಲ್ಕೈದು ಜನರನ್ನು ಅವನಿಗೆ ಆಜೂಜುವಾರಿ ಮಾಡುವವರಂತೆ ಇರಲು ಕಟ್ಟುಮಾಡಿ, ಕಛೇರಿಯವರ ಕಡೆ ತಿರುಗಿ

‘ ಡೆಪ್ಯುಟಿಕಮಿಷನರ್ ಸಾಹೇಬರು ನಾಳೆ ಕಛೇರಿಯನ್ನು ನೋಡು ವುದಕ್ಕೆ ಬರುತ್ತಾರಂತೆ. ಅದನ್ನು ನಾನು ನಾಡಿದ್ದಿಗೆ ಹಾಕಿಸುತ್ತೇನೆ. ಅಷ್ಟರೊಳಗೆ ನೀವು ನಿಮ್ಮ ಕೆಲಸವನ್ನೆಲ್ಲಾ ಬಾಕಿ ಇಲ್ಲದಂತೆ ಮುಗಿಸಿ ಕೊಳ್ಳಬೇಕು’ ಎಂದು ಅಪ್ಪಣೆ ಮಾಡಿದರು.

ಅವರು, ‘ ಅದು ಹೇಗೆ ಸಾಧ್ಯ, ಸ್ವಾಮಿ? ಸುಮಾರು ಐನೂರರ ಮೇಲೆ ಹಳೆಯ ಕಾಗದಗಳೇ ಬಿದ್ದಿವೆ. ಮಿಕ್ಕಾದ ಕೆಲಸಗಳು ಎಷ್ಟೋ ಇವೆ! ’ ಎಂದು ದಿಗ್ಭ್ರಮೆ ಹಿಡಿದಂತೆ ಉತ್ತರ ಕೊಟ್ಟರು.

ಅಮಲ್‍ದಾರರು ಮಾತ್ರ ಸ್ವಲ್ಪವೂ ಕದಲದೆ ‘ ನೀವು ಇಂಥಿಂಥ ಘಟಾನುಘಟಿಗಳು, ಇಷ್ಟಕ್ಕೆಲ್ಲಾ ಹೆದರಿಕೊಳ್ಳುವುದೇ? ಬಂದಿರುವ ವನು ಡೆಪ್ಯುಟಿ ಕಮಿಷನರು, ಹೊಸಬ; ಒಬ್ಬ; ಇಲ್ಲಿ ಇನ್ನು ಹೆಚ್ಚು ದಿನ ಉಳಿಯುವಹಾಗಿಲ್ಲ. ಏನು ನೋಡಬೇಕೋ ಅವನಿಗೆ ವಿವರ ವಾಗಿ ತಿಳಿಯದು. ಬಂದವನು—ಬಂದೇ ಬರುತ್ತಾನೆ—ಒಂದು ‘ ಇಂದಾ ’—‘ ಗೆ ’ ರಿಜಿಸ್ಟರು ನೋಡಿಯಾನು! ಅದರಲ್ಲಿ ಕಾಗದ ಪತ್ರಗಳು ತಹಲ್‍ವರೆಗೆ ಇದ್ದರಾಯಿತು; ಅವುಗಳಲ್ಲಿ ಅಲ್ಲೊಂದು ಇಲ್ಲೊಂದು ದಾಖಲೆಗಳನ್ನು ನಮೂದು ಮಾಡಿದ್ದರಾಯಿತು. ಹೋಗಿ!’ ಎಂದು ಕಳುಹಿಸಿದರು.

ಮರುದಿನ ಹನ್ನೊಂದು ಘಂಟೆಯ ಹೊತ್ತಿಗೆ ಸಾಹೇಬನು ಕಛೇರಿ ಯಲ್ಲಿ ಹಾಜರು. ಕಛೇರಿಯು ಇರುವೆ ಗೂಡಿನಂತೆ ಕೆಲಸ ಮಾಡುತ್ತ ಇತ್ತು.

ಸಾಹೇಬರು, ‘ ಎಲ್ಲಿ ಅಮಲ್‍ದಾರರು? ’ ಎಂದು ಕೇಳಿದರು. ಇದನ್ನೇ ಎದುರು ನೋಡುತ್ತಿದ್ದ ಶಿರಸ್ತೆದಾರರು ಓಡಿಬಂದು, ‘ ಅಮಲ್ ದಾರರು ಇನ್ನೂ ಮನೆಯಲ್ಲಿ ಇದ್ದಾರೆ, ಮಹಾಸ್ವಾಮಿ. ನಿನ್ನೆಗೆ ಇವ ತ್ತಿಗೆ ಬಹಳ ಸುಸ್ತಾಗಿದ್ದಾರೆ ’ ಎಂದರು.

ಸಾಹೇಬನು ಮರುಮಾತಾಡದೆ, ಮುಖ ಗಂಟುಹಾಕಿಕೊಳ್ಳದೆ, ಕುದುರೆಯನ್ನು ಹತ್ತಿಕೊಂಡು, ಅಮಲ್‍ದಾರರ ಮನೆಗೆ ಹೋಗಿ ನುಗ್ಗಿ ದನು. ಅಮಲ್‍ದಾರರು ಹಿಂದಿನ ದಿನಕ್ಕಿಂತ ಹೆಚ್ಚು ದುರ್ಬಲವಾಗಿ ದ್ದದ್ದೇನೋ ನಿಜ. ಅದು, ಅವರು ಎರಡನೆಯ ದಿನವೂ ಎಣ್ಣೆ ಕುಡಿದಿ

ದ್ದದ್ದರಿಂದ ಅಲ್ಲ. ಹೆಚ್ಚು ಆಯಾಸ ಕಾಣಲು, ರಾತ್ರಿ ಬೇಕೆಂದು ಉಪವಾಸ ಮಾಡಿದ್ದದ್ದರಿಂದ.

'ಏನು, ಅಮಲ್‌ದಾರರೇ, ಹೇಗಿದ್ದೀರಿ? ಕಛೇರಿಗೆ ಬರುವುದಿಲ್ಲವೇ?'

ಅವರು ಕುಗ್ಗಿದ ಧ್ವನಿಯಿಂದ, 'ಹೇಗೆ ಬರಲಿ, ಮಹಾಸ್ವಾಮಿ? ಇವೊತ್ತೂ ಎಣ್ಣೆ ಕುಡಿದೆ. ಒಂದು ದಿನ ಅವಕಾಶಕೊಟ್ಟರೆ ನಾಳೆಯ ದಿವಸ ತಮ್ಮ ಸೇವೆಗೆ ಸಿದ್ಧವಾಗಿದ್ದೇನೆ. ತಮಗೆ ಇನ್ನೊಂದು ದಿವಸ ಇರುವುದಕ್ಕೆ ಅನುಕೂಲ ಹೇಗೋ!' ಎಂದರು. ಕಛೇರಿಗೆ ಬರದೆ ಅಂದೇ ತೊಲಗಿ ಹೋದರೆ ಹೋಗಲಿ ಎಂಬುದು ಅವರ ಆಸೆ.

ಸಾಹೇಬರು ಸ್ವಲ್ಪ ಯೋಚಿಸಿದವರಂತೆ ನಟಿಸಿ 'ಇವೊತ್ತು ಏನೂ ಹೊಟ್ಟೆ ನೋವು ಇಲ್ಲ ತಾನೇ?'

'ಇಲ್ಲ, ಮಹಾಸ್ವಾಮಿ!'

'ಹಾಗಾದರೆ ಸರಿ! ಮತ್ತೇನೂ ಎಣ್ಣೆ ಕುಡಿಯಬೇಕಾಗಿಲ್ಲ' ಎಂದು ಎಣ್ಣೆಯ ತಪ್ಪಲೆ ಇದ್ದ ಕಡೆ ನೋಡಿ, 'ಅದನ್ನೂ ತೆಗೆಸಿಬಿಟ್ಟಿದ್ದೀರಲ್ಲಾ' ಎಂದರು. 'ಹೇಗಿದ್ದರೂ ಎರಡು ದಿವಸ ಇದ್ದವನು ಇದ್ದೆ. ಇನ್ನೊಂದು ದಿವಸ ಇದ್ದು ಕೆಲಸ ಮಾಡಿಕೊಂಡು ಹೋಗದಿದ್ದರೆ ಸರ್ಕಾರದವರು ಸುಮ್ಮನಿದ್ದಾರೇ? ಕಾಸು ದಕ್ಕಿಸಿಕೊಳ್ಳುವುದಕ್ಕಾಗುತ್ತದೆಯೇ? ನನ್ನ ಪಾಡು ಏನಾದರೂ ಆಗಲಿ, ಸದ್ಯಕ್ಕೆ ನೀವು ಔಷಧಿ ಪಥ್ಯ ಯಾವುದನ್ನೂ ಮಾಡಿಕೊಳ್ಳದೆ, ಪೂರ್ವಾಚಾರದ ಕಟ್ಟಿಗೆ ಸಿಕ್ಕಿ, ಅನ್ಯಾಯವಾಗಿ ನರಳುತ್ತಿದ್ದಿರಿ. ನಿಮ್ಮ ಮನೆಯ ಔಷಧಿಯನ್ನೇ ಕುಡಿದು ನಿಮಗೆ ಆರೋಗ್ಯವಾಯಿತಲ್ಲಾ, ಅಷ್ಟೇ ಸಂತೋಷ! ದೇವರು ದೊಡ್ಡವ. ಇಂಥ ಸಣ್ಣ ಉಪಶಮನವನ್ನು ನಿಮಗೆ ಯಾರೂ ಹೇಳದೆ ಹೋದರೇ? ಚಿಂತೆಯಿಲ್ಲ; ನಾಳೆ ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಸ್ವಲ್ಪ ಹೊತ್ತು ಕಛೇರಿಗೆ ಬಂದಿದ್ದರೆ ಸಾಕು; ನಾನೂ ಸ್ವಲ್ಪ ನೋಡಿದ ಶಾಸ್ತ್ರ ಮಾಡಿ ಹೊರಟು ಹೋಗುತ್ತೇನೆ. ನಾಳೆ ಸಾಯಂಕಾಲದ ಹೊತ್ತಿಗೆ ನಾನು ಖಂಡಿತ ಊರಿನಲ್ಲಿರಬೇಕು. ನಮಸ್ಕಾರ' ಎಂದು ಹೊರಟು ಹೋದರು.

ಅಮಲ್‌ದಾರರು ಸಾಹೇಬರ ಮಾತನ್ನು ನಂಬಿದರು. ಅದು ನಿಜವೆಂಬುದು ಅವರಿಗೆ ಗೊತ್ತಿತ್ತು. ಇಷ್ಟು ಹೊತ್ತಿಗೆ ಒಬ್ಬರನ್ನೊಬ್ಬರು ಸಂಪೂರ್ಣವಾಗಿ ತಿಳಿದುಕೊಂಡಿದ್ದರು.

ಮರುದಿನ ಅಮಲ್‌ದಾರರು ಯೋಚಿಸಿದ್ದಂತೆಯೇ ಸಾಹೇಬರು ಬಂದು ಮೊದಲು 'ಇಂದಾ' ರಿಜಿಸ್ಟರನ್ನು ಕೇಳಿದರು. ಅದರಲ್ಲಿ ಕೊನೆಗೆ ಹಾಕಿದ್ದ ತಾರೀಖುಗಳು ಎಷ್ಟೋ ತಿಂಗಳ ಹಿಂದಿನಿಂದ ಬಂದಿದ್ದರೂ, ಅವೆಲ್ಲವೂ ಆತುರದಿಂದ ಹೊಸದಾಗಿ ಬರೆದವು ಎಂದು ತಿಳಿದುಕೊಳ್ಳುವುದಕ್ಕೆ ಕಷ್ಟವಾಗಲಿಲ್ಲ. ಅವರು ತಮ್ಮ ಮೆಚ್ಚಿಗೆಯನ್ನು ತೋರ್ಪಡಿಸುವರಂತೆ ನಗುತ್ತಾ, 'ಪರವಾಯಿಲ್ಲ! ಅಮಲ್‌ದಾರರು ಆಗಾಗ್ಗೆ ಖಾಯಿಲೆ ಬೀಳುವಂತೆ ತೋರಿದರೂ ಕಛೇರಿಯ ನೌಕರರು ಪಾದರಸದಂತೆ ಕೆಲಸ ಮಾಡುವವರ ಹಾಗೆ ಕಾಣುತ್ತಾರೆ. ಆದರೆ, ಕೆಲಸವನ್ನು ಇನ್ನೂ ಸ್ವಲ್ಪ ನಿಧಾನವಾಗಿ ಮಾಡಿದರೆ ಹೆಚ್ಚು ಉತ್ತಮವಾಗುವಂತೆ ತೋರುತ್ತದೆ!' ಎಂದು ಹೇಳಿ ಅಮಲ್‌ದಾರರ ಕೈಯನ್ನು ಸಂತೋಷದಿಂದ ಕುಲುಕಿ, ನಗು ನಗುತ್ತಾ ಕುದುರೆಯನ್ನು ಹತ್ತಿದರು. ಅಮಲ್‌ದಾರರ ಮುಖದಲ್ಲಿಯೂ ನಗುವಿದ್ದರೂ, ಅದು ಎಣ್ಣೆ ಕುಡಿದ ಮುಖದ ನಗುವಾಗಿತ್ತು.

ಅಲ್ಲಿಂದಾಚೆಗೆ, ಒಬ್ಬರನ್ನೊಬ್ಬರು ದ್ವೇಷಿಸುವುದಕ್ಕೆ ಬದಲು, ಮೆಚ್ಚಿಕೊಳ್ಳುವುದಕ್ಕೆ ಮೊದಲು ಮಾಡಿದರು. ಡೆಪ್ಯುಟಿ ಕಮಿಷನರಿಗೆ ಬೇರೆ ಡಿಸ್ಟ್ರಿಕ್ಟಿಗೆ ವರ್ಗವಾಯಿತು. ರಿಟೈರಾಯಿತು. ಸೀಮೆಗೆ ಹೋದರು. ಆಗಲೂ ಕಾಗದಪತ್ರಗಳ ವ್ಯವಹಾರವು ಇವರಿಬ್ಬರಿಗೆ ನಡೆಯುತ್ತಿದ್ದಿತು. ವಿನೋದ, ಸರಸ, ಹಾಸ್ಯ. ಆದರೆ ಮೇಲಿನ ವೃತ್ತಾಂತವನ್ನು ಮಾತ್ರ ಇವರೂ ಪ್ರಸ್ತಾಪಿಸಲಿಲ್ಲ, ಅವರೂ ಪ್ರಸ್ತಾಪಿಸಲಿಲ್ಲ. ಅವರವರಿಗೆ ಮಾತ್ರ ಗುಟ್ಟು ಗೊತ್ತು. ಈ ದೇಶದಲ್ಲಿದ್ದಾಗ ಅಮಲ್‌ದಾರರನ್ನು ಕಂಡಾಗ ಡೆಪ್ಯುಟಿ ಕಮಿಷನರು 'ಏನು, ನುತ್ತೆ ಯಾವಾಗಲಾದರೂ ಹೊಟ್ಟೆ ನೋವು ಬಂದಿತ್ತೇ?' ಎಂದು ನಗುನಗುತ್ತಾ ಕೇಳುವರು. ಅವರೂ ನಗುನಗುತ್ತಲೆ, 'ಇಲ್ಲ, ಮಹಾಸ್ವಾಮಿ' ಎಂದು ಉತ್ತರ ಕೊಡುವರು. ಪ್ರತಿಯಾಗಿ ಅವರು 'ಹೊಟ್ಟೆಯ ನೋವಿಗೆ ಅದು

ಒಳ್ಳೆಯ ಔಷಧಿ, ನೋಡಿ! ಸುಮ್ಮನೆ ಹೊಟ್ಟೆಯ ತುಂಬ ಔಷಧಿ ತುಂಬಿಕೊಂಡು ಮೈ ಕೆಡಿಸಿಕೊಂಡರೆ ಏನು ಪ್ರಯೋಜನ? ಒಳಗಿನ ಕಲ್ಮಷ ಹೋಗಿ ಚೊಕ್ಕಟವಾಗಬೇಕು' ಎನ್ನುವರು. 'ಹೌದು' ಎಂದು ಉತ್ತರ ಬರುವುದು

ಇವರ ಆಟವನ್ನು ಅವರು ಮರೆಯಲಿಲ್ಲ, ಅವರ ಮಾಟವನ್ನು ಇವರು ಮರೆಯಲಿಲ್ಲ; ಮತ್ತೊಬ್ಬರ ಹತ್ತಿರ ಪ್ರಸ್ತಾಪಿಸಲಿಲ್ಲ—ಇವರಿಗೆ ಸಂಕೋಚ, ಅವರಿಗೆ ಮರ್ಯಾದೆ. ಆದರೂ ಅದು ಹೇಗೋ ಹೊರಗೆ ಜಿನುಗಿ, ಗತ್ತಾಗತ್ತಾ ಅವರಿಗೆ "ಹರಳೆಣ್ಣೆ ಅಮಲ್ದಾರ್ರು" ಎಂಬ ಅಡ್ಡಹೆಸರು ಬಂದುಬಿಟ್ಟಿತಂತೆ.

೧೯೪೧ ಕಮಲ

---

# ಅತ್ತೆ

"ಆತ್ಮಕಾಮಾ ಸದಾ ಚಂಡೀ ಕ್ರೋಧನಾ ಪ್ರಾಜ್ಞಮಾನಿನೀ"—
ರಾಮಾಯಣ.

ಅತ್ತೆಯೆಂದರೆ ಹೆಂಡತಿಯ ತಾಯಿ, ಅಥವಾ ಗಂಡನ ತಾಯಿಯೇ ಅಲ್ಲ. ತಂದೆಯ ತಂಗಿ, ಅಥವಾ ಸೋದರಮಾವನ ಹೆಂಡತಿಯೂ ಆಗಬೇಕಾಗಿಲ್ಲ. ಮುದುಕಿ, ಮಡಿಹೆಂಗಸು, ಆಗಿರಬೇಕೆಂಬ ನಿರ್ಬಂಧ ವಿಲ್ಲ. ಕೊನೆಗೆ ಹೆಂಗಸೂ ಆಗಬೇಕಾಗಿಲ್ಲ. ಅದೊಂದು ಮನುಷ್ಯ ವ್ಯಕ್ತಿಯೇ ಅಲ್ಲ, ಮನಸ್ಸಿನ ವೃತ್ತಿ ಎಂದರೂ ಎನ್ನಬಹುದು. ನಮಗೆ ಪರಿಚಿತರೊಬ್ಬರು, ಗಣ್ಯರಾದ ವ್ಯಕ್ತಿಗಳು–ಸರಕಾರದ ದೊಡ್ಡ ಉದ್ಯೋಗ ಸ್ಥರು–ವಿದ್ಯಾವಂತರು—ಷರಾಯಿ ಬೂಟ್ಸು ಧರಿಸುವ ಆಧುನಿಕ ದೊಡ್ಡ ಮನುಷ್ಯರು—ಎರಡು ಸಾರಿ ಸೀಮೆಗೆ ಹೋಗಿಬಂದವರು–ಗಂಡಸರು— ಇದ್ದಾರೆ; ಅವರನ್ನು ನಮ್ಮ ಗೋಷ್ಠಿಯಲ್ಲಿ 'ಅತ್ತೆ' ಎಂದೇ ಕರೆಯು ತ್ತೇವೆ—ಅಲ್ಲ, ಹೇಳಿಕೊಳ್ಳುತ್ತೇವೆ. ಏಕೆಂದರೆ ಎದುರೆದುರಿಗೆ ಅವರನ್ನು ಹಾಗೆಂದು ಕರೆಯಲು ನಮಗೆ ಯಾರಿಗೂ ಧೈರ್ಯವಿಲ್ಲ. ಕಛೇರಿ ಯಲ್ಲಿ ಸಾಮಾನ್ಯವಾಗಿ ಅಧಿಕಾರಿಗಳು ಅತ್ತೆ, ಗುಮಾಸ್ತರು ಸೊಸೆ. ಆಫೀಸರು ಅಪ್ರಯೋಜಕನಾಗಿದ್ದರೆ ಗುಮಾಸ್ತರೇ ಅತ್ತೆ. ಮನೆಯಲ್ಲಿ, ಸೊಸೆ ಮೆತ್ತಗಿದ್ದರೆ ಅತ್ತೆ ಅತ್ತೆಯಾಗಿರುವುದಿರಲಿ, ಅತ್ತಿಗೆ ನಾದಿನಿಯರು ಮುಂತಾಗಿ ಮನೆ ಮಂದಿಯೆಲ್ಲಾ, ಹುಡುಗರು ಮಕ್ಕಳು ಸಹ, ಅತ್ತೆ ಯರೇ! ಸೊಸೆ ಗಟ್ಟಿಗಿತ್ತಿಯಾದರೆ ಅವಳೇ ಅತ್ತೆ; ಅತ್ತೆ, ಮಾವ, ಅತ್ತಿಗೆ, ನಾದಿನಿ, ಗಂಡ, ಮಕ್ಕಳು ಎಲ್ಲಾ ಸೊಸೆ.

ಅತ್ತೆಯ ಮುಖ್ಯಲಕ್ಷಣ ದರ್ಪ; ಆಳಬೇಕು, ಅನ್ನಬೇಕು, ಅಂದು ಆಳಬೇಕು, ಆಳಿ ಅನ್ನಬೇಕು, ಅಂದು ಆಳಿ ದಂಡಿಸಬೇಕು, ಎಂಬುದೇ ಪ್ರಧಾನವಾದ ಮನೋವೃತ್ತಿ. ಅತ್ತೆಯಾಗಿ, ತನ್ನ ಹಿರಿಯ ತನವನ್ನು ಸ್ಥಾಪಿಸದಿದ್ದರೆ ಏನು ಪ್ರಯೋಜನ? ಅದರ ಪರಿಣಾಮ ಏನೇ ಆಗಲಿ, ಯಾರಿಗಾದರೂ ಮೂಗು ಹೋಗಲಿ, ಯಾರಿಗಾದರೂ ಕಿವಿ ಹರಿಯಲಿ, ಯಾರಾದರೂ ಮುನಿಸಿಕೊಳ್ಳಲಿ, ಯಾರಾದರೂ ಉಪವಾಸ ಮಾಡಲಿ, ತನ್ನ ಮಾತನ್ನು ತಾನು ನಡೆಸದಿದ್ದರೆ ಅದೆಂಥ ಅತ್ತೆಗಿರಿ?

ಮುಂದೆ ಬಂದರೆ ಹಾಯಬೇಕು, ಹಿಂದೆ ಬಂದರೆ ಒದೆಯಬೇಕು, ಅತ್ತ ಲಾಗಿ ಬಿಡಕೂಡದು, ಇತ್ತಲಾಗಿ ಬಿಡಕೂಡದು, ಹೀಗೆ ಕಾಡಿಸದಿದ್ದರೆ ತನ್ನ ದೊಡ್ಡಸ್ತಿಕೆ ಏನು ಉಳಿಯಿತು? ದಿನಕ್ಕೊಂದು ಸಲವಾಗಲಿ, ಯಾರೊಡನೆಯಾದರೂ–ಕೊನೆಗೆ ಬೀದಿ ಬಸವನೊಡನೆ, ಕಾಗೆ ಗುಬ್ಬಿಗ ಳೊಡನೆ, ಇರುವೆಗೊದ್ದಗಳೊಡನೆ,–ಕಲಕಲನೆ ಜಗಳವಾಡದಿದ್ದರೆ ತಿಂದ ಅನ್ನ ಹೇಗೆ ಮೈ ಹತ್ತಬೇಕು? ತಾಯಿ, ತಂದೆ, ಅಕ್ಕ, ತಂಗಿ, ಅಣ್ಣ, ತಮ್ಮ, ಗಂಡ, ಮಕ್ಕಳು, ಮೊಮ್ಮಕ್ಕಳು ಯಾರೊಡನೆಯಾದರೂ ಕಾದಿ ಗೆಲ್ಲದಿದ್ದರೆ, ಪಿತ್ತದ ನೀರು ಉಕ್ಕಿ ಸುರಿದು ಶಾಂತಿಯಾಗದೆ ಹೋದರೆ, ಸಂಕಟ. ಅದಕ್ಕೆ ದಿನದಲ್ಲಿ ಯಾರು ಮುಂಚೆ ಬಲಿ ಯಾಗುತ್ತಾರೋ ಅವರೇ ಪ್ರಧಾನಪಶುಗಳು; ಅವರ ತ್ಯಾಗದಿಂದ ಮಿಕ್ಕವರಿಗೆ ಮುಕ್ತಿಯಾಗುವುದೂ ಉಂಟು. ಯಾರೂ ಬಲಿಯಾಗಿ ಸಿಕ್ಕದಿದ್ದರೆ, ದೀಕ್ಷಿತರು ಒಬ್ಬರೇ ಬಯಲಲ್ಲಿ ನಿಂತೋ ಒಂದು ಮೂಲೆ ಯಲ್ಲಿ ಕುಳಿತೋ, ಮುಸುಕು ಹಾಕಿಕೊಂಡು ಮಲಗಿಯೋ ಒದರಿ, ಗೊಣಗಿ, ಆತ್ಮಯಜ್ಞದಿಂದ ಎದೆಯನ್ನು ಹಗುರಮಾಡಿಕೊಳ್ಳಬೇಕು; ಅಂದಿನ ಹೊಸ ಅಸಮಾಧಾನವೇನೂ ಇಲ್ಲದಿದ್ದರೂ, ಹಳೆಯದನ್ನಾದರೂ ಕೆರೆದು ಗಾಯಮಾಡಿಕೊಂಡು ಕೂಗಾಡಬೇಕು, ತನ್ನ ಸಮಾನ ದುರ ದೃಷ್ಟಶಾಲಿಗಳೇ ಇಲ್ಲ ಎಂದು ಗೋಳಾಡಬೇಕು, ತನ್ನ ಕಷ್ಟವನ್ನು ಯಾರೂ ಗಮನಿಸಿ 'ಅಯ್ಯೋ!' ಎನ್ನುವುದಿಲ್ಲವಲ್ಲ ಎಂದು ಪ್ರಪಂಚ ವನ್ನೇ ದೂರಬೇಕು. ಕೊನೆಗೆ, ತಾನೇ ವಾಸಿ, ತನ್ನ ಸಮಾನ ಸಹನೆಯುವ ರಿಲ್ಲ, ಒಳ್ಳೆಯವರಿಲ್ಲ ಉದಾರಿಗಳಿಲ್ಲ, ಕಲ್ಯಾಣಗುಣಪರಿಪೂರ್ಣರಿಲ್ಲ ಎಂದು ಪ್ರಶಂಸೆಮಾಡಿಕೊಳ್ಳಬೇಕು. ಇವು 'ಅತ್ತೆ'ಯ ಕೆಲವು ಸ್ಥೂಲ ಲಕ್ಷಣಗಳು. ಈ ವಿಚಿತ್ರ ವಸ್ತು, ಬುನಾದಿಯಿಂದ ಎಲ್ಲ ದೇಶ ಕಾಲಗಳಲ್ಲಿಯೂ ಸಂಸಾರಕ್ಕೆ ಅಂಟಿಕೊಂಡು ಬಂದಿರುವ ಒಂದು ಬೇನೆ. ಸಾಕ್ರೆಟೀಸನ ಕಾಲದಿಂದ ಮೊದಲುಮಾಡಿಕೊಂಡು ಇಂದಿನವರೆಗೆ ಇದಕ್ಕೆ ಯಾರೂ ಮದ್ದನ್ನು ಕಂಡುಹಿಡಿದಿಲ್ಲ. ಇಂಥ ಒಂದು ಅತ್ತೆಯ ದಿನಚರಿಯಲ್ಲಿ ಬೆಳಗ್ಗೆ ಎಚ್ಚರವಾದಂದಿನಿಂದ ರಾತ್ರಿ ನಿದ್ರೆಹತ್ತುವವರೆಗೆ ಜರುಗಬಹುದಾದ ಸಂಗತಿಗಳಲ್ಲಿ ಕೆಲವನ್ನು ಮುಂದೆ ಮಾದರಿಗಾಗಿ ಸೂಚಿಸಿದೆ.

೧

"ಲೋ, ಕಾಫೀ ಕುಡಿದುಹೋಗೋ ಬಂದು! ಮಹಾ ಓದಿ ಪ್ಯಾಸು ಮಾಡೋನು! ಮೂರು ಹೊತ್ತೂ ಒಂದು ಪುಸ್ತಕ ಕೈಲಿ ಹಿಡಿದು ಕೊಂಡು, ಬಗ್ಗಿಸಿದ ಕತ್ತು ಎತ್ತದೆ ಬಿಳೀ ಕಾಗದದ ಮೇಲೆ ಕರೀಗೀಟು ಎಳೀತಾ ಇದ್ದುಬಿಟ್ಟರೆ ಆಗಿಹೋಯಿತು!"

"ನಾನು ನಿತ್ಯ ಅಲ್ಲಿಗೇ ಬಂದು ಕುಡೀತಿರಲಿಲ್ಲವೇನಮ್ಮ! ಆಗೋ ದಕ್ಕೆ ಮುಂಚೆ ಬಂದು ಕತ್ತಿನಮೇಲೆ ಕೂತುಕೊಂಡು ಪೀಡಿಸುತ್ತೀಯ ಲ್ಲಾಂದೆ! ಅದಕ್ಕೋಸ್ಕರ ಆಗಲಿ ಎಂತ ಕೂತುಕೊಂಡೆ."

"ಮತ್ತೆ, ಆಯಿತೇ ಆಯಿತೇ ಅಂತ ಬಂದು ನೇಣುಹಾಕಿಕೊಂಡರೆ ಏನು ಮಾಡೋದು?"

"ನಾನೆಲ್ಲಿ ಹಾಗೆಂದೆನಮ್ಮ? ಅವೊತ್ತು ಬೆಳಗ್ಗೆ ಕ್ಲಾಸು; ಹೊತ್ತಾಗಿ ಹೋಗಿತ್ತು; ಅದಕ್ಕೋಸ್ಕರ ಕೇಳಿದೆ.—ಕುಡೀದೆ ಹಾಗೇ ಹೋದರೆ ಅದಕ್ಕೂ ಬೈಯುತ್ತೀಯಲ್ಲಾ ಅಂತ."

"ಹೌದು, ನಾನು ಬಯ್ಯೋಳು; ನಾಳೆನಿಂದ ಬಯ್ಯದೆ ಯಾಗು ಮಾಡುತಾರೋ ಮಾಡಲಿ!"

"ಅಕ್ಕ ಮಾಡುತೀನಿ ಅಂತಾಳಲ್ಲಮ್ಮ! ಬಿಟ್ಟುಬಿಡು, ಮಾಡಲಿ"

"ಮಾಡಲಪ್ಪ, ಮಾಡಲಿ; ಮಹಾರಾಯತಿಯಾಗಿ ಮಾಡಲಿ; ಅವಳು ಮಾಡಿಮಾಡಿಯೇ ನೀನು ಇಷ್ಟು ದೊಡ್ಡೋನಾಗಿರೋದು. ಮಾಡಿ! ಮಾಡಿಸಿಕೊಳ್ಳಿ! ಯಾರು ಬೇಡ ಎಂದೋರು?"

"ಅವೊತ್ತು ಅವಳು ಮಾಡಿದ್ದು ಚೆನ್ನಾಗಿತ್ತಲ್ಲಮ್ಮ!"

"ಚೆನ್ನಾಗಿರದೇ ಏನುಮಾಡುತ್ತೆ? ಈ ತಗ್ಗಿನ ಧಾರಣೆಯಲ್ಲಿ ಹೊತ್ತಿಗೆ ಒಂದು ಸೇರು ಹಾಲು, ಒಂದು ಪೌಂಡು ಪುಡಿ ಹುಯ್ದರೆ! ನಾನು ಮಾಡುವುದು ಅಂದರೆ ನಿಮಗೆ ಯಾರಿಗೂ ಯಾವುದೂ ಒಪ್ಪಾ ಗುವುದಿಲ್ಲ. ನನ್ನ ಹಣೆಯ ಬರಹವೇ ಹೀಗಾಗಿ ಹೋಯಿತು; ದುಡಿ ಯೋದು ಅನ್ನಿಸಿಕೊಳ್ಳೋದು!"

"ಈಗ ನಿನ್ನ ಯಾರೇನೆಂದರಮ್ಮ? ನೀನೇ ನಿತ್ಯ ಕಾಫಿ ಮಾಡುತಾ ಇದ್ದೀಯಲ್ಲಮ್ಮ!"

"ಮತ್ತಿನ್ನೇನು ಮಾಡುವುದು? ತೀರಾಬಾರ ನಾನೂ ಮಾಡು ತೀನಿ ಮಾಡುತೀನಿ ಅಂತ ಬಂದು, ಒಂದು ದಿನ ಮಾಡಿದಳೋ ಇಲ್ಲವೋ ಅಲ್ಲಿಗೇ ನಿಂತುಹೋಯಿತು. ಮೈ ಬಗ್ಗಬೇಕೋ ಬೇಡವೋ!''

"ಅವಳು ಹಡಿ ಮೈಲಿಗೆ ಎಂದೆ; ಅದಕ್ಕೆ ಅವಳು ಬಿಟ್ಟಳು.''

"ಹೌದು ಹೌದು! ಅಂತು ಇಂತು ನನ್ನ ಮೇಲೇ ತಪ್ಪು!"

೨

"ಇದೇನು ಹೀಗೆ ಕಾಯಿಪಲ್ಯ ತಂದು ತಂದು ಎಳೆದರೆ? ಯಾರು ಇದನ್ನೆಲ್ಲಾ ಬೇಯಿಸೋರು?"

"ಇದೆಲ್ಲಾ ಒಂದೇ ದಿನಕ್ಕೇ? ನಾಳೆಗೆ, ನಾಡಿದ್ದಿಗೆ; ಮಿಕ್ಕರೆ ಇನ್ನೊಂದು ದಿನಕ್ಕೆ."

"ನಿತ್ಯ ನಿತ್ಯ ಎರಡೆರಡು, ಮೂರುಮೂರು, ಮಾಡುವುದಕ್ಕೆ ನಾನೊಬ್ಬಳು ಅಡಿಗೆ ಪರಿಚಾರಕಳು ಇದ್ದೀನಲ್ಲ!''

"ಹಾಗೆ ನೋಡೋದಕ್ಕೆ ಹೋದರೆ ಎಲ್ಲಾ ಪರಿಚಾರಕರೇಯೆ. ಯಾರಲ್ಲ!"

"ಅಯ್ಯೋ, ನೀವ್ಯಾಕೆ ಪರಿಚಾರಕರಾಗುತ್ತೀರಿ? ಬೀಯೆ ಎಮ್ಮೆ ಪ್ಯಾಸುಮಾಡಿದ್ದೀರಿ; ನೂರಾರು ರೂಪಾಯಿ ಸಂಬಳ ತರುತ್ತಿದ್ದೀರಿ!''

"ಬಿ.ಎ., ಎಂ.ಎ. ಪ್ಯಾಸುಮಾಡಿ ನೂರಾರು ರೂಪಾಯಿ ಸಂಬಳ ತರುವ ಪುಣ್ಯ ಪಡೆದುಕೊಂಡು ಬರಲಿಲ್ಲವಲ್ಲ! ಯಾರ್ಯಾರ ಪ್ರಾಪ್ತಿ ಎಷ್ಟೆಷ್ಟೋ ಅಷ್ಟಷ್ಟೇ!''

"ಆದರೂ ನಿಮ್ಮ ದೊಡ್ಡಸ್ತಿಕೆ ನಿಮ್ಮ ಧಾರಾಳ ಹೇಳುವಹಾಗಿಲ್ಲ!"

"ನನಗೇನು ತರ್ಕಾರಿಯಮೇಲೆ ಅಷ್ಟು ಇಷ್ಟವೇ ಇಲ್ಲ; ತರದೇ ಇದ್ದರೆ, 'ಬರೀ ಅನ್ನ ನೀರೂ ಅನ್ನ ನೀರೂ ಯಾರು ತಿಂದಾರು?' ಅಂತೀಯಲ್ಲ, ಅದಕ್ಕೆ ತರೋದು. ನಿನಗೆ ಕೈಲಾಗದಿದ್ದರೆ, ಇದೇ ಮಾಡ ಬೇಕು ಅದೇ ಮಾಡಬೇಕು ಎಂಬ ನಿರ್ಬಂಧವಿಲ್ಲ."

"ನಿಮ್ಮದು ಯಾವದೂ ನಿರ್ಬಂಧವಿಲ್ಲ. ಈ ಮನೆಯಲ್ಲಿ ತಿನ್ನೋಳು ನಾನೊಬ್ಬಳು ತಾನೇ ಹೊಟ್ಟೆಬಿರಿಯ! ಹಾಳು ಹೊಟ್ಟೆ ಒಂದು ಇದೆ ಯಲ್ಲ!''

"ನಾವೆಲ್ಲಾ ಉಪವಾಸ ಇರುತ್ತೇವೆಯೇ? ನಾವೂ ತಿನ್ನುವುದಿಲ್ಲವೇ?''

"ಉಪವಾಸವೊ ಒಪ್ಪತ್ತೊ! ಇರೋದು ಇಲ್ಲದ್ದು ನೋಡಿಕೊಂಡು, ಹೊತ್ತಿಗೆ ಗೊತ್ತಿಗೆ ಇಷ್ಟು ಬೇಯಿಸಿ ಹಾಕುತೀನಲ್ಲ, ನಂದೇ ತಪ್ಪು. ಅಲ್ಲವೇ ?''

೩

"ಏನೇ, ಆಗಲೇ ತಟ್ಟೆ ತಂದು ಹಾಕಿಕೊಂಡುಬಿಟ್ಟೆ ?''

''ಹನ್ನೊಂದೂವರೆ ಆಯಿತಲ್ಲಮ್ಮ!''

"ಆಗಲಿ, ಆದರೇನು ? ಇನ್ನೂ ಹಿಂದಿನ ಹತ್ತೂವರೆ.''

"ಹನ್ನೆರಡು ಘಂಟೆ ಸ್ಕೂಲಿಗೆ ಹೋಗಬೇಕಲ್ಲಮ್ಮ!"

"ಹೋಗು ; ಇನ್ನೂ ಅರ್ಧಘಂಟೆಯಿದೆಯಲ್ಲ! ಅನ್ನ ಕುದಿ ಹತ್ತುತಾ ಇದೆ ; ಈಗ ಆಗುತ್ತೆ.''

"ಇನ್ನೂ ಅನ್ನ ಆಗಿ, ಸಾರಾಗಿ, ನಾ ಊಟಮಾಡಿ, ಎಂದಿಗಮ್ಮ ಸ್ಕೂಲಿಗೆ ಹೋಗುವುದು ?''

"ಹಾಗಾದರೆ ಕುದಿಯುತ್ತಿರುವ ಅನ್ನವನ್ನು ಹಾಗೇ ತೋಡಲೇನೇ? ಮೊನ್ನೆಯೂ ಹೀಗೆಯೇ ಆತರಮಾಡಿದೆ. ಒಲೆ ಬೀಸಿ ಬೀಸಿ, ಊದಿ ಊದಿ, ಅನ್ನ ಮಾಡಿ ಹಾಕಿದೆ. ಇನ್ನೂ ರಟ್ಟೆ ಎರಡೂ ಸೇದುತ್ತಾ ಇದೆ—ಆದರೂ ಅನ್ನ ಆಗಿಲ್ಲ, ಅಕ್ಕಿ ಅಕ್ಕಿ, ಎಂತ ಎಲ್ಲಾ ಹಿಂಡಿಟ್ಟು ಹೋದೆ. ಯಾಕೋ ಸಾಕಾಗಿ ಹೋಗಿದೆಯಮ್ಮ ನಿಮ್ಮ ಓದು! ಬೆಳಗ್ಗೆ ಆರು ಘಂಟೆಗೆ ಎದ್ದರೆ ರಾತ್ರಿ ಹತ್ತು ಘಂಟೆಯಾದರೂ ನಿಮ್ಮ ಚಾಕರಿಯೇ ಆಗಿ ಹೋಗುತ್ತೆ."

" ಹೊತ್ತಾದರೆ ಕ್ಲಾಸಿಗೆ ಸೇರಿಸೋಲ್ಲಮ್ಮ; ಹೊರಗೆ ನಿಲ್ಲಿಸಿ ಬಿಡುತ್ತಾರೆ."

" ನಿಲ್ಲಿಸಿದರೆ ನಿಲ್ಲಿಸಲಿ; ಮನೆಗೆ ಬಂದುಬಿಡು; ನೀವೆಲ್ಲಾ ಓದಿ ಒದಿ ಪ್ಯಾಸುಮಾಡಿ ಏನು ಉದ್ಧಾರವಾಗಬೇಕೋ ಕಾಣೆ! ದೊಡ್ಡೋರಾಗುವ ತನಕ ಹೀಗೆ ನಿಮಗೆ ದೇಹ ತೆಯ್ಯೋದು; ನೀವು ಆಮೇಲೆ ಗಂಡನ ಹಿಂದೆ ಪುಸಕ್ಕನೆ ಓಡಿಹೋಗೋದು ; ಅಷ್ಟೇ ತಾನೇ ಉಡುಗೆರೆ

ನೀವು ಕೊಡೋದು? ನಾವೆಲ್ಲಾ ಪ್ರ್ಯಾಸೇ ಮಾಡಿದ್ದೇವೆಯೇ? ಸಂಸಾರ ಮಾಡುತ್ತಲೇ ಇಲ್ಲವೇ?"

"ಹಾಗಾದರೆ ನಾನು ಎರಡು ಘಂಟೆಗೆ ಬಂದು ಊಟ ಮಾಡು ತೇನಮ್ಮ."

"ಯಾಕೆ? ಬರೀಹೊಟ್ಟೇಲಿ ಉಪವಾಸ ಕಳುಹಿಸಿದಳು ಅಂತ ದೂರುವುದಕ್ಕೆ!"

"ನಾನು ಎಂದು ಯಾರ ಕೈಲಿ ದೂರಿದ್ದೇನಮ್ಮ?"

"ದೂರಲೇಬೇಕೇನು? ಅಂತೂ ನನ್ನದೇ ತಪ್ಪು! ಇಷ್ಟು ದುಡೀ ತೀನಲ್ಲಾ ಎಂತ ಯಾರಿಗಾದರೂ ಅಂತಃಕರಣವೇ, ವಿಶ್ವಾಸವೇ?"

೪

"ಇದೇನ್ರೇ ಇದು, ಮಕ್ಕಳನ್ನ ಹೀಗೆ ಬಿಟ್ಟುಬಿಟ್ಟರೆ? ನಾನು ಇವೊತ್ತು ಆಗಲೇ ಎರಡು ಸಲ ನೀರು ಹುಯಿದುಕೊಂಡೆನಲ್ರೇ! ಇನ್ನೆಷ್ಟುಸಲ ಹುಯಿದುಕೊಳ್ಳಲ್ರೇ? ಒದ್ದೆ ಉಟ್ಟು ಉಟ್ಟೇ ನನ್ನ ಮೈ ತುಂಬ ರೋಗ ತುಂಬಿಕೊಂಡಿತು."

"ಏನಾಯಿತು ಅತ್ತೇ?"

"ಏನಾಯಿತೇ? ನನ್ನ ತಲೆ! ಹೊಲೆಮಾದಿಗ ಮೈಲಿಗೆ!"

"ಯಾಕೆ? ಇಲ್ಲಿ ಯಾರು ಬಂದಿದ್ದರು?"

"ಯಾರೇ? ನಿನ್ನ ಮಕ್ಕಳು!"

"ಅವಕ್ಕೆ ಅಂಗಿ ಕೂಡ ಹಾಕಿಲ್ಲ, ಬರೀ ಮೈಯಲ್ಲಿ ಓಡಾಡು ತ್ತಿವೆ!"

"ಬಟ್ಟೆಗೆ ಗತಿಯಿದ್ದರೆ ತಾನೇ ಹಾಕೀರಿ, ಪಾಪ!"

"ನಿಮ್ಮನ್ನೆಲ್ಲಾದರೂ ಮುಟ್ಟಿಬಿಟ್ಟಾರಲ್ಲಾ ಅಂತ ಹಾಕಲಿಲ್ಲ. ಬಟ್ಟೆಗಳಿಗೇನು ಕಡಮೆ? ಮಹಾರಾಯರು ಹೊಲಿಸಿಕೊಟ್ಟಿದಾರೆ!"

"ನಿನಗೇನೂ ಕಡಮೆ ಇಲ್ಲಮ್ಮ; ನನಗೇ ಕೋರಿ ಉಟ್ಟು ಉಟ್ಟು ಸಾಯುವುದು ಹಣೆಯಲ್ಲಿ ಬರೆದಿದೆ, ಅಷ್ಟೆ."

"ನಿಮಗೆ ತಾನೇ ಏನು ಕಡಮೆ ಮಾಡಿದ್ದಾರೆ? ಗಳುವಿನ ಮೇಲೆ ದಿನಾ ಮೂರು ನಾಲ್ಕು ಸೀರೆಗಳಿದ್ದೇ ಇರುತ್ತವೆಯಲ್ಲಾ?"

" ನಿಮಗೆ ಅದೂ ಸ್ಮರಣೆಯಿಲ್ಲ! ಮೂರು ಇದ್ದರೇನು ಮುವ್ವತ್ತು ಇದ್ದರೇನು ? ಅವೆಲ್ಲಾ ಮಧ್ಯಾಹ್ನದ ಹೊತ್ತಿಗೆ ಮೈಲಿಗೆಯಾಗಿ ತುಂಡು ಸುತ್ತಿಕೊಳ್ಳೋದು ಕಾಣೋದಿಲ್ಲವೇ ? "

" ಅದೇಕೆ ? "

" ಅದು ಇಡಕೆ! ನೀನು ಮಕ್ಕಳನ್ನು ಹಡೆದದ್ದಕ್ಕೆ. "

" ನನ್ನ ಮಕ್ಕಳೇನು ಮಾಡಿದವು ? "

" ತಿರುಗಿ ಅದೇ ಮಾತಾಡೋದು ನೋಡು! ಮುಸರೆ ಸಾದು ಹಣೆಗೆ ಬಡಿದು ಕಳುಹಿಸಿದೆ; ಅದು ಬಂದು ನನ್ನನ್ನು ಮುಟ್ಟಿಬಿಟ್ಟಿತು!"

" ಹಣೆಗೆ ಏನೂ ಇಡದೆ ಹಾಳುಹಣೆ ಬಿಟ್ಟಿರುತ್ತೀರಿ ಅಂತೀರಲ್ಲಾಂತ ಇಟ್ಟು ಕಳುಹಿಸಿದೆ."

" ಆಹ ಹ ಹ ಹ! ಸೀ ಬಿಡು, ಮಾತಿಗೆ ಮಾತು ಕೊಡೋದರಲ್ಲಿ ಕುಶಾಲಗಿತ್ತಿ! ನಾ ಹೇಳಿದ್ದು ತಾನೇ ಈ ಮನೆಯಲ್ಲಿ ಯಾರಿಗೂ ಆಗುವುದಿಲ್ಲ? ನನ್ನದೇ ತಪ್ಪು ಅಂತೂ ಇಂತೂ! "

೫

" ಅಕ್ಕಾ, ಅರಿಸಿನ ಕುಂಕುಮಕ್ಕೆ ಅವರ ಮನೆಗೆ ಎರಡು ಸಲ ಬಂದು ಕರೆದರು ; ಹೋಗಿಬಿಟ್ಟುಬರಲೇ ? "

" ನಿನ್ನ ಇಷ್ಟ! ಏನಾದರೂ ಮಾಡು! "

" ಹೋಗು ಅಂದರೆ ಹೋಗುತ್ತೇನೆ; ಬೇಡ ಅಂದರೆ ಇಲ್ಲ."

" ಅಯ್ಯೋ ಪಾಪ! ಎಲ್ಲಾ ನನ್ನ ಕೇಳೇ ಮಾಡುತೀರಿ! "

" ನಿಮ್ಮನ್ನ ಕೇಳದೇ ಯಾವುದು ಮಾಡುತೀವಿ ? "

" ಹೌದು ಹೌದು! "

" ನೀವೂ ಬಂದರೆ ಹೋಗಿಬರಬಹುದು. "

" ನಾನು ಬರುವುದಿಲ್ಲ! "

" ನಾನೊಬ್ಬಳೇ ಹೇಗೆ ಹೋಗಲಿ ? "

" ನಿನ್ನ ಗಂಡನ್ನ ಕರಕೊಂಡು ಹೋಗು! ಅವೊತ್ತು ಹೋಗಿರಲಿಲ್ಲವೇ ? ಅವರೇ ನಿಮ್ಮನ್ನು ಇಷ್ಟು ಹೆಚ್ಚಿಸಿರೋರು! "

" ಅವೊತ್ತು ಮಂಗಳಾರತಿಗೆ ಎಲ್ಲರನ್ನೂ ಕರೆದಿದ್ದರು; ' ನಾನು

ಹೇಗಿದ್ದರೂ ಹೋಗುತ್ತೀನಲ್ಲಾ, ನೀನೂ ಬಾ' ಎಂದರು; ನೀವು ಕೆಲಸ ದಲ್ಲಿದ್ದಿರಿ; ಅದಕ್ಕೋಸ್ಕರ ಹೋದೆ. ಅವರ ಜೊತೆಗೆ ಹೋದೆ, ಅವರ ಜೊತೆಗೇ ಬಂದೆ........ಹಾಗಾದರೆ ನಾನೂ ಹೋಗಲೋ ಬೇಡವೋ?"

"ಬೇಕಾದರೆ ಹೋಗು, ಸಾಕಾದರೆ ಬಿಡು; ನನ್ನ ಮೇಲೆ ಯಾಕೆ ಗೂಬೆ ಕೂರಿಸುತ್ತೀ?"

"ಸಂಜೆ ಹೊತ್ತು ಲಕ್ಷಣವಾಗಿ ಆರಿಸಿನ ಕುಂಕುಮಕ್ಕೆ ಕರೆದರೆ ಹೋಗದೆ ಇರುತ್ತಾರೆಯೇ ಅಂದಿದ್ದಿರಿ, ಆದಕ್ಕೋಸ್ಕರ ಕೇಳಿದೆ. ನನ ಗೇನು ಹೋಗಲೇ ಬೇಕು ಅಂತ ಇಲ್ಲ."

"ಹೌದು; ನಾನು ಹಾಗೆಂತ ಹೇಳಿದ್ದು ತಪ್ಪೇನು?"

"ಹಾಗಾದರೆ ನಾನು ಸೀತೂನ ಕರೆದುಕೊಂಡು ಹೋಗಿ ಬರುತೀನಿ."

"ಅಯ್ಯೋ ನೀವೇನಮ್ಮ, ಘಟ್ಟಗಿತ್ತಿಯರು, ಸೀತು ತಾನೇ ಯಾಕೆ? ಏನೂ ಬೇಡ; ನೀವೇನು ಈಗ ಎಲ್ಲೆಲ್ಲಿಗೆ ಬೇಕಾದರೂ ಎಷ್ಟು ಹೊತ್ತಿನಲ್ಲಿ ಬೇಕಾದರೂ ಒಬ್ಬೊಬ್ಬರೇ ಹೋಗುತ್ತೀರಿ ....... ಯಾಕೇ, ಸುಮ್ಮನೆ ಕೂತುಬಿಟ್ಟೆ?"

"ಮತ್ತೇನು ಮಾಡಲಿ? ನೀವು ಯಾವುದೂ ಸರಿಯಾಗಿ ಹೇಳ ಲಿಲ್ಲ."

"ಇನ್ನು ಹೇಗೆ ಹೇಳುವುದು ಬಿಸವಾಗಿ? ನೀವೆಲ್ಲಾ ಈಗಿನ ಕಾಲದವರು; ಮಾತಿನಲ್ಲಿ ಜಾಣೆಯರು; ನಮಗೆ ಮಾತನಾಡುವುದಕ್ಕೆ ಬಂದರೆ ತಾನೇ ಹಿಂದಿನ ಕಾಲದವಕ್ಕೆ! ಅಂತೂ ನನ್ನಿಂದಲೇ ತಪ್ಪು!"

೬

"ಅಮ್ಮ, ಅತ್ತಿಗೆಯ ಮಗುವಿಗೆ ತುಂಬ ಕಾಯಿಲೆಯಂತೆ."

"ಆದರೆ ಆಯಿತು; ಕಾಯಿಲೆ ಬರದೆ ಇದ್ದದ್ದು ಯಾರಿಗೆ?"

"ನೀನು ಹೋಗಿ ನೋಡಿಕೊಂಡು ಬರುವುದಿಲ್ಲವೇನಮ್ಮ?"

"ನಾನೇಕೆ ಹೋಗಲಿ?"

"ಅಣ್ಣ ಕೂಡ ಊರಲ್ಲಿಲ್ಲವಂತೆ; ಮನೆಯಲ್ಲಿ ಇನ್ಯಾರೂ ಇಲ್ಲ. ನಿನ್ನೆಯಿಂದ ಮಗು ಜ್ಞಾನಪಾನವಿಲ್ಲದೆ ಮಲಗಿದೆಯಂತೆ."

" ಅನುಭವಿಸಲಿ; ಯಾರಿಗೇನು? ಅವರವರು ಕೇಳಿಕೊಂಡು ಬಂದದ್ದು ಅವರವರಿಗೆ. ಸುಖ ಬಂದಾಗ ಯಾರಿಗೆ ಕೊಡುತ್ತಾರೆ? ಕಷ್ಟ ಬಂದರೆ ಯಾರು ತೆಗೆದುಕೊಳ್ಳುವುದಕ್ಕಾಗುತ್ತೆ? "

" ನಾನಾದರೂ ಹೋಗಿ ನೋಡಿಕೊಂಡು ಬರಲೇ? "

" ನೀವೆಲ್ಲಾ ಒಳ್ಳೇಯವರೇಯೆ; ಒಂದು ಮಾರು ದೂರ ಇಲ್ಲ, ಮನೆ! ಅವಳು ಒಂದು ಮಾತು ಹೇಳಿ ಕಳುಹಿಸುವುದಕ್ಕಿಲ್ಲ; ನಾವು ಮೇಲೆಬಿದ್ದು ಹೋಗಬೇಕೇನು? ಅಂಥಾದ್ದೇನು ಹಿಡಿದಿದೆ? "

" ಅವಳು ಯಾರ ಕೈಲಿ ಹೇಳಿ ಕಳುಹಿಸುತ್ತಾಳಮ್ಮ? ಮನೆಯಲ್ಲಿ ನೀನೇ ಎನ್ನುವವರು ಮತ್ತೊಬ್ಬರಿಲ್ಲ."

" ನನಗೆ ಈಗ ನೀತಿ ಹೇಳೋಳು, ನಿಮ್ಮ ಅಣ್ಣ ಅತ್ತಿಗೆ ಬೇರೆ ಸಂಸಾರ ಮಾಡಿಕೊಂಡಿರುತೀವಿ ಅಂತ ಹೋದಾಗ ಅವರಿಗೆ ಏಕೆ ಹೇಳ ಬಾರದಾಗಿತ್ತು! "

" ಅವರೂ ಇಲ್ಲೇ ಇದ್ದರಲ್ಲಮ್ಮ! ಈಗ ಇನ್ನೂ ಮೂರು ತಿಂಗ ಳಾಯಿತು ಬೇರೆ ಹೋಗಿ; 'ಈ ನಿತ್ಯ ಜಗಳ ಸಾಕಾಗಿದೆ; ನಾನೆಲ್ಲಾ ದರೂ ಹೋಗುತೀನಿ' ಎಂತ ಅವೊತ್ತು ನೀನು ಅನ್ನುವ ಹೊತ್ತಿಗೆ ಅಲ್ಲವೇ ಅವರೂ ನಿಂತದ್ದು ನಿಂತಹಾಗೆ ಹೊರಟುಹೋದದ್ದು? "

" ಹೋಗದೆ ಏನುಮಾಡುತಾರೆ ಪಾಪ! ನಾನು ಇಲ್ಲಿ ಅವರನ್ನು ಹುರುಕೊಂಡು ಮುಕ್ಕಿ ಅರಕೊಂಡು ಕುಡೀತಿದ್ದೆ! ಸೋದರ ಸಂಬಂಧ, ಮನೆ ಹುಡುಗಿ, ಎಷ್ಟಾದರೂ ತಿಳಿದದ್ದು, ತಾಯಿ ಇಲ್ಲ, ಹೇಳಿದ ಹಾಗೆ ಕೇಳಿಕೊಂಡಿರುತ್ತೆ, ಅಂತ ಮೆಚ್ಚಿ ಮೆಚ್ಚಿ ಇವಳನ್ನ ತಂದರೆ ನನ್ನ ಮೇಲೇ ಕೋಗೀರು! ಮುಖ್ಯ, ಗಂಡಸಿಗೆ ಇವನಿಗೆ ಬುದ್ಧಿ ಇದ್ದರೆ ತಾನೇ? "

"ಅವನೇನು ಮಾಡುತಾನಮ್ಮ, ಮನೆಗೆ ಬರುವ ಹೊತ್ತಿಗೆ ಅವಳು ತನ್ನ ಸೀರೆ ಬಟ್ಟೆ ಗಂಟುಕಟ್ಟಿಕೊಂಡು, ಮಗುವನ್ನೂ ಕೊಂಕುಳಿಗೆ ಹಾಕಿ ಕೊಂಡು, ಈ ಮನೆ ಒಳಕ್ಕೆ ಮತ್ತೆ ನಾನು ಹೋಗೋಲ್ಲಾಂತ ಮಟ ಮಟ ಮಧ್ಯಾಹ್ನ ನಡುಬೀದೀಲಿ ಬಂದು ಅಳುತ್ತ ನಿಂತುಕೊಂಡು ಬಿಟ್ಟಿದ್ದರೆ? "

“ ಅವನೇನು ಮಾಡುತಾನೆ ಪಾಪ! ಆ ತಾಟಗಿತ್ತಿಯ ಮಾತು ಕೇಳುತಾನೆ! ಕೇಳಲಿ, ಕೇಳಿದ್ದಕ್ಕೆ ಅನುಭವಿಸಲಿ!”

“ ಆಗಲೇ ಹತ್ತುಘಂಟೆ ಹೊತ್ತಾಯಿತು; ಇನ್ನೂ ಅಣ್ಣ ಬಂದಿಲ್ಲ ಹಳ್ಳಿಗೆ ಹೋದೋನು! ಎಷ್ಟು ಹೊತ್ತಿಗೆ ಬರುತಾನೋ, ಇವೊತ್ತು ಬರುವುದೇ ಇಲ್ಲವೋ! ಹೊರಗೆ, ಕತ್ತಲೆ ಅಂದರೆ ಕತ್ತಲೆ....”

“ ಅದಕ್ಕೆ ನನ್ನನ್ನ ಏನುಮಾಡಬೇಕು, ಅಂತೀಯೋ? ಕತ್ತಲೆ ಬೆಳಕು ನನ್ನ ಮಾತು ಕೇಳುತ್ತೆಯೇನೇ? ಚೋಟುದ್ದ ಹುಡುಗಿ, ನೆನ್ನೆ ಮೊನ್ನೆ ಬಂದೋಳು; ಬೆಳೀಲಿಲ್ಲ, ಬಾಳಲಿಲ್ಲ; ಅವಳಿಗೇ ಇಷ್ಟು ಅಹಂಕಾರವಾದರೆ ನಮಗೆಷ್ಟಿರಬಾರದು?”

“ ಇದ್ದೋವು ಎರಡು ಮಕ್ಕಳು; ಅದರಲ್ಲಿ ಒಂದು ಹೋಗಿ ಇನ್ನೂ ಆರು ತಿಂಗಳಾಗಿಲ್ಲ; ಇನ್ನೊಂದೂ ಹಾಗೇ ಏನಾದರೂ ಆದರೆ ಏನು ಮಾಡೋದು?”

“ ಆದರೆ ಆಗುತ್ತೆ; ಅನುಭವಿಸೋದು! ಈಗ ಆರುತಿಂಗಳ ಕೆಳಗೆ ದೊಡ್ಡದು ಹೋದಾಗ ಅದರ ಹತ್ತಿರವೇ ಕುಕ್ಕುರುಬಡಕೊಂಡಿದ್ದೆನಲ್ಲಾ ನಾನು ಏನುಮಾಡಿದೆ? ಹೆತ್ತ ತಾಯಿಯೇ ಏನು ಮಾಡಿದಳು? ಹೋಗೋ ಜೀವಾನ ಸಿಲ್ಲಿಸಿಕೊಳ್ಳುವುದಕ್ಕಾಗುತ್ತೆಯೇ ಯಾರಾದರೂ? ಮಕ್ಕಳನ್ನ ಕಳಕೊಳ್ಳದಿದ್ದವರು ಯಾರೊ! ಇನ್ನೂ ಚಿಕ್ಕವಳು, ಪುಟ್ಟವಳು; ಮುಂದೆ ಬೇಕಾದಷ್ಟು ಹೆರುತಾಳೆ! ಎಲ್ಲಾ ನನಗೆ ಬುದ್ಧಿ ಹೇಳೋರು ಹೊರತು, ನಾನು ಆಡೋದು ನ್ಯಾಯ ಅಂತ ಒಂದು ಪ್ರಾಣಿಯ ಬಾಯಲ್ಲೂ ಬರೋದು ಕಾಣೆ! ಹೀಗೇ ಆಗಿಹೋಯಿತು ನನ್ನ ಜಲ್ಮ!”

೧೯೫೩ ಆರ್. ಎ. ಕಪ್ಪಣ್ಣ.

---

# ಊಟದಲ್ಲಿ ಉಪಚಾರ

ಸಂಸಾರಿಯಾದರೆ ಸುಖ, ಸಂನ್ಯಾಸಿಯಾದರೆ ಕಷ್ಟ ಎನ್ನುವುದು ಸುಳ್ಳು. ಕಷ್ಟಸುಖಗಳೆಲ್ಲಾ ಅವರವರ ಅದೃಷ್ಟ—'ಪ್ರಾರಬ್ಧ.' ಸುಖ ಪ್ರಾರಬ್ಧವಿರುವ ಸಂನ್ಯಾಸಿ ಕಾಡಿಗೆ ಹೋದರೂ ನಿತ್ಯ ಅಭ್ಯಂಗನ ಔತಣ ಉಪಚಾರ ತಪ್ಪುವುದಿಲ್ಲ. ಸುಖಪ್ರಾಪ್ತಿ ಇಲ್ಲದಿರುವವನು ಸಂಸಾರ ಕಟ್ಟಿಕೊಂಡರೆ ಅದು ದಕ್ಕುವುದಿಲ್ಲ; ದಕ್ಕಿದರೆ ಏಕೆ ಕಟ್ಟಿ ಕೊಂಡೆ, ಎಂದಿಗೆ ಬಿಟ್ಟು ಹೋದೇನು, ಹೇಗೆ ತಪ್ಪಿಸಿಕೊಳ್ಳಲಿ ಎನ್ನಿಸಿ ಬಿಡುತ್ತದೆ. ಮಿಕ್ಕ ವಿಷಯಗಳು ಹೋಗಲಿ, ದಿನಗಟ್ಟಲೆಯ ಊಟ ವನ್ನೇ ತೆಗೆದುಕೊಳ್ಳೋಣ; ನಾನು ನೋಡಿರುವವರಲ್ಲೆಲ್ಲಾ ಊಟದಲ್ಲಿ ಸುಖಪಡುತ್ತಿರುವ ವ್ಯಕ್ತಿ ಒಬ್ಬ ಸಂನ್ಯಾಸಿ. ಒಂದು ಆರು ತಿಂಗಳೋ ವರ್ಷವೋ ಹಾಗೆ ಊಟದಲ್ಲಿ ಸುಖಪಡುವುದಕ್ಕಾದರೂ ಸಂನ್ಯಾಸ ತೆಗೆದುಕೊಂಡು ಆ ಸ್ಥಾನದಲ್ಲಿ ಹೋಗಿ ಕುಳಿತುಕೊಳ್ಳೋಣವೆನ್ನಿಸುತ್ತದೆ —ಅವರನ್ನು ನೋಡಿದಾಗಲೆಲ್ಲ, ನೆನಸಿಕೊಂಡಾಗಲೆಲ್ಲ! ಆದರೆ ಆ ವೈರಾಗ್ಯವನ್ನು ಅವರು ಇತರರಿಗೆ ಅಷ್ಟು ಹೆಚ್ಚಾಗಿ ಬರಗೊಡಿಸುವುದಿಲ್ಲ. ಏಕೆಂದರೆ ಸಂಸಾರಿಗಳಾರಾದರೂ ಅವರ ದರ್ಶನಕ್ಕೆ ಹೋದರೆ, ಅಂಥವ ರಿಗೆ ಅವರು ತಮ್ಮ ದರ್ಶನಲಾಭದ ಜೊತೆಗೆ ಭೋಜನಲಾಭವನ್ನೂ ಕೊಡುತ್ತಾರೆ, ಪಂಕ್ತಿಲಾಭವನ್ನೂ ಕೊಡುತ್ತಾರೆ. ಆದ್ದರಿಂದ ಸ್ವಾಮಿ ಗಳಿಗೆ ಲಭಿಸುವ ಆದರ ಉಪಚಾರ ಅಡಿಗೆಗಳೆಲ್ಲಾ, ಅವರ ಜೊತೆಗೇ ಮಿಕ್ಕವರಿಗೂ ಅವರವರ ಪ್ರಾಪ್ತಿಗೆ ತಕ್ಕ ಪ್ರಮಾಣದಲ್ಲಿ ದೊರೆಯು ತ್ತವೆ. ಅವರಂತೆಯೇ ಎಲ್ಲರ ಮುಖದಲ್ಲಿಯೂ ನಗು ನಲಿವು ತಾಂಡವ ವಾಡುತ್ತಿರುತ್ತವೆ.

ಸ್ವಾಮಿಗಳು ಭವ್ಯವೂ ವಿಶಾಲವೂ ಆದ ಭೋಜನ ಮಂದಿರ ವೊಂದರೊಳಗೆ ಅಗ್ರಸ್ಥಾನದಲ್ಲಿ ಪರಿಷ್ಕಾರವಾಗಿ ಕುಳಿತುಕೊಳ್ಳುತ್ತಾರೆ. ಅವರ ಮುಂದೆ ನೂರಾರು ಜನ ಶಿಷ್ಯರೂ ಭಕ್ತರೂ ಯಾತ್ರಿಕರೂ ಅವ ರನ್ನು ಮೆಚ್ಚಿಕೆಯಿಂದ ನೋಡುತ್ತ ಸಾಲುಸಾಲಾಗಿ ಕುಳಿತಿರುತ್ತಾರೆ. ಎಲ್ಲರಿಗೂ ಮುಂದೆ ಒಂದೊಂದು ದೊಡ್ಡ ಅಗ್ರದ ಬಾಳೆ ಎಲೆ. ಸ್ವಾಮಿಗ

ಳಿಗೆ ಒಂದು ಮೊಳ ಅಗಲ ಎರಡು ಮೊಳ ಉದ್ದವಿರುವ ಎರಡು ಅಗ್ರದ ಬಾಳೆ ಎಲೆಗಳು. (ಮದುವೆಯ ಭೂಮದ ಊಟದಲ್ಲಿಯೂ ಅಂಥವು ದೊರಕಲಾರವು!) ಅವುಗಳ ಮೇಲೆ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಜಲತರಂಗದಲ್ಲಿ ಜೋಡಿಸಿರುವಂತೆ ಓರಣವಾಗಿ ಇಟ್ಟ ಬಾಳೆಲೆಯ ನಾನಾ ಗಾತ್ರದ ಹಸುರು ದೊನ್ನೆಗಳು. ಅವುಗಳಲ್ಲಿ ಘಮ ಘಮಿಸುವಂಥ ಏನೇನೋ ಪರಮಾನ್ನ ಪಾನೀಯಾದಿಗಳು. ಸ್ವಾಮಿ ಗಳು ಮಂಡಿಸುವುದಕ್ಕೆ ಚಿನ್ನದ ಮಲ್ಲಿಗೆ ಹೂವುಗಳನ್ನು ಕೆತ್ತಿರುವ ಕರಿಯ ಮರದ ಮಿರಗುಮಣೆ. ಎರಡು ಕಡೆಯೂ ತುಪ್ಪದ ದೀಪ ಉರಿಯು ತ್ತಿರುವ ಬೆಳ್ಳಿಯ ಕಂಬಗಳು. ಒಂದು ಪಕ್ಕದಲ್ಲಿ ಲಂಬೋದರನಾದ ಒಬ್ಬ ವ್ಯಕ್ತಿ ಗೆರಸಿಯಂತೆ ವಿಶಾಲವಾಗಿರುವ ಲಾವಂಚದ ಬೀಸಣಿಗೆ ಯೊಂದನ್ನು ಐರಾವತವು ತನ್ನ ರತ್ನಾಭರಣ ಮಂಡಿತವಾದ ಕಿವಿಯನ್ನು ಚಲಿಸುತ್ತಿರುವಂತೆ, ಚಲಿಸುತ್ತ ಗಾಳಿ ಹಾಕುತ್ತಿರುತ್ತಾನೆ. ಸ್ವಾಮಿಗಳು ಉತ್ತರೀಯ ಹೊದ್ದೂ ಹೊದೆಯದಂತೆ ಕುಳಿತಿರುವುದರಿಂದ ಅವರಿಗೆ ಊಟದಿಂದ ಆಗುವ ಆಯಾಸ, ಬೀಸಣಿಗೆಯ ಉಪಚಾರದಿಂದ ಆಗುವ ಅದರ ಪರಿಹಾರ, ಇವೆಲ್ಲಾ ಪ್ರತ್ಯಕ್ಷವಾಗಿ ಗೋಚರವಾಗುತ್ತಿರುತ್ತವೆ. ಮತ್ತೊಂದು ಪಕ್ಕದಲ್ಲಿ, ಒಬ್ಬ ಪಂಡಿತವ್ಯಕ್ತಿ ಕಾಮಧೇನುವಿನಂತೆ ಚಚ್ಚೌಕವಾಗಿ ಕುಳಿತು ಮುಂದೆ ವ್ಯಾಸಪೀಠದ ಮೇಲೆ ಇಟ್ಟ ಶ್ರೀಮ ದ್ರಾಮಾಯಣದಿಂದ ಸುಂದರಕಾಂಡವನ್ನು ಮೃದುಗಂಭೀರವಾದ ಸ್ವರ ದಲ್ಲಿ ಪಾರಾಯಣಮಾಡುತ್ತಿರುತ್ತಾನೆ. ಹಿಂದೆ ವೀಣಾಗಾನವಾಗುತ್ತಿರು ತ್ತದೆ. ಸ್ವಾಮಿಗಳ ಎಲೆಯ ಮುಂದೆಯೇ ಬೆಳ್ಳಗೆ ಬೆಳಗಿದ ಸಣ್ಣ ಸಣ್ಣ ಪಾತ್ರೆಗಳಲ್ಲಿ—ಅವೇನು ಐವತ್ತೇ ಇರುತ್ತವೆಯೋ ನೂರೇ ಇರುತ್ತ ವೆಯೋ—ಪಾಕಗಳು ಸಿದ್ಧವಾಗಿ ಸುಖೋಷ್ಣವಾಗಿ ಇಟ್ಟಿರುತ್ತವೆ. ಇಬ್ಬರು ಪರಿಚಾರಕರು ಎರಡು ಬೆಳ್ಳಿಯ ಚಮಚಗಳನ್ನು ಹಿಡಿದು ಕೊಂಡು ಆಚೆ ಈಚೆ ಸೊಂಟಕಟ್ಟಿಕೊಂಡು ನಿಂತಿರುತ್ತಾರೆ. ಊಟಕ್ಕೆ ಮೊದಲು ಮಾಡಿದ್ದೇ ತಡ, ಅವನ್ನು ಒಂದೊಂದಾಗಿ ಅವರೆಲೆಗೆ ಬಡಿಸುತ್ತಾರೆ—ಭೋಕ್ತರು ಇಂಥ ಪದಾರ್ಥ ಬೇಕೆಂದು ಕೇಳುವುದಿಲ್ಲ; ಕೇಳಲು ಅವಕಾಶವಿರುವುದಿಲ್ಲ; ಆವಶ್ಯಕತೆಯೂ ಇರುವುದಿಲ್ಲ. ಅವರು

ಬಡಿಸಿದವೆಲ್ಲವನ್ನೂ ನಿಷ್ಪಕ್ಷಪಾತವಾಗಿ ರುಚಿನೋಡುತ್ತಾರೆ—ತಿನ್ನುವು ದಿಲ್ಲ; ಅದು ಸಾಧ್ಯವಲ್ಲ. (ಅದು ಆಮೇಲೆ ನಮಗೆ ಗೊತ್ತಾಗುತ್ತದೆ.) ಅವೆಲ್ಲವನ್ನೂ ಅದೇ ರೀತಿ ಮಿಕ್ಕವರಿಗೂ ಅವರವರಿಗೆ ಪ್ರಾಪ್ತಿ ಇದ್ದಷ್ಟು, ಬಡಿಸಿ ರುಚಿ ನೋಡಿಸುತ್ತಾರೆ. ಅಡಿಗೆ ಯಾವುದೂ ಕೆಟ್ಟಿರುವುದಿಲ್ಲ; ಎಲ್ಲವೂ ಹದವಾಗಿ ಇಳಿದಿರುತ್ತದೆ; ಪರಿಷ್ಕಾರವಾಗಿರು ತ್ತದೆ; ಒಂದರಂತೆ ಒಂದು ಇರುವುದಿಲ್ಲ; ಒಂದನ್ನು ಬಾಯಲ್ಲಿ ಇಟ್ಟು ಕೊಳ್ಳುವ ಹೊತ್ತಿಗೆ ಇನ್ನೊಂದು ಬರುತ್ತದೆ; ಸ್ವಲ್ಪ ಹೊತ್ತಿನಲ್ಲಿ ದೊಡ್ಡ ಅಗ್ರದ ಬಾಳೆಯೆಲೆಯೆಲ್ಲಾ ಚಿತ್ತಾರ ಬರೆದಂತೆ ಬಣ್ಣಬಣ್ಣದ ಅಡಿಗೆ ಗಳಿಂದ ಅಂದವಾಗಿ ತುಂಬಿಹೋಗುತ್ತದೆ; ಆತುರ ಅಡಗಿ ಕುತೂಹಲ ಮಾತ್ರ ಉಳಿಯುತ್ತದೆ. ಅದೂ ಹೆಚ್ಚು ಹೊತ್ತು ಇರುವುದಿಲ್ಲ. ದುಂಡು ದುಂಡಗೆ ಮಿರುಮಿರುಗುತ್ತ ತೃಪ್ತಿ ತುಳುಕಾಡುತ್ತ ಕುಳಿತಿರುವ ಸ್ವಾಮಿ ಗಳನ್ನು ನೋಡಿದರೇ ಸಾಕು ಸಂತೋಷವಾಗುತ್ತದೆ. ಸಂನ್ಯಾಸದ ಕಟ್ಟಿ ಲ್ಲದೆ ಈ ಸೌಖ್ಯವನ್ನು ಅನುಭವಿಸುವುದಾದರೆ ಸಂಸಾರವೇ ವಾಸಿಯ ಲ್ಲವೇ? ಆದರೆ ಒಪ್ಪತ್ತಿನ ಆ ಊಟದ ಸೌಖ್ಯಕ್ಕೂ ಪ್ರಾಪ್ತಿಬೇಕು. ಒಂದು ಸಾರಿಯೂ ಇದು ದೊರೆಯದ ನನ್ನ ಸ್ನೇಹಿತರು ಅನೇಕರಿದ್ದಾರೆ ನಾನೂ ಒಂದು ಸಾರಿ ಪಡೆದ ಆ ಸ್ವಪ್ನ ಸಂತೋಷವನ್ನು ಇನ್ನೊಂದು ಸಾರಿ ಪಡೆಯಬೇಕೆಂದು ಮಾಡಿರುವ ಪ್ರಯತ್ನಗಳೆಲ್ಲ ವಿಫಲವಾಗಿವೆ.

ಸಂಸಾರದಲ್ಲಿ ಸೌಖ್ಯವಿಲ್ಲವೆಂದಲ್ಲ; ಇರುವಷ್ಟಿದೆ, ಇರುವವರಿಗಿದೆ. ಇರಬೇಕೆಂಬುದೇ ಸಂಸಾರ ಕಟ್ಟುವುದರ, ಕಟ್ಟಿಕೊಳ್ಳುವುದರ, ಉದ್ದೇಶ. ಆದರೆ ನಾವು ಒಲಿದರೆ ಅದು ಒಲಿಯಬೇಕಲ್ಲ! ಪ್ರಾಪ್ತಿ ಇಲ್ಲದ್ದಕ್ಕೆ ಬಾಯಿ ಬಾಯಿ ಬಿಟ್ಟರೆ ಬರುತ್ತದೆಯೇ? ಮಿಕ್ಕ ಅನು ಕೂಲ, ಸುಖ, ಹಾಗಿರಲಿ, ಸಂತೋಷದಿಂದ ಊಟ ಮಾಡುವು ದಕ್ಕೂ ಪಡೆದು ಬಂದಿರಬೇಕು. ಭಾಗ್ಯವಿರಬಹುದು, ಬೇಕಾದವರು ಇರಬಹುದು; ಫಲ ಮಾತ್ರ ಪಡೆದಷ್ಟೇ. ಬಾಯಿಗೆ ರುಚಿಯಾಗಿ, ಹೊಟ್ಟೆ ತುಂಬ, ದಿನಕ್ಕೆ ಎರಡು ಹೊತ್ತು, ಸಂತೋಷವಾಗಿ ಊಟಮಾಡುತ್ತಿ ದ್ದೇನೆಂದು ಹೇಳಬಲ್ಲ ಸಂಸಾರಿ ಪುಣ್ಯವಂತ. ಇದು ಸಂಸಾರಿಯೊಬ್ಬನ ಊಟದ ವೈಖರಿ:—

೨

" ಎಲೆ ಹಾಕ್ಕೊಳ್ಳೋದಿಲ್ಲವೇನು ? "

" ಆಗಲೇ ಅಡಿಗೆ ಆಯಿತೇ ? ''

" ಇಷ್ಟು ಹೊತ್ತಿನ ತನಕ ಆಗದೆ ಇರುತ್ತದೆಯೇ ? "

" ಇನ್ನೂ ಮಡಿ ಉಟ್ಟುಕೊಂಡು ಒಂದು ಘಂಟೆಯಾಗಿಲ್ಲ ! "

" ಆದರೇನು, ಅಡಿಗೆ ಆಗುವುದು ಎಷ್ಟು ಹೊತ್ತು ? ಒಲೇ ಮುಂದೆ ಘಂಟೆಗಟ್ಲೆ ಕೂತುಕೊಂಡಿದ್ದರೇ ಅಡಿಗೆ, ಇಲ್ಲದಿದ್ದರೆ ಅಲ್ಲವೇ?"

" ಬೇಳೆಯಾದರೂ ಬೇಯಬೇಕೋ ಇಲ್ಲವೋ ?"

" ಹಾಗಾದರೆ ಬೇಳೆ ಬೇಯಿಸದೇನೇ ಎಷ್ಟೆಷ್ಟು ದಿನ ಅಡಿಗೆ ಮಾಡಿ ಹಾಕಿದೀನಿ ? ''

*  *  *  *

" ಈ ಲೋಟಾಕ್ಕೆ ಸ್ವಲ್ಪ ನೀರು ಹಾಕು ! "

" ಅಲ್ಲೇ ಎಲ್ಲೋ ಚೊಂಬಿನಲ್ಲಿ ಇದೆ ಅಂತ ಕಾಣುತ್ತೆ ; ಹಾಕಿ ಕೊಳ್ಳಿ.''

" ಸಾದಿನ ಬಟ್ಟಲು ಎಲ್ಲಿದೆ ? "

" ಹುಡುಗರು ಎಲ್ಲಿ ತಗೊಂಡು ಹೋಗಿ ಹಾಕಿಬಿಟ್ಟರೋ ! ಇಲ್ಲದಿದ್ದರೆ ಇಲ್ಲ. ಈಗಿನ ಕಾಲದಲ್ಲಿ ಯಾರು ಹಣಿಗೆ ಇಟ್ಟುಕೊಳ್ಳುತ್ತಾರೆ ! "

*  *  *  *

" ಅದೇನು ಅನ್ನ ಹಾಗೆ ಹಿಸುಕಿ ಹಿಸುಕಿ ನೋಡುತ್ತೀರಿ ? ಮಿಡ್ಡೆಯೋ ? ಸ್ವಲ್ಪ ನೀರು ಹೆಚ್ಚಾಗಿಬಿಟ್ಟಿತೇನೋ !''

"ಇಲ್ಲ."

"ಅಕ್ಕಿಅಕ್ಕಿಯೋ ? ಸರಿಯಾಗಿ ಆಗಿಲ್ಲವೋ ?''

"ಆಗಿದೆ.''

''ಮತ್ತೆ? ಇನ್ನೂ ಒಬ್ಬೊಬ್ಬರ ಮನೆಯ ಅನ್ನ ನೋಡಬೇಕು :- ಕೆಳಗೆ ಅಂಗಾರ, ಮೇಲೆ ಮಂತ್ರಾಕ್ಷತೆ, ಮಧ್ಯ ಗೋಪೀಚಂದನ ಅನ್ನವಹಾಗೆ ಇರುತ್ತೆ."

"ತುಪ್ಪ ಹಾಕಿದೆಯೋ ಇಲ್ಲವೋ ಅಂತ ನೋಡಿದೆ.''

"ನಿನ್ನೆ ರಾತ್ರಿಯೇ ಇದ್ದಬದ್ದದ್ದನ್ನೆಲ್ಲಾ ಕರಗಿಸಿ ಹಾಕಿಬಿಟ್ಟೆನಲ್ಲ!"

"ಹಾಗಾದರೆ ಇವೊತ್ತು ಬೆಳಗ್ಗೆಯಾದರೂ ಬೆಣ್ಣೆ ತರಿಸಬಹುದಾಗಿತ್ತು."

"ತರಿಸಲೂ ಬಹುದಾಗಿತ್ತು, ಮುಗಿಸಲೂ ಬಹುದಾಗಿತ್ತು. ಒಂದು ಹೊತ್ತು ತುಪ್ಪವಿಲ್ಲದೆ ತಿಂದರೆ ಏನಾಗುತ್ತೆ? ಅಷ್ಟು ಮೈ ಬೆಳೆಯುವುದು ಕಮ್ಮಿಯಾದರೆ ಆಗಲಿ!"

"ಇಷ್ಟು ಸಂಪಾದನೆಮಾಡಿಯೂ ತುಪ್ಪವಿಲ್ಲದೆ ತಿನ್ನುವಂಥದೇನು ಬಂದಿದೆ?''

"ಸಂಪಾದನೆ ಮಾಡಿದಾಕ್ಷಣ, ಬಂದದ್ದನ್ನೆಲ್ಲಾ ತಿಂದುಹಾಕಿಬಿಡಬೇಕೆಂದು ಹೇಳಿದೆಯೇನು?''

"ಹೊಟ್ಟೆಗೆ ತಿನ್ನದೆ ಮಿಗಿಸಿ ಮಾಡಬೇಕಾದದ್ದೇನು?"

"ದುಡ್ಡು ಮಿಕ್ಕರೆ ತಪ್ಪೆ? ಕಷ್ಟಕಾಲಕ್ಕೆ ದುಡ್ಡು ಆಗದೆ ಮನುಷ್ಯರು ಆಗುತಾರೆಯೆ?''

"ಮನುಷ್ಯರು ಇರುವ ತನಕ ತಿಂದು ಉಂಡು ಗಟ್ಟಿಯಾಗಿದ್ದರೆ ತಾನೆ ಆಗೋದು?"

"ಆಗದಿದ್ದರೆ ಹೋಗಲಿ; ಇವೊತ್ತೇ ಎಲ್ಲಾ ಖರ್ಚುಮಾಡಿ. ನಾಳೆನಿಂದ ವಾರಕ್ಕೆ ಒಂದು ಘಡಿಯ ತುಪ್ಪ ಕುಡೀರಿ. ತುಪ್ಪ ತಿಂದರೆ ಹೊಟ್ಟೆ ತುಂಬುತ್ತದೆಯೇ? ಇಷ್ಟು ಒಪ್ಪವಾಗಿ ಸಂಸಾರ ಮಾಡಿದ್ದರೆ ಮತ್ತೊಬ್ಬರ ಮನೆಯಲ್ಲಿ ಎಷ್ಟು ಸಂತೋಷಪಡುತ್ತಿದ್ದರೋ!"

"ನೀನು ಒಪ್ಪಮಾಡಲಿಲ್ಲ ಅಂತ ನಿನ್ನನ್ನು ಯಾರು ಆಕ್ಷೇಪಣೆ ಮಾಡಿದವರು?"

''ಮಾಡಿದ್ದಕ್ಕೆ ಸಂತೋಷವಿಲ್ಲ; ಒಳ್ಳೇದಕ್ಕೂ ಆಕ್ಷೇಪಣೆ ಕೆಟ್ಟದ್ದಕ್ಕೂ ಆಕ್ಷೇಪಣೆ!''

''ಹೋಗಲಿ ಬಿಡು!''

"ಈಗ ನೀವು ತಾನೇ ತುಪ್ಪ ಹಾಕಲಿಲ್ಲ ಅಂತ ವ್ಯಾಜ್ಯ ತೆಗೆದೋರು?"

"ಹಾಗಂತ ಊಟ ಬಿಟ್ಟೇಳುವುದಕ್ಕಾಗುತ್ತದೆಯೇ?"

"ಬೇಡಿ! ಎಲ್ಲಾದರೂ ತಂದುಹಾಕ್ತೀನಿ! ಅಲ್ಲಿಯ ತನಕ ಹಾಗೇ ಕೂತಿರಿ!"

* * * *

"ಏನದು?"

"ಏನು, ಕಾಣುವುದಿಲ್ಲವೇ? ಸಾರು!"

"ಸಾರೋ ಹುಳಿಯೋ ಎಂತ ಕೇಳಿದೆ."

"ಹುಳಿ ಮಾಡಿದ ಹಾಗೆಯೇ ಇದೆ! ಬೇಳೆ ನೋಡಿದರೆ ರೂಪಾಯಿಗೆ ಒಂದು ಸೇರು, ತೆಂಗಿನಕಾಯಿ ನೋಡಿದರೆ ಎರಡಾಣೆಗೆ ಒಂದು, ತರ್ಕಾರಿ ನೋಡಿದರೆ ನಾಲ್ಕಾಣೆ ಕೊಟ್ಟರೂ ಒಪ್ಪತ್ತಿಗಾಗುವಷ್ಟು ಬರುವುದಿಲ್ಲ!"

"ಹೋಗಲಿ, ಏನುಮಾಡಿದ್ದೀಯೋ ಅದನ್ನೇ ಹಾಕು!.... ಸಾಕು, ಸಾಕು!"

"ಎರಡೇ ಸೌಟು ಸಾಕೇ? ಅದೇನು, ನಾವು ಮಾಡಿದ ಸಾರು ಕಹಿಯಾಗಿರುತ್ತೆಯೇ?"

"ಸಾರೆಲ್ಲಾದರೂ ಕಹಿಯಾಗಿರುತ್ತೆಯೇ?"

"ಮತ್ತೆ, ಹುಳಿ ಹೆಚ್ಚೇನೋ!"

"ಹುಂ."

"ನಿಮಗೆ ಸ್ವಲ್ಪ ಹುಳಿ ಹೆಚ್ಚಾಗಕೂಡದು! ಹುಳಿ ಮುಂದಾಗಿಲ್ಲದೆ ಬರಿಯ ಸಪ್ಪೆ ಸಾರು ತಿನ್ನುವುದು ಯಾರ ಕೈಲಾದೀತು?"

"ಈಗ ಅದನ್ನೂ ತಿಂದಾಯಿತಲ್ಲ! ಚೆಲ್ಲಲಿಲ್ಲವಲ್ಲ. ಹೋಗಲಿ ಬಿಡು!"

"ಹೇಗೆ ಬಿಡುವುದು? ನಿತ್ಯ ಇದೇ ರಾಮಾಯಣ!.........ಏಕೆ ಸುಮ್ಮನೆ ಕೂತುಕೊಂಡುಬಿಟ್ಟಿರಿ?"

"ಆಗಲಿ, ನಿನ್ನ ಮಾತೆಲ್ಲ ಆಡಿ ಮುಗಿಯಲಿ!

"ಮಾತೂ ಆಡಕೂಡದು ಹಾಗಾದರೆ! ಮೂಗೆತ್ತಿನ ಹಾಗೆ ಬಾಯಿ ಮುಚ್ಚಿಕೊಂಡು ದುಡಿಯುತ್ತಿರಬೇಕು! ಮನೆಗೆ ಮುಖ ತೋರಿಸುವುದೇ ಕಷ್ಟ; ಬಂದಾಗ, ಇದ್ದಾಗ, ಒಂದೆರಡು ಮಾತೂ ಆಡಕೂಡದು. ಅಲ್ಲವೆ?"

" ಆದಕ್ಕೇ ಆಡು ಎಂದು ಹೇಳಿದೆನಲ್ಲ ! ಆಡು ಕೇಳುತ್ತೇನೆ."

" ಈ ಮಾತಿಗೇನು ! "

*        *        *        *

" ಮಜ್ಜಿಗೇ ! "

" ಅಷ್ಟರೊಳಗಾಗಿ ಅವಸರವೇ ? ಸ್ವಲ್ಪ ತಾಳಿ ; ಅಡಿಗೆಮನೆ ತೊಳೆದು ಬರ್ತೀನಿ ! "

" ಎಷ್ಟು ಹೊತ್ತಿನಿಂದ ಕೂತಿದೀನಿ ! ಅನ್ನವೆಲ್ಲ ಒಣಗಿ ಹೋಯಿತು ! "

" ಅಯ್ಯೋ ಪಾಪ ! ಮೂರು ದಿನ ಆಗಿಹೋಯಿತು ! ಗಂಟಲಲ್ಲಿ ಇಳಿಯುವುದಿಲ್ಲ !— ಹೂಂ ಹಿಡಿಯಿರಿ ! "

" ಸಾಕು, ಸಾಕು ! "

" ಏನು, ಹುಳಿಯೋ ? "

" ಅಷ್ಟೇನೂ ಹುಳಿಯಿಲ್ಲ. "

' ಹಾಲು ಬೇಕೇನೋ ! "

" ಹಾಕಿದರೆ ಬೇಕು ! "

" ಹಾಲಿಗೆ ಹಾಲೂ ಖರ್ಚು, ಮಜ್ಜಿಗೆಗೆ ಮಜ್ಜಿಗೆಯೂ ಖರ್ಚು. ಯಾವುದಾದರೂ ಒಂದು ಹಾಕಿಸಿಕೊಳ್ಳುವುದಕ್ಕೇನು ? "

" ಹಾಗಾದರೆ ಹಾಲೇ ಹಾಕು, ಇನ್ನು ಮೇಲೆ ! "

" ಹುಳಿಮಜ್ಜಿಗೆ ಏನುಮಾಡಬೇಕು ? ನಿತ್ಯ ಒಂದೊಂದು ಕೊಡ ಮಿಗುತ್ತದಲ್ಲ ? "

" ಮಜ್ಜಿಗೆ ಮಾಡಲೇಬೇಡ ! ಮೊಸರೇ ಹಾಕು ! "

" ಮಜ್ಜಿಗೆ ಮಾಡದಿದ್ದರೆ ಹೇಗೆ ? ಮನೆಗೆ ಯಾರಾದರೂ ತಟ್ಟನೆ ಬಂದರೆ ಒಂದು ಬಟ್ಟಲು ಮಜ್ಜಿಗೆ ಇರಬೇಡವೇ ? "

" ಬಂದರೆ ಮಜ್ಜಿಗೆ ಮಾಡುವುದು ! "

" ಬರುವವರು ಹೇಳಿ ಕಳುಹಿಸಿ ಬರುತ್ತಾರೇನು ? "

" ಹಾಗೇಂತ ಯಾಕೆ ಮಜ್ಜಿಗೆ ಮಾಡಿ ಮಾಡಿ ಮಿಗಿಸಬೇಕು ? "

" ಮಿಕ್ಕರೆ ಮಿಗಲಿ, ಮಜ್ಜಿಗೆಯ ಹುಳಿ ಮಾಡುವುದು ! "

" ಅದು ನನಗೆ ಸೇರುವುದಿಲ್ಲ; ನಾನು ಹಾಕಿಸಿಕೊಳ್ಳುವುದಿಲ್ಲವೋ, ಮಜ್ಜಿಗೆಹುಳಿ ಮಾಡಿದರೆ ನಮ್ಮ ಮನೆಯಲ್ಲಿ ಖರ್ಚಾಗುವುದಿಲ್ಲವೋ ಎನ್ನುತ್ತೀಯೆ!"

" ನೀವೊಬ್ಬರೇ ಏನು ಮನೆಯಲ್ಲಿ ತಿನ್ನುವವರು ?"

" ಹಾಗಾದರೆ ಮಾಡು!"

" ಅದೇನು ಹಾಗೆ ಮುಖ ಸಿಂಡರಿಸಿಕೊಳ್ಳುತ್ತೀರಿ ?"

" ಸ್ವಲ್ಪ ಚಟ್ನಿ ಬೇಕು."

" ಹಾಲೂ ಹಾಕಿಸಿಕೊಂಡು ಇನ್ನು ಚಟ್ನಿ ಬೇರೇ ಯಾಕೆ ?"

"ಸ್ವಲ್ಪ!"

"ಹೂಂ, ತಗೊಳ್ಳಿ."

"ಸಾಕು, ಸಾಕು!"

"ಅಷ್ಟು ಸ್ವಲ್ಪ ಸಾಕೇ ?"

"ಮಜ್ಜಿಗೆಯನ್ನಕ್ಕೆ ನಂಜಿಕೊಳ್ಳುವುದಕ್ಕೆ ಇನ್ನೆಷ್ಟು ಬೇಕು ?"

"ಇಷ್ಟು ಸ್ವಲ್ಪವೇ? ಈ ಭಾಗ್ಯಕ್ಕೆ ಯಾಕೆ ಚಟ್ನಿ ಚಟ್ನಿ ಅಂತ ಕೂಗಿ ಹಾಕಿಸಿಕೊಳ್ಳಬೇಕು ?"

"ನನಗೇನು ಬೇಕೇಬೇಕೆಂಬ ಚಪಲವಿಲ್ಲ. ನಂಜಿಕೊಳ್ಳದೆ ಹಾಗೇ ಊಟಮಾಡಿಯೂ ಅಭ್ಯಾಸವಿದೆ."

"ಅಯ್ಯೋ ಎಲೆಯ ಕೆಳಗೆಲ್ಲಾ ಎಷ್ಟು ಮಜ್ಜಿಗೆ ಕೋಡಿ ಹೋಗಿ ಬಿಟ್ಟಿದೆ!"

"ನಾನೇನು ಮಾಡಲಿ? ಎಲೆಯೆಲ್ಲಾ ಹರುಕು."

"ಇದಕ್ಕೇ ಎಂಟಾಣೆ ನೂರಕ್ಕೆ! ಇನ್ನು ಸ್ವಲ್ಪ ಒಳ್ಳೆಯದು ಬೇಕೂಂದ್ರೆ ಹನ್ನೆರಡಾಣೆ ಕೇಳ್ತಾನೆ."

"ಕೊಡುವುದು ; ಇನ್ನೇನು ಮಾಡುವುದು ಮತ್ತೆ!"

"ಈ ಎಲೆ ತೆಗೆದು ಗೋಮೆ ಇಡುವುದಕ್ಕೇ ನನ್ನ ಸೊಂಟ ಬಿದ್ದು ಹೋಗುತ್ತೆ; ಇನ್ನು ಊರಗಲ ಎಲೆ ತಂದು ಹಾಕಿಕೊಂಡರೆ ಏನೂ ಇಲ್ಲ ; ಮೂರು ದಿನಕ್ಕೆ ಹಾಸಿಗೆ ಹತ್ತಿ ಮಲಗಿಬಿಡೋದೆ!"

"ಅಯ್ಯೊ ಅಯ್ಯೊ ಹಾಗೆ ಮಾತ್ರ ಮಾಡಬೇಡ!"

"ಹಾಳು ಖಾಯಿಲೆಯೂ ಬರುವುದಿಲ್ಲವಲ್ಲ, ಎರಡು ದಿನ ಹಾಯೆಂತ ಇರೋಣ ಎಂದರೆ! ನಾವು ನಾಲ್ಕುದಿನ ಖಾಯಿಲೆಬಿದ್ದು ಲಪಟ್ಟಾಗಿ ಮಗಿದರೆ ಗಂಡಸರ ಹಾಂಕಾರ ಮುರಿಯುತ್ತೆ; ಹೆಂಗಸರ ಕಷ್ಟ ಏನೂಂತ ಗೊತ್ತಾಗುತ್ತೆ!"

"ಅದೂ ಗೊತ್ತಿರುವುದು ತಾನೇ! ತಿಂಗಳಿಗೆ ಮೂರುದಿನ ಅಭ್ಯಾಸವಾಗಿದೆಯಲ್ಲ!"

"ಈ ಮಾತಿಗಿನ್ನೇನು! ಓದುಬಲ್ಲೋಳಿಗೆ ಗಂಡ ಬೇಡ, ಅಡಿಗೆಬಲ್ಲೋನಿಗೆ ಹೆಂಡತಿ ಬೇಡ ಅಂತ!"

"ಪುಣ್ಯಕ್ಕೆ, ನಿನಗೆ ಓದು ಬರೋದಿಲ್ಲವಲ್ಲ!"

"ಅದಕ್ಕೇ ಹೀಗೆ ಪರಾಧೀನವಾಗಿರೋದು; ಒಂದು ತುತ್ತು ಅನ್ನಕ್ಕೆ ಚಾಕರಿ ಬಡಿಯಬೇಕಾಗಿರೋದು! ನಾವೂ ಓದಿದ್ದರೆ, ಮತ್ತೊಬ್ಬರ ಹಂಗಿಲ್ಲದೆ 'ಧಿಂ ರಂಗ!' ಅಂತ ಇರಬಹುದಾಗಿತ್ತು!"

"ಓದು ಬಂದೋರೆಲ್ಲ ದಿವಾನಗಿರಿ ಮಾಡುತ್ತಿದ್ದಾರೇನು?"

"ಮಾಡೋದೆ!"

"ಕೊಡೋರು ಮಾತ್ರ ಇಲ್ಲ!"

"ಆಳು, ಕಾಳು, ಅಡಿಗೆಯವರು ಪರಿಚಾರಕರು ಆದರೂ ಇರುತ್ತಾರೆ!"

"ನೀನೂ ಅಡಿಗೆಗೆ ಪರಿಚಾರಿಕೆಗೆ ಯಾರನ್ನಾದರೂ ಗೊತ್ತು ಮಾಡಿಕೊ! ದುಡ್ಡು ಕೊಟ್ಟರೆ ಯಾವುದು ಸಿಕ್ಕುವುದಿಲ್ಲ!"

"ಅಯ್ಯೋ ಹುಚ್ಚೇ! ದುಡ್ಡಿನ ಆಸೆಗೆ ಯಾರಾದರೂ ಕೆಲಸ ಮಾಡುತ್ತಾರೆಯೆ?"

"ಮತ್ತೆ?"

"ಹೆದರಿಕೆ ಇರಬೇಕು."

"ಹಾಗೆಂದರೆ?"

"ಆಫೀಸಿನ ಜವಾನರಾದರೆ, ಸರ್ಕಾರದ ಕೆಲಸ ಹೋದೀತಲ್ಲ ಅಂತ ಅವರಿಗೆ ಹೆದರಿಕೆ ಇರುತ್ತೆ. ಅನ್ನಲಿ, ಆಡಲಿ, ಬಾಯಿಮುಚ್ಚಿಕೊಂಡು ಕೆಲಸ ಮಾಡುತ್ತಾರೆ. ಕೈಸಂಬಳ ಕೊಟ್ಟಟ್ಟುಕೊಂಡವರಿಗೆ ಹೆದರಿಕೆ ಏನಿರುತ್ತೆ?"

" ಸರ್ಕಾರದಿಂದ ಅಡಿಗೆಯವನನ್ನೂ ಕೊಡುತ್ತಾರೆಯೆ ? "

" ಅಡಿಗೆಯವನು ಅಂತ ಕೊಡುವುದಿಲ್ಲ ; ಆಳು ಅಂತಲೇ ಕೊಡುವುದು ; ಆ ಕೆಲಸಕ್ಕೆ ಒಬ್ಬ ಬ್ರಾಹ್ಮಣನನ್ನೇ ಇಟ್ಟುಕೊಂಡರೆ, ಅಡಿಗೆಯವನಿಗೆ ಅಡಿಗೆಯವನು, ಆಳಿಗೆ ಆಳು, ಪರಿಚಾರಕನಿಗೆ ಪರಿಚಾರಕ, ಕಾವಲಿಗೆ ಕಾವಲು ಎಲ್ಲಾ ಆಗುತ್ತೆ. ನಾರಾಯಣ ರಾಯರ ಮನೆಯ ಅಡಿಗೆಯವನನ್ನು ನೋಡಿ! ಅವನಿಗೆ ಸರ್ಕಾರದ ಸಂಬಳವಂತೆ; ಅವನು ಮನೆಯಲ್ಲಿ ಅಡಿಗೆ ಮಾಡಿ ಬಡಿಸಿ, ಮಧ್ಯಾಹ್ನ ಆಫೀಸಿಗೆ ಕಾಫಿ ತಿಂಡಿ ತಗೊಂಡು ಹೋಗಿ ಅವರ ಸಾಹೇಬರಿಗೆ ಎಲೆಯಡಿಕೆಯನ್ನೂ ಕೂಡ ಮಡಿಸಿ ಕೊಟ್ಟು ಬರುತ್ತಾನಂತೆ; ಸಾಯಂಕಾಲ ಮಕ್ಕಳನ್ನು ಆಟಕ್ಕೆ ಕರೆದುಕೊಂಡು ಹೋಗುತ್ತಾನೆ, ರಾತ್ರಿ ಮನೆಯಲ್ಲಿ ಕಾವಲು ಕಾದುಕೊಂಡು ಮಲಗಿರುತ್ತಾನೆ.''

" ಸರ್ಕಾರದ ಸಂಬಳಕ್ಕಿಂತ ಇನ್ನೆರಡು ರೂಪಾಯಿ ಹೆಚ್ಚಾಗಿ ಕೊಟ್ಟರೆ ಎಂಥವರು ಬೇಕಾದರೂ ಬರುತ್ತಾರೆ! ''

" ಮತ್ತೆ ಅದೇ ಮಾತನಾಡುತೀರಲ್ಲ! ಅದನ್ನೂ ನೋಡಲಿಲ್ಲವೇ? ತಿಂಗಳಿಗೆ ಹತ್ತು ಹತ್ತು ರೂಪಾಯಿ ಕೊಟ್ಟು ಅಡಿಗೆಗೆ ಇಟ್ಟುಕೊಂಡಿದ್ದದ್ದಾಯಿತು! ಕೈಯಿಂದ ದುಡ್ಡು ಕೊಟ್ಟು ಕಷ್ಟ ಕೊಂಡುಕೊಳ್ಳಬೇಕು, ಅಷ್ಟೆ. ಅವರ ಕೈಯಲ್ಲಿ ಯಾರು ಬೆಂದಾರು! ಅವರಿಗೆ ಒಂದು ಮಾತಾಡಿದರೆ ಹೆಚ್ಚು, ಒಂದು ಮಾತಾಡಿದರೆ ಕಮ್ಮಿ. ಮೂರು ಮೂರು ದಿನಕ್ಕೆ ಓಡಿ ಹೋಗುತ್ತಾರೆ."

" ಎಲ್ಲವೂ ಕಷ್ಟವೇಯೆ, ಅದಕ್ಕೇನು ಮಾಡುವುದು? ಊಟ ಮಾಡುವುದು ಕಷ್ಟವಲ್ಲವೇ ? "

" ಅಯ್ಯೋ ಪಾಪ! ಮಾಡಿ ಹಾಕಿದರೆ ಊಟ ಮಾಡುವುದೂ ಕಷ್ಟ! ನೀವು ಆಗುವ ಹೊತ್ತಿಗೆ ಈ ಕಷ್ಟಪಡುತ್ತೀರಿ.''

* * * *

" ಸರಿಯಾಗಿ ಬಳಿದುಕೊಂಡು ಊಟ ಮಾಡುವುದಕ್ಕೇನು? ಎಲೆ ಎತ್ತುವವರು ಹೇಗೆ ಎತ್ತಬೇಕು? ದಾರಿಯುದ್ದಕ್ಕೂ ಎಂಜಲು ಜೋರಿಸಿಕೊಂಡು ಹೋಗಬೇಕೇ ? ''

" ಇನ್ನು ಬಳಿದರೆ ಕೈ ಬಾಯಿ ತುಂಬ ಬರೀ ಎಲೆ ಕಡ್ಡಿ ಇವೇ ಬರುತ್ತವೆ ! "

" ಆಗಲಿ ಹೋಗಿ, ಸಾಕು; ಇವೊತ್ತಿನ ಕಥೆ ಕಳೀತಲ್ಲ ! "

* * * *

" ಅದೇನು ಹುಡುಕುತ್ತಾ ಇದ್ದೀರಿ ? "

" ಬೆಲ್ಲ ಎಲ್ಲಿದೆ ? "

" ಬೆಲ್ಲ ಯಾಕೆ ? "

" ತಿನ್ನೋಕೆ ! "

" ಬೆಲ್ಲ ಯಾಕೆ ತಿನ್ನಬೇಕು, ಈಗ ತಾನೆ ಊಟಮಾಡಿ ಕೈಗೆ ನೀರು ಬಿಟ್ಟುಕೊಂಡು ? "

" ಇನ್ನೇನು ಮಾಡುವುದು ? ಹಣ್ಣಿಲ್ಲ, ಹಂಪಲಿಲ್ಲ, ಸೀಯಾಗಿ ಏನಾದರೂ ತಿಂಡಿಯಿಲ್ಲ."

" ಇನ್ನೂ ಊಟವಾಗುತಿದ್ದ ಹಾಗೇ, ತಿಂಡಿ ಯಾರು ಹುಡುಕಿ ಕೊಂಡು ಹೋಗುತ್ತಾರೆ, 'ಬಿರಿಯ ಉಂಡ ಬ್ರಾಹ್ಮಣ ಭಿಕ್ಷಕ್ಕೆ ಹೋದ' ಅಂತ? ಏನೋ ಬಾಯಿ ಚಪಲಕ್ಕೆ ಖಾರವಾಗಿ ಏನಾದರೂ ಹಾಕಿ ಕೊಳ್ಳುವವರು ಹಾಕಿಕೊಳ್ಳುತ್ತಾರೆ. ನಿಮಗೆ ಖಾರ ಎಂದರೆ ಆಗದು ! ಬೇಕಾದರೆ ಅಲ್ಲಿ ಇನ್ನೂ ಎರಡು ಸಂಡಿಗೆ ಇದೆ ತಗೊಳ್ಳಿ."

" ಅದು ಹಲ್ಲಿಗೇ ಹರಿಯುವುದಿಲ್ಲ."

" ಬೇಡದೆ ಹೋದರೆ ಹಾಗೇ, ಏನಾದರೂ ಒಂದೊಂದು ಆಕ್ಷೇಪಣೆ. ಈಸಲ ಮಾಡಿದ ಸಂಡಿಗೆ ಮಳೇಲಿ ನೆಂದು ಹೋಯ್ತು. ಸರಿಯಾಗಿ ಒಣಗಲಿಲ್ಲ ; ಕಲ್ಲಾಗಿಬಿಟ್ಟಿತು. ಊಟದ ಜೊತೆಗೆ ಏನಾದರೂ ಖಾರವಾಗಿರಲಿ ಅಂತ, ಇದ್ದ ಎರಡು ಮಿಳ್ಳೆ ಎಣ್ಣೆ ಹಾಕಿ ಹುರಿದೆ; ಅದು ಒಂದು ಕಡೆ ಸ್ವಲ್ಪ ಕಪ್ಪಾಯ್ತು ; ಇನ್ನೊಂದು ಕಡೆ ಬೆಳ್ಳಗಾಯ್ತು. ಅಂತೂ, ಇದು ಕಲ್ಲು ಅದು ಮಣ್ಣು, ಇದು ಬೆಂದಿಲ್ಲ ಅದು ಹೊತ್ತಿ ಹೋಯ್ತು, ಅದಕ್ಕೆ ಹುಳಿ ಹೆಚ್ಚು ಇದಕ್ಕೆ ಖಾರ ಹೆಚ್ಚು—ಹೀಗಂತ ಮೂರು ಹೊತ್ತೂ ಆಕ್ಷೇಪಣೆ ಮಾಡಿದ್ದೇ ಹೊರತು, ಇಷ್ಟು ಮಟ್ಟಿಗೆ ಮಾಡುತ್ತಾಳಲ್ಲ ಅಂತ ಒಂದು ದಿನವಾದರೂ ಸಂತೋಷಪಟ್ಟಿದ್ದಿಲ್ಲವೊ !

ಅದು ಬೇಡದಿದ್ದರೆ ಹೋಗಲಿ, ಎಲೆಯಡಕೆ ಹಾಕಿಕೊಳ್ಳುವುದು ತಾನೇ!"

"ಆಯಿಲೆ ಗೋಣಿ ಎಲೆ ಇದ್ದ ಹಾಗೆ ಇದೆ—ಕಹಿ, ಖಾರ. ಅದನ್ನು ಯಾರು ಮೆಯ್ಯಾರು!"

"ಇಲ್ಲ, ನಿಮಗೆ ಒಂದೊಂದು ಎಲೆ ಒಂದೊಂದು ಬಿಡಿಕಾಸಿನ ಅಗಲಕ್ಕೆ ಇರಬೇಕು; ಐವತ್ತೆಲೆ ಹಾಕಿಕೊಂಡರೂ ಒಂದು ಬಾಯಿಗೆ ಸಾಕಾಗಬಾರದು! ಅದರಲ್ಲಿ ರುಚಿಯಿರಬಾರದು, ರಸವಿರಬಾರದು!"

"ಹೋಗಲಿ, ಅದಾದರೂ ಎಲ್ಲಿದೆ?"

"ಎಲ್ಲಿರುತ್ತೆ? ಎಲ್ಲಾ ಇರುವ ಕಡೆಯೇ ಇವೆ. ಯಾವುದು ತಾನೇ ನಾವು ಇರುವ ಕಡೆಗೆ ಬರುತ್ತೆ? ಅದಕ್ಕೇನು ಕೈಕಾಲಿದೆಯೆ? ಬೇಕಾದವರು ಅದಿರುವ ಕಡೆಗೆ ಹುಡುಕಿಕೊಂಡು ಹೋಗಬೇಕು!... ನಾನು ಊಟ ಮಾಡಿಕೊಂಡು ಬರುವತನಕ ತಡೆದರೆ ಹುಡುಕಿ ಕೊಡುತ್ತೇನೆ."

"ಹೋಗಲಿ ಬಿಡು, ಅದೇ ಬೇಡ; ನಿನಗೆ ಯಾಕೆ ಕಷ್ಟ!"

"ಬೇಡವೆ ಇದ್ದರೆ ಬಿಡಿ! ಈಗ ಹೊರಟು ಹೋದರೆ ಸಂಜೆಯು ತನಕ ಹಾಯಾಗಿರಬಹುದಲ್ಲ!"

೧೯೪೩. ಶಾಮಣ್ಣ.

---

# ಗುರುಗಳ ಮಹಿಮೆ

"ಸ್ವಕರ್ಮಸೂತ್ರ ಗ್ರಥಿತೋ ಹಿ ಲೋಕಃ"—ಅಧ್ಯಾತ್ಮ ರಾಮಾಯಣ.

---

[ ಒಂದು ಸಂಸಾರದಲ್ಲಿ ಬರಿಯ ಹೆಣ್ಣು ಮಕ್ಕಳೇ ಇದ್ದರು. ತಾಯಿಗೆ ಒಂದಾದರೂ ಗಂಡುಮಗುವಾಗಲೆಂಬ ಆಸೆ ಇತ್ತು. ಅದು ನೆರವೇರದ್ದರಿಂದ, ಕಡೆಯ ಮಗಳು ಅಳಿಯ ಇವರನ್ನು ಮನೆಯಲ್ಲಿ ಇಟ್ಟುಕೊಂಡು, ಅಳಿಯನನ್ನೇ ಮಗನಂತೆ ಕಂಡುಕೊಂಡಿದ್ದರು. ಹೀಗಿರಲು, ಒಬ್ಬ ಗುರುಗಳು ಕೋರಿದ್ದನ್ನೆಲ್ಲಾ ಕೊಡುತ್ತಾರೆಂದು ಕೇಳಿ, ಅವರಲ್ಲಿ ಸೇವೆಮಾಡಿ, ಆಕೆ ತನಗೆ ಪುತ್ರಸಂತಾನವಾಗ ಬೇಕೆಂದು ಹಟ ಹಿಡಿದಳು. ಅವರು ಎಷ್ಟು ಬೇಡವೆಂದರೂ ಕೇಳಲಿಲ್ಲ. ಒಂದು ಹೋಗಿ ಒಂದಾಯಿತು. ತನ್ನ ಹೊಟ್ಟೆಯಲ್ಲೇ ಮಗುವಾಗುವುದಕ್ಕೆ ಬದಲು, ಮಗಳು ಒಂದು ಗಂಡು ಮಗುವನ್ನು ಹೆತ್ತು ತೀರಿಹೋದಳು; ಅದನ್ನು ಸಾಕಿ ಕೊಳ್ಳುವ ಭಾರ ಆಕೆಯ ಮೇಲೆ ಬಿತ್ತು. ಇದು ಕಥೆ.

ತಾಯಿಯ ಸಂಕಟ, ಗುರುಗಳ ಸಂತಯಿಕೆ, ಇವುಗಳ ಇರುಕಿನಲ್ಲಿ ಕಥೆ ಕಾಣುವುದು ಕಷ್ಟವಾದೀತೆಂದು ಅದರ ಸಂಗ್ರಹವನ್ನು ಕೊಟ್ಟಿದೆ.]

೧

"ಯಾಕೆ ತಾಯಿ, ಹೀಗೆ ಊರುಬಿಟ್ಟು ಸಂಸಾರಬಿಟ್ಟು ಇಲ್ಲಿ ತಿಂಗಳುಗಟ್ಟಲೆ ಒಪ್ಪತ್ತು ವನವಾಸ ಮಾಡಿಕೊಂಡು ನವೆಯುತ್ತಿದ್ದೀರಿ?"

"ನನಗೇನಿದೆ ಸಂಸಾರ? ಮಾಡಿಕೊಂಡು ಹೋಗುವವರು ಹೋಗುತಾರೆ!"

"ಅದೇಕೆ ತಾಯಿ ಹಾಗಂತೀರಿ? ತುಂಬಿದ ಸಂಸಾರ. ಗಂಡ, ಮಕ್ಕಳು, ಮೊಮ್ಮಕ್ಕಳು ಬೇಕಾದಹಾಗಿದ್ದಾರಲ್ಲ!"

"ಯಾರಿದ್ದರೇನು, ನನ್ನದು ಅನ್ನುವ ಪದಾರ್ಥ ಒಂದಿಲ್ಲ!"

"ಅವರೆಲ್ಲ ನಿಮ್ಮವರಲ್ಲವೇ?"

"ಆದಕ್ಕೇನು? ಪ್ರಪಂಚವೆಲ್ಲಾ ನನ್ನದೇ!"

"ಆಹಾ! ಅದು ಬಹು ದೊಡ್ಡ ಮಾತು! ಸತ್ಯವಾದ ಮಾತು!"

"ಸತ್ಯ ಅಂತ ಕಂಡುಬಂದ ಮೇಲೆ ತಾನೇ ಸತ್ಯ!"

"ಅಲ್ಲವೆ ಮತ್ತೆ!"

" ಕಂಡ ಕಂಡವರೆಲ್ಲ ಇಲ್ಲಿ ತುಂಬ ಸತ್ವ ಇದೆ ಎಂತ ಹೇಳಿದರು. ಅದಕ್ಕಾಗಿ ಬಂದಿದ್ದೇನೆ. ನನಗೂ ಸತ್ಯ ಕಂಡುಬಂದರೆ ತಾನೇ ಸತ್ಯ ?"

" ಅಡ್ಡಿ ಏನು ? ಹಾಗೆಂದು ಎಷ್ಟು ದಿವಸ ಮನೆ ಮಠ ಬಿಟ್ಟು ಇಲ್ಲಿರುತ್ತೀರಮ್ಮ ? "

" ನನ್ನ ಕೆಲಸವಾಗುವ ತನಕ."

" ಆಗುವ ಕೆಲಸ ಎಲ್ಲಿದ್ದರೂ ಆಗುತ್ತೆ ! "

" ಹಾಗಾದರೆ, ದೇವರು ಗುರುಗಳು, ಯಾತ್ರೆ ತೀರ್ಥ, ಸೇವೆ ಪೂಜೆ ಅಂತ ಯಾಕಾಯಿತು ? "

" ಎಲ್ಲಾ ಬರಿಯ ಭ್ರಾಂತಿ ತಾಯಿ ! "

" ಮತ್ತೆ, ಎಷ್ಟೋ ಜನ ನಾನು ಇಲ್ಲಿಗೆ ಬಂದಮೇಲೆ ಬಂದು, ತಮ್ಮ ತಮ್ಮ ಕೆಲಸ ನೆರವೇರಿತು ಅಂತ ಅವರವರ ಊರಿಗೆ ಹೋದ ರಲ್ಲ ? "

" ಅದು ಅವರವರ ಊರಿನಲ್ಲಿದ್ದರೇ ಆಗುತ್ತಿತ್ತು ! ಗಿಡದ ಮೇಲೆ ಹಣ್ಣಾಗುತ್ತಿದ್ದದ್ದನ್ನು ಇಲ್ಲಿಗೆ ತಂದು ಅಡೆ ಹಾಕಿಕೊಂಡು ಹೋದರು. ಅಷ್ಟೇಯೆ."

" ನಾನು ಊರಿನಲ್ಲಿದ್ದು ಮಾಡುವುದನ್ನೆಲ್ಲಾ ಮಾಡಿ ಮಾಡಿ ಸಾಕಾಯಿತು ; ಹೇಳಿದ ಕೇಳಿದ ವ್ರತವೆಲ್ಲಾ ಆಯಿತು, ನೋಮಿಯಾ ಯಿತು, ಪೂಜೆಯಾಯಿತು—ಏನೂ ಫಲವಾಗಲಿಲ್ಲ. ಅದಕ್ಕೋಸ್ಕರ, ನನ್ನ ಕೆಲಸವಾಗುವತನಕ—ಎಷ್ಟೇ ದಿನವಾಗಲಿ—ಇಲ್ಲೇ ಇದ್ದು ಬಿಡೋಣ ಅಂತ ಮನಸ್ಸು ಗಟ್ಟಿ ಮಾಡಿಕೊಂಡು ಬಂದುಬಿಟ್ಟಿದ್ದೇನೆ."

' ಅಗತ್ಯವಾಗಿ ಇರಿ ತಾಯಿ ! ನನಗೇನು ಭಾರ ! ದೇವರ ಸೇವೆ ಕೆಟ್ಟದೇ ? ಆದರೆ, ಮನಸ್ಸಿನ ತುಂಬ ಆಸೆ ತುಂಬಿಕೊಂಡು ಮಾಡಿದ ಸೇವೆ ಫಲಿಸುವುದಿಲ್ಲಮ್ಮ ! "

" ಇದು ಒಳ್ಳೆಯ ಚೆನ್ನಾಯಿತು ! ಸೇವೆ ಮಾಡುವುದೇ ಆಸೆ ಇಟ್ಟುಕೊಂಡಿರುವುದರಿಂದಲ್ಲವೇ ? ಆಸೆ ಇಲ್ಲದಿದ್ದರೆ ಯಾರು ದುಡಿಯು ತ್ತಿದ್ದರು ? "

" ನೀವು ಹೇಳುವುದು ನಿಜ. ಎಲ್ಲರೂ ದುಡಿಯುವುದು ಆಸೆ

ಯಿಟ್ಟುಕೊಂಡೇ. ಆ ದುಡಿತಕ್ಕೆ ಫಲವೇನೋ ಇರುತ್ತೆ. ಆದರೆ ತಮ್ಮ ಆಸೆಯೇ ನೆರವೇರುತ್ತೆ ಎಂಬ ಭರವಸೆ ಮಾತ್ರ ಹೇಳುವುದ ಕ್ಕಾಗುವುದಿಲ್ಲ!"

"ಈ ಮಾತು ಕೇಳುವುದಕ್ಕೇ ನಾನು ಇಲ್ಲಿಗೆ ಬಂದದ್ದು? ಇಷ್ಟು ದಿವಸ ಸೇವೆಮಾಡಿ? ಇದೇ ಸತ್ಯ?"

"ಸತ್ಯ ಇರುವುದೊಂದೇ ತಾಯಿ! ಯಾವಾಗಲೂ ಒಂದೇ. ಅದು ಬೇಡದವರಿಗೆ ಹಿತವಾಗಿರುವುದಿಲ್ಲ. ಮಿಥ್ಯ ಹಲವು ರೂಪ; ಹಿತ."

"ಸತ್ಯವೋ ಮಿಥ್ಯವೋ, ಹಿತವೋ ಅಹಿತವೋ ನಾನು ಈ ವೇದಾಂತಬೋಧೆಯನ್ನು ಕೇಳುವುದಕ್ಕಲ್ಲ ಇಲ್ಲಿಗೆ ಬಂದದ್ದು! ನನಗೆ ಅದು ಬೇಡ!"

"ಬೇಡ ಅಂದರೆ ಹೇಗೆ ತಾಯಿ? ಕೊನೆಗೆ ಎಲ್ಲರಿಗೂ ದೊರೆಯು ವುದು ಅದೇಯೆ; ನಾವು ಬೇಡವೆಂದರೂ ಅದು ಬಿಡುವ ಹಾಗಿಲ್ಲ."

"ಈಗಂತೂ ನನಗೆ ಇನ್ನ್ಯಾವುದೂ ಬೇಡ; ನಾನು ಮತ್ತೇನನ್ನೂ ಕೇಳುವುದಿಲ್ಲ."

"ಹಾಗಾದರೆ ನೀವು ಕೇಳುವುದೇನು?"

"ನಾನಾಗಲೇ ಹೇಳಿದೆನಲ್ಲ! ಮತ್ತೆ ಹೇಳಬೇಕೇ? ಇಲ್ಲಿಗೆ ಬಂದರೆ ಯಾರೂ ಯಾವುದನ್ನೂ ಕೇಳಲೇ ಬೇಕಾಗಿಲ್ಲ: ಗುರುಗಳ ದೃಷ್ಟಿ ಬಿದ್ದರೆ ಸಾಕು, ಕೆಲಸವಾಗಿಬಿಡುತ್ತದೆ; ಗುರುಗಳು ಯಾರೊಡ ನೆಯೂ ಮಾತೇ ಆಡುವುದಿಲ್ಲ—ಎಂದು ಹೇಳಿದ್ದರು!"

"ನಿಜ ತಾಯಿ! ನಾನು ಇದುವರೆಗೆ ಯಾರೊಡನೆಯೂ ಇಷ್ಟು ಮಾತನಾಡಿದ್ದಿಲ್ಲ. ಎಲ್ಲರೂ ಅವರವರ ಕೆಲಸಮಾಡಿಕೊಂಡು ಪ್ರಸಾದ ಪಡೆದು ಹೊರಟು ಹೋಗುತ್ತಿದ್ದರು. ನಾನು ಯಾರಿಗೆ ಏನು ಮಾಡಿದೆ? ಏನು ಮಾಡಬಲ್ಲೆ?"

"ಹಾಗಾದರೆ ನನ್ನ ಕೆಲಸ ಆಗುವುದಿಲ್ಲ ಎಂದು ಹೇಳುವುದಕ್ಕೆ ನನ್ನೊಡನೆ ಇಷ್ಟು ಮಾತನಾಡುತ್ತಿದ್ದೀರಾ?"

"ನಾನೇನು ಮಾಡಲಿ ತಾಯಿ? ಕೆಲಸವಾಗುವುದೂ ಬಿಡುವುದೂ ನನ್ನ ಅಧೀನವೇ?"

“ ಮತ್ತೆ ಯಾರ ಅಧೀನ ? ”

“ ಭಗವಂತನ ಅಧೀನ ! ”

“ ಅವನಿಂದಲೇ ಮಾಡಿಸಿಕೊಡಿ ! ”

“ ಅವನು ನನ್ನ ಅಧೀನವೇ ? ”

“ ಮತ್ತೆ ಯಾಕೆ ‘ ಗುರುಗಳು ’ ‘ ಗುರುಗಳು ’ ಎನ್ನುವುದು ? ”

“ ಅದು ಅವರವರ ವಿಶ್ವಾಸ, ಅಷ್ಟೇಯೆ ! ”

“ ಮತ್ತೆ ನನ್ನ ಸೇವೆಗೆ ಫಲವಿಲ್ಲವೇ ? ”

“ ಶ್ರಮಕ್ಕೆ ಫಲವಿಲ್ಲವೇ ? ಇದೆ. ಆದರೆ ಆಸೆ ಇಟ್ಟುಕೊಂಡು ಸೇವೆಮಾಡಿದರೆ ಇನ್ನೂ ಕರ್ಮ ಸುತ್ತುಹಾಕಿಕೊಳ್ಳುತ್ತೆ ಅಷ್ಟೆ. ”

“ ಹಾಕಿಕೊಂಡರೆ ಹಾಕಿಕೊಳ್ಳಲಿ ! ”

“ ಅದರಿಂದ ದೇವರಿಗೂ ತೊಡಕಾಗುತ್ತಮ್ಮ ! ”

“ ಆಗಲಿ ! ಅವನು ಸೇವೆಮಾಡಿಸಿಕೊಂಡದ್ದು ಸುಮ್ಮನೆಯೇ ? ”

“ ಹಾಗೆ ವ್ಯಾಪಾರಕ್ಕೆ ಹೊರಟರೆ ಅವನು ಕೋಮಟಿಯಾಗುತ್ತಾನೆ ! ”

“ ಆಗಲೇಳಿ ! ”

“ ನಿಮ್ಮ ಸೇವೆ ಸಾಲದು, ಜೊತೆಗೆ ಇನ್ನೇನಾದರೂ ಗಟ್ಟಿ ಸಾಮಾನು ಕೊಡಿ ಎಂದರೆ ? ”

“ ಕೊಡುವುದು ! ”

“ ಏನು ಕೊಡಬಲ್ಲಿರಿ ? ”

“ ಏನು ಬೇಕಾದರೂ. ”

“ ಏನು ಬೇಕಾದರೂ ಕೊಟ್ಟರೆ ಆಗುತ್ತೆಯೇನಮ್ಮ ? ನೀವು ಮಕ್ಕಳ ಫಲವನ್ನು ಕೇಳುತ್ತೀರಿ. ನಿಮಗೆ ಅದು ಸಲ್ಲುವಷ್ಟನ್ನು ದೇವರು ಕೊಟ್ಟುಬಿಟ್ಟಿದ್ದಾನೆ. ಈಗ ಒಬ್ಬ ಮಗನಾದರೆ ಅವನನ್ನು ದೇವರಿಗೆ ಬಿಟ್ಟುಬಿಡುತ್ತೀರಾ ? ”

“ ದೇವರಿಗೆ ಬಿಟ್ಟು ಬಿಡುವುದಕ್ಕೇ ಕೇಳುತ್ತಿರುವುದು ? ”

“ ಮತ್ತೇನು ಮಾಡೋಣವಮ್ಮ ? ದೇವರು ನಿಮಗೆ ಸಲ್ಲಬೇಕಾದ ಪಡಿಯನ್ನು ಅಳೆದು ಬಿಟ್ಟಿದ್ದಾನೆ ! ”

"ಇರುವುದರಲ್ಲಿಯೇ ಯಾವುದನ್ನಾದರೂ ಕೊಟ್ಟರಾಗದೇ?"

"ಇರುವ ಮಕ್ಕಳು ಯಾರನ್ನು ಕೊಡುತ್ತೀರಿ? ಅವರು ಈಗ ನಿಮ್ಮ ಸ್ವತ್ತೇ? ಅವರನ್ನೆಲ್ಲಾ ಆಗಲೇ ದಾನ ಮಾಡಿಬಿಟ್ಟಿಲ್ಲವೇ?"

"ದಾನ ಮಾಡಿದ್ದರೇನು? ಅವರು ನಮ್ಮ ಪದಾರ್ಥವಲ್ಲವೆ?"

"ಹೌದು; ಅಲ್ಲ."

"ಹಾಗಾದರೆ ನನ್ನ ಆಸೆ ನೆರವೇರುವುದಿಲ್ಲ ಅನ್ನಿ!—ನಾನು ಇಲ್ಲಿಯೇ ಇದ್ದು ದೇಹ ಕೊನೆಗಾಣಿಸುವುದೇ ಸರಿ! ನಾನು ಊರಿಗೆ ಹೋಗಿ ಆಗಬೇಕಾದದ್ದೇನು?"

"ಚೆನ್ನಾಗಿ ಯೋಚನೆಮಾಡಿ ಹೇಳಿ! ದುಡುಕಬೇಡಿ; ಆಮೇಲೆ ನೀವೂ ನಾನೂ ಇಬ್ಬರೂ ಪಶ್ಚಾತ್ತಾಪ ಪಡಬೇಕಾದೀತು!"

"ಈ ಹೆಣ್ಣುಮಕ್ಕಳಲ್ಲಿ ಒಬ್ಬರು ಇಲ್ಲದೆ ಇದ್ದರೂ ಚಿಂತೆಯಿರುತ್ತಿರಲಿಲ್ಲ. . . . ಒಂದು ಗಂಡು. . . ."

"ರಾಮ ರಾಮ! ಏಕಮ್ಮಾ ಹಾಗಂತೀರಿ? ಹೆಣ್ಣುಮಕ್ಕಳು ಮಕ್ಕಳಲ್ಲವೇ?"

"ಅವರೆಂಥ ಮಕ್ಕಳು! ಮಾಡಿಸಿಕೊಳ್ಳುವ ತನಕ ಮಾಡಿಸಿಕೊಳ್ಳುತ್ತಾರೆ; ಆಮೇಲೆ ಹೊರಟು ಹೋಗುತ್ತಾರೆ. ನಮ್ಮ ಸಮಯಕ್ಕೆ ಯಾರೂ ಇಲ್ಲ. ಮೊದಮೊದಲು ನಮ್ಮ ಮನೆಯಲ್ಲಿರುವಾಗ ಮಕ್ಕಳು, ಆಮೇಲೆ ಗಂಡನ ಮನೆಗೆ ಹೋದ ಮೇಲೆ ದೊಡ್ಡವರು! ಅವರವರ ಸಂಸಾರ ಅವರಿಗೆ. ಸೊಸೆಯರೇ?—ಮನೆಯಲ್ಲಿ ಬಿದ್ದಿರುತ್ತಾರೆ ಅನ್ನುವುದಕ್ಕೆ?"

"ಗಂಡುಮಕ್ಕಳಾದವರಿಗೆಲ್ಲಾ ಸೊಸೆಯರು ಬರುತ್ತಾರೆಯೇ? ಬಂದವರೆಲ್ಲರೂ ಜೊತೆಯಲ್ಲಿರುತ್ತಾರೆಯೇ? ಇದ್ದರೆ ಅವರಿಂದ ಸುಖವುಂಟೇ? ಅದೆಲ್ಲಾ ಋಣಾನುಬಂಧ ಅಮ್ಮ! ಯಾರಿಗೆ ಯಾರು?"

"ಇರುತ್ತಾರೆ ಅಂತ ಕೇಳುತ್ತಾರೋ, ಇರುವುದಿಲ್ಲ ಅಂತ ಕೇಳುತ್ತಾರೋ?"

"ಅದು ನಮ್ಮ ಇಷ್ಟವೇನಮ್ಮ?"

"ದೇವರ ಇಷ್ಟವೇ ಆಗಲಿ! ಅಟಕ್ಕೇ ಅವನನ್ನು ಕೇಳುವುದು;

ನಿತ ಕೊಡಿಸಿ ಅಂವ್ಮ್ಮನ್ನು ಕೇಳುವುದು. ಇಲ್ಲದಿದ್ದರೆ ಇಲ್ಲಿಗೆ ಯಾಕೆ ಬರಬೇಕಾಗಿತ್ತು ? "

" ದೇವರಾದರೂ ಹೊಸದಾಗಿ ಎಲ್ಲಿಂದ ತಂದು ಕೊಡುತ್ತಾನಮ್ಮ? ಇರುವುದರಲ್ಲೇ ಚೌಕಾಶಿ ಮಾಡುತ್ತಾನೆ, ಈಗ ಇದ್ದದ್ದು ಬೇಡವೆಂದರೆ! ತಲೆಯದನ್ನು ತೆಗೆದು ಕಾಲಿಗೆ ಹಾಕುತ್ತಾನೆ, ಕಾಲಿನದನ್ನು ತೆಗೆದು ತಲೆಗೆ ಹಾಕುತ್ತಾನೆ. ಆಗ ಅವಲಕ್ಷಣವಾಗುತ್ತದೆ, ಎಡವಟ್ಟಾಗುತ್ತದೆ. ನಾವು ಅದಕ್ಕೂ ಆಕ್ಷೇಪಿಸುತ್ತೇವೆ."

" ನನಗೆ ಈ ವೇದಾಂತ ಬೇಕಾಗಿಲ್ಲ ; ನನ್ನ ಕೋರಿಕೆ ನನ್ನದು. ಏನಾದರೂ ಆಗಲಿ ! "

" ಭಗವಂತ, ನಿನ್ನ ಸಂಕಲ್ಪ ಹೀಗೂ ಇದೆಯೇ ? ಈ ಪಾಪಕ್ಕೆ ನನ್ನನ್ನು ಗುರಿಮಾಡಬೇಕೇ ? ನಿನ್ನ ಇಚ್ಛೆ ! ಆಗಲಿ.—ತಗೊಳ್ಳಿ ಅಮ್ಮ, ಈ ಬಟ್ಟಲಲ್ಲಿರುವ ಕುಂಕುಮ ಇಟ್ಟುಕೊಳ್ಳಿ. ಮುಂದಿನ ವರ್ಷ ಮಗನನ್ನೆತ್ತಿಕೊಂಡು ದೇವರ ದರ್ಶನಕ್ಕೆ ಬನ್ನಿ."

೨

" ಏನು ತಾಯಿಾ, ಮಗನನ್ನ ಎತ್ತಿಕೊಂಡು ಬಂದಿರಾ ? ಬನ್ನಿ."

" ಅಯ್ಯೋ, ಆ ಪುಣ್ಯವೆಲ್ಲಿ ಬಂತು !"

" ಇದು ಯಾವುದು ಮತ್ತೆ! "

" ಇದೊಂದು ತಬ್ಬಲಿ ಮಗು ; ತಾಯಿ ಇಲ್ಲದ ಮಗು ! "

" ಯಾಕೆ ? ನೀವಿದ್ದೀರಲ್ಲಾ, ನೀವೇ ತಾಯಿ ! "

" ಇದು ನನ್ನದಲ್ಲಪ್ಪ, ನನ್ನ ಮಗಳದು ! ಅವಳು ಇದನ್ನೂ ನನ್ನನ್ನೂ ತಬ್ಬಲಿಮಾಡಿ ಹೋದಳು ! "

" ಅದನ್ನೂ ತಬ್ಬಲಿಮಾಡಲಿಲ್ಲ, ನಿಮ್ಮನ್ನೂ ತಬ್ಬಲಿಮಾಡಲಿಲ್ಲ. ಅದಕ್ಕೆ ನೀವು ದಿಕ್ಕು, ನಿಮಗೆ ಅದು ದಿಕ್ಕು ! "

" ಇದನ್ನೇ ನಾನು ಕೇಳಿದ್ದು ? "

" ಮತ್ತೇನನ್ನ ? ಮಗನನ್ನ ಕೇಳಿದಿರಿ; ದೇವರು ಮಗನನ್ನ ಕೊಟ್ಟ ! "

"ಮಗಳು ಹೋಗಿ, ತಬ್ಬಲಿ-ಮಗುವನ್ನು ಸಾಕಿಕೊ ಎಂತಲೇ ? "

" ಅದನ್ನೂ ನೀವು ಕೇಳಿದಿರಲ್ಲಮ್ಮ! ಹೆಣ್ಣು ಮಕ್ಕಳಲ್ಲಿ ಒಬ್ಬರು ಇಲ್ಲದೆಯಾದರೂ ಒಂದು ಗಂಡು ಮಗುವಾಗಬಾರದೇ ಎಂದು ಕೇಳಲಿಲ್ಲವೇ ?"

" ಏನೋ ಹಾಗೆಂದುಕೊಂಡೆ! ಹಾಗೆಂದುಕೊಂಡಾಕ್ಷಣ ಅವಳ ಸತ್ತೇ ಹೋಗಲಿ ಅಂತ ನನ್ನ ಮನಸ್ಸಿನಲ್ಲಿತ್ತೇ ? "

" ಅದೇ ಕೇಳಿದ್ದು ; ಅದನ್ನೇ ದೇವರು ಕೊಟ್ಟದ್ದು."

" ತಾಯಿ ಸತ್ತ ಯಾವುದೋ ತಬ್ಬಲಿ ಮಗು ನನ್ನದಾಗುತ್ತದೆಯೇ? ಈ ವಯಸ್ಸಿನಲ್ಲಿ ಇದನ್ನು ಬೇರೆ ಕಟ್ಟಿಕೊಂಡು ಗೋಳಾಡಲೇ?"

" ಮತ್ತೆ, ದೇವರು ತಾನೇ ಏನು ಮಾಡುತಾನಮ್ಮ? ಹೂವಿಲ್ಲದ ಮರ ಹಣ್ಣು ಹೇಗೆ ಬಿಟ್ಟೀತು? ಹೆತ್ತ ಮಗುವಲ್ಲ, ಸಾಕುಮಗು! ಯಾವುದಾದರೇನು? ಮೊಮ್ಮಗು ಮನೆಯ ಮಗುವಲ್ಲವೇ ? ಮೊಮ್ಮಕ್ಕಳನ್ನು ದತ್ತು ಕೂಡ ತೆಗೆದುಕೊಳ್ಳುವುದಿಲ್ಲವೇ ? "

" ಸಾಕು ಈ ಧರ್ಮಶಾಸ್ತ್ರ! ಈ ಮಗುವನ್ನು ನಾನು ನೋಡಲಾರೆ ; ಇದನ್ನು ಯಾರಾದರೂ ಸಾಕಿಕೊಳ್ಳಲಿ; ನಿಮ್ಮ ಮಠಕ್ಕೆ ಇಟ್ಟುಕೊಳ್ಳಿ! ನನ್ನ ಮಗಳನ್ನು ನನಗೆ ಕೊಡಿ. ಅವಳನ್ನು ನಾನು ಮಗಳು ಅಂತ ಸಾಕಿದ್ದೆನೇ? ಮಗಳು ಬೇರೆ ಅಲ್ಲ ಮಗ ಬೇರೆ ಅಲ್ಲ ಅಂತ ಸಾಕಿದ್ದೆನಲ್ಲ!"

" ಹೌದಮ್ಮ, ಅದಕ್ಕೆ ಯಾರೇನು ಮಾಡುತ್ತಾರೆ? ತಾಯಿ ಸತ್ತ ಮಗುವನ್ನು ಅಜ್ಜಿಗಿಂತ ಮತ್ತಾರು ಅಭಿಮಾನದಿಂದ ಸಾಕುತ್ತಾರೆ? ಮತ್ತೆ ಯಾರಿಗೆ ಬೇಕು? ಆ ಮಗುವನ್ನು ಇಟ್ಟುಕೊಂಡು ನಾನೇನು ಮಾಡಲಿ, ಪರದೇಶಿ ? "

" ಬೇಡ, ನನಗೆ ಬೇಕಾಗಿಲ್ಲ ; ನನ್ನ ಮಗಳು ನನಗೆ ಬೇಕು ! "

" ಏನು ಹುಚ್ಚಮ್ಮಾ ಇದು? ಈಗ ನಿಮ್ಮ ಮಗಳು ಬಂದರೆ ಭೂತದ ಹಾಗೆ ಬಂದಾಳು, ಪ್ರೇತದ ಹಾಗೆ ಬಂದಾಳು ; ಮೊದಲಿನ ಹಾಗೆ ಬಂದಾಳೇ? ಬಂದರೆ ನೀವೇ ಹೆದರಿಕೊಂಡೀರಿ ; ' ಈ ದೆವ್ವವನ್ನು ಓಡಿಸಿ ' ಎಂದು ಓಡಿಬಂದೀರಿ! ಬೇಡಿ ತಾಯಿ, ಬೇಡಿ. ಈ ದುಃಖದಲ್ಲಿ ನಿಮಗೆ ಹಾಗೆನ್ನಿಸುತ್ತದೆ. ಆಮೇಲೆ ಸರಿಹೋಗುತ್ತದೆ.

ನಾವು ಯಾವುದಕ್ಕೂ ಆಸೆಪಡಬಾರದು ; ದೇವರನ್ನು ಇದು ಕೊಡು ಅಂತ ಕೇಳುವುದಕ್ಕೆ ಹೋಗಬಾರದು ; ಅವನು ಕೊಟ್ಟಿದ್ದನ್ನು ಪ್ರಸಾದ ವಾಗಿ ಸಂತೋಷದಿಂದ ಸಮಾಧಾನದಿಂದ ತೆಗೆದುಕೊಳ್ಳಬೇಕು-ಎಂದು ನಾನು ಹೋದ ವರ್ಷವೇ ಹೇಳಲಿಲ್ಲವೇ? ಬೇಡಿ. ಒಂದುಸಾರಿ ಆಸೆ ಪಟ್ಟು ಕೇಳಿ, ಎಡವಟ್ಟಾಯಿತು. ಇನ್ನೊಂದುಸಾರಿ ಆಸೆಪಡಬೇಡಿ. ಭಗವಂತನ ಸಂಕಲ್ಪದಲ್ಲಿ,, ಕಾರ್ಯಕ್ರಮದಲ್ಲಿ, ಏನೇನು ಹೇಗೆ ಹೇಗೆ ನಡೆಯಬೇಕೆಂದಿದೆಯೋ ಅದು ಹಾಗೆ ಹಾಗೆ ನಡೆಯಲಿ. ಅವನೂ ತನ್ನ ಯಂತ್ರದಲ್ಲಿ ಒಂದು ಕಡೆಯ ಕೀಲನ್ನು ಕಿತ್ತುತಾನೇ ಇನ್ನೊಂದು ಕಡೆಗೆ ಹಾಕಬೇಕು.—ಇರುವುದು ಸರಿಯಾಗಿಲ್ಲ, ವ್ಯತ್ಯಾಸವಾಗಲೇ ಬೇಕು ಎಂದರೆ ? "

" ಇಂಥ ಮಗನ ಪ್ರಾಪ್ತಿಯೇ ನನಗೆ ಇದ್ದರೆ, ಅದು ಮೊದಲೇ ಆಗಬಹುದಾಗಿತ್ತಲ್ಲ ! "

" ಅಂಥ ಮಗನೂ ಇದ್ದನಲ್ಲಮ್ಮಾ ! "

" ಇರಲಿಲ್ಲವಲ್ಲಾ ! ಆದಕ್ಕೆತಾನೇ ಬಂದು ಇಲ್ಲಿ ದೇಹ ತೆಯ್ದುದ್ದು! "

" ಮನೆಯಲ್ಲಿಯೇ, ಬೆಳೆದ ಮಗನೇ ಇದ್ದನಲ್ಲಾ, ಏನು ಹೀಗೆ ನ್ನುತ್ತೀರಿ ? "

" ಎಲ್ಲಿ ? ಯಾರು ? "

" ನಿಮ್ಮ ಅಳಿಯ ! "

" ಚೆನ್ನಾಯಿತು ! ಈ ಯುಕ್ತಿಯ ಮಾತನ್ನು ಕೇಳುವುದಕ್ಕೇ ಇಲ್ಲಿಗೆ ಬಂದದ್ದು? ಅಳಿಯ ಮಗನಲ್ಲ, ಸೊಸೆ ಮಗಳಲ್ಲ—ಎಂದು ಕೇಳಿಲ್ಲವೇ ? "

" ಅವನನ್ನ ಮೆಚ್ಚಿ ಆರಿಸಿ ತಂದಿರಿ. ಮನೆಯಲ್ಲಿಯೇ ಇರುವ ಅಳಿಯನಾಗಬೇಕೆಂದು ತಾಯಿ ತಂದೆ ಇಲ್ಲದ ಹುಡುಗನನ್ನು ನೋಡಿ ಕೊಟ್ಟಿರಿ. ಮನೆಯಲ್ಲಿ ಮಗನಿಗಿಂತ ಹೆಚ್ಚಾಗಿ ಸಾಕಿ ಸಲಹಿದಿರಿ. ಅವನೂ ಒಳ್ಳೆಯ ಹುಡುಗನೆನಿಸಿಕೊಂಡ. ಇನ್ನು ಯಾವ ಮಗ ಅದಕ್ಕಿಂತ ಹೆಚ್ಚು ವಿಶ್ವಾಸವನ್ನು •ತೋರಿಸಿಯಾನು ? ಎಷ್ಟೋ ಜನ,

ತಿಳಿಯದವರು, ಅವನನ್ನು ನಿಮ್ಮ ಮಗನೆಂದೇ ಮಾಡಿಕೊಂಡಿದ್ದಾರೆ, ಮಗಳನ್ನು ಸೊಸೆ ಎಂದುಕೊಂಡಿದ್ದಾರೆ!"

"ಹಾಗಿದ್ದರೆ, ಆ ಮಗ ಬೇಡ, ಈ ಮಗ ಹುಟ್ಟಲಿ ಎಂದು ಕೇಳಿದೆನೇ?"

"ಹಾಗೇ ಆಯಿತು!"

"ಅದು ಹೇಗೆ?"

"ಅಳಿಯನೇ ಹೋಗಬೇಕಾಗಿತ್ತು, ಅವನಿಗೆ ಬದಲು ಮಗಳು ಹೋದಳು."

"ಅಳಿಯ ಏಕೆ ಹೋಗಬೇಕಾಗಿತ್ತು?"

"ಅವನ ಕರ್ಮ!"

"ಅವನೇನು ಕರ್ಮ ಮಾಡಿದ್ದ?"

"ಹಿಂದೇನು ಮಾಡಿದ್ದನೋ ಬಿಟ್ಟಿದ್ದನೋ, ಈಗ ನಿಮ್ಮ ಕಣ್ಣೆದುರಿಗೇ ಮಾಡಲಿಲ್ಲವೇ? ಮಾಡುತ್ತಿಲ್ಲವೇ? ನಗುತ್ತ ನಗುತ್ತ ಮಾಡಿದ್ದನ್ನ ಅಳುತ್ತ ಅಳುತ್ತ ಅನುಭವಿಸಬೇಕು!"

"ಅಂಥ ಪಾಪದ ಕೆಲಸ ಅವನೇನೂ ಮಾಡುತ್ತಿಲ್ಲವಲ್ಲಪ್ಪ! ಅವನೇನು ಪೋಲೀಸಿನವನಲ್ಲ ಜಡ್ಜಿಯಲ್ಲ; ಕಳ್ಳನಲ್ಲ ಕಾಕನಲ್ಲ—ಒಬ್ಬರನ್ನ ಹೊಡೆದವನಲ್ಲ, ಹಿಂಸಿಸಿದವನಲ್ಲ; ಮತ್ತೊಬ್ಬರೊಡನೆ ಗಟ್ಟಿಯಾಗಿ ಮಾತನಾಡಿದವನಲ್ಲ!"

"ನಿಜ, ಅದಕ್ಕೋಸ್ಕರವೇ ಅವನು ಒಳ್ಳೆಯ ಹುಡುಗ ಅಂದಿದ್ದು; ಎಲ್ಲರೂ ಅನ್ನುತ್ತಿರುವುದು!—ಅಯ್ಯೋ ಮಗು ಅಳುತ್ತಿದೆ, ಕರೆದುಕೊಳ್ಳಿ ಸಮದಾಯಿಸಿ!"

"ತಾಯಿ ಇಲ್ಲದ ತಬ್ಬಲಿಯನ್ನ ನಾನು ಏನು ಸಮದಾಯಿಸಲಪ್ಪ! ಮಕ್ಕಳನ್ನು ಎತ್ತಿ ಅಭ್ಯಾಸ ಕೂಡ ತಪ್ಪಿಹೋಗಿದೆಯಲ್ಲ!"

"ಕರೆದುಕೊಳ್ಳಿ, ಅಭ್ಯಾಸವಾಗುತ್ತದೆ; ಈಗ ನೀವು ಎತ್ತಿಕೊಳ್ಳಿ, ನೋಡಿ, ಸುಮ್ಮನಾಗುತ್ತದೆ! ಅದಕ್ಕೆ ನೀವೇ ತಾಯಿ ಎಂಬ ಬುದ್ಧಿ ಇದೆ; ಅದು ನಿಮ್ಮ ಮಗು ಅಂತ ಜ್ಞಾನವನ್ನು ನೀವು ತಂದುಕೊಳ್ಳಬೇಕು—ಹಾಗಾದರೆ ದೇವರ ಸಂಕಲ್ಪ ನೆರವೇರುತ್ತದೆ."

"ಸ್ವಲ್ಪ ಹಾಲಿದ್ದರೆ ತರಿಸಿಕೊಡಿ, ಹಾಕಿ ನೋಡುತ್ತೇನೆ."

"ಭಿಕಾರಿಯ ಹತ್ತಿರ ಹಾಲೆಲ್ಲಿ ಬರಬೇಕಮ್ಮ! ತಗೊಳ್ಳಿ, ಈ ತೀರ್ಥ ತಗೊಳ್ಳಿ! ಏಳಿ, ಎದ್ದು ಬನ್ನಿ, ತಗೊಳ್ಳಿ!—ಹಾಗೇ! ಕುಡಿಯಿರಿ; ಮಗುವಿಗೂ ಕುಡಿಸಿ; ಅದೇ ಹಾಲಾಗುತ್ತದೆ. ಈಗ ಮಗುವನ್ನು ಕರೆದುಕೊಳ್ಳಿ; ಸಮಾಧಾನಮಾಡಿ. ನಿಮ್ಮ ಮಗಳಿಗೆ ಹೇಗೋ, ನಿಮ್ಮ ಅಳಿಯನಿಗೆ ಹೇಗೋ, ಈ ಮಗುವಿಗೂ ಹಾಗೆ, ಅದಕ್ಕಿಂತ ಇನ್ನೂ ಹೆಚ್ಚಾಗಿ, ನೀವು ತಾಯಿ!............ಮೊದಲು ನೀವು ಸಮಾಧಾನ ಮಾಡಿಕೊಳ್ಳಿ! ಮಗುವನ್ನು ಸ್ವಲ್ಪ ತಟ್ಟಿ! ನೋಡಿ, ಈಗ ಅದಕ್ಕೆ ಸಮಾಧಾನವಾಯಿತು. ಇನ್ನು ನಿದ್ರೆಮಾಡುತ್ತದೆ. ನೀವು ಸಮಾಧಾನಮಾಡಿಕೊಂಡರೆ, ಅದಕ್ಕೆ ಸಮಾಧಾನವಾಗುತ್ತದೆ. ನಾನು ಸಮಾಧಾನವಾಗಿದ್ದರೆ, ನೀವು ಸಮಾಧಾನವಾಗುತ್ತೀರಿ! ಎಲ್ಲಿ ಈಗ ಕೇಳಿ, ಏನೋ ಹೇಳುತ್ತಿದ್ದಿರಲ್ಲ!"

"ಏನು ಹೇಳುತ್ತಿದ್ದೆ?"

"ಮಗು ಅಳುವುದಕ್ಕೆ ಮೊದಲುಮಾಡಿದಾಗ ಏನೇನೋ ಹೇಳಿಕೊಂಡು ಗೋಳಾಡುತ್ತಿದ್ದಿರಲ್ಲ!........ಇಲ್ಲಿಗೆ ಬಂದು ನನ್ನನ್ನು ಏನು ಕೇಳಬೇಕೆಂದಿದ್ದಿರಿ?"

"ನನ್ನ ಮಗಳು ಯಾಕೆ ಸತ್ತಳು ಅಂತ!"

"ಏಕೆ ಅಂತ ಹೇಳಲಿ! ಎಷ್ಟೋ ದಾರಗಳು ಗೋಜಿ, ಗಂಟು ಬಿದ್ದಿತ್ತು. ಅದನ್ನು ಬಿಡಿಸಲು ಹೋಗಿ ಒಂದು ದಾರ ಕಿತ್ತುಹೋಯಿತು!"

"ಇಲ್ಲಿ ದಾರವೇನು ಬಂತು, ಹಗ್ಗ!"

"ಅದೇ ಕರ್ಮಸೂತ್ರ ಅನ್ನುವುದು!"

"ಹಾಗೆಂದರೆ?"

"ಅದನ್ನೂ ನನ್ನ ಬಾಯಲ್ಲಿ ಹೊರಡಿಸಬೇಕೆ?—ಮಾಡಿದವರ ಪಾಪ ಆಡಿದವರ ಬಾಯಲ್ಲಿ ಅಂತ! ಅದೆಲ್ಲಾ ಏಕೆ? ಮುಖ್ಯವಾಗಿ ಭಗವತ್ಸಂಕಲ್ಪ ಅಂತ ಇಟ್ಟುಕೊಳ್ಳಿ!"

"ಒಳ್ಳೆಯ ಭಗವತ್ಸಂಕಲ್ಪವಾಯಿತಲ್ಲ! ಎಲ್ಲದಕ್ಕೂ ಭಗವತ್ಸಂ

ಕಲ್ಪ, ಭಗವತ್ಸಂಕಲ್ಪ! ಆ ಹಾಳು ಭಗವಂತ ಎಲ್ಲಿ ಮೂಗು ಹಿಡಿದು ಕೊಂಡು ಕೂತಿದ್ದಾನೋ ಕಾಣೆನಲ್ಲ!"

"ಹೌದು ತಾಯಿ! ಭಗವತ್ಸಂಕಲ್ಪವಿಲ್ಲದೆ ಒಂದು ಹುಲ್ಲು ಎಸಳೂ ಅಲುಗಾಡುವುದಿಲ್ಲ!"

"ನನಗೆ ಅದು ಅರ್ಥವಾಗುವುದಿಲ್ಲ, ನನಗೆ ತಿಳಿಯುವಂಥ ಮಾತೇನಾದರೂ ಇದ್ದರೆ ಹೇಳಿ!"

"ಆಗಲಿ! ನಿಮ್ಮ ಮಗಳು, ಗಂಡನಿಗಾಗಿ ತನ್ನ ಜೀವ ತೆತ್ತಳು!"

"ಇದಕ್ಕೇ ಅವನಿಗೆ ಹೆಣ್ಣು ಕೊಟ್ಟು ಮನೆಯಲ್ಲಿ ಸಾಕಿ ಕೊಂಡದ್ದು?"

"ಮತ್ತೊಬ್ಬರಿಗೆ, ಅದರಲ್ಲಿಯೂ ತನ್ನ ಗಂಡನಿಗೆ, ತನ್ನ ಪ್ರಾಣ ಕ್ಕಿಂತ ಮತ್ತೇನನ್ನು ಕೊಡಬಹುದು? ಆಕೆ ಇರುವ ತನಕ ಪ್ರೇಮ ವನ್ನು ಕೊಟ್ಟಳು, ಕೊನೆಗೆ ಪ್ರಾಣವನ್ನು ಕೊಟ್ಟಳು! ಅದು ತಲೆಕೆಳ ಕಾಗಿ, ಅವಳು ಮನೆಯಲ್ಲಿ ಗೋಳಾಡುತ್ತಾ ಅವಳನ್ನು ನೋಡಿ ನೀವು ಕೊರಗುತ್ತಾ, ಕೊಟ್ಟವರು ತಂದವರು, ನೆರೆಯವರು ಹೊರೆಯವರು, ಕಂಡವರು ಕೇಳಿದವರು, ಹೋದವರು ಬಂದವರು ಎಲ್ಲರೂ ಅವಳನ್ನು ಶಪಿಸುತ್ತ, ಮನೆಹಾಳಿ ಎಂದು ಮೂತಿಮೂತಿ ತಿವಿಯುತ್ತ, ಇದ್ದಿದ್ದರೆ ಅದನ್ನು ನೋಡಿ ನೀವು ಸಹಿಸುತ್ತಿದ್ದಿರಾ?"

"ಏನೋ! ಏನು ಮಾಡುತ್ತಿದ್ದೆನೋ?"

"ರಾಮ ರಾಮ! ಆ ದುಃಖ ಯಾರಿಗೂ ಬೇಡ; ನಮ್ಮ ಜನ ದಲ್ಲಿ ಮನೆ ತಪ್ಪಿದ ಹೆಣ್ಣು ಮಕ್ಕಳು ಪಡುವ ಪಾಡು ಯಾರುಯಾ ರಿಗೂ ಬೇಡ! ಈಗಿಗಿಂತಲೂ ಆಗ ಹೆಚ್ಚು ದುಃಖಪಡುತ್ತಿದ್ದಿರಿ! ನಿಮ್ಮ ಜೊತೆಗೆ ಆ ಹುಡುಗಿಯೂ ನಿಮಗಿಂತ ನೂರರಷ್ಟು ದುಃಖಪಡುತ್ತಿ ದ್ದಳು; ಹುಟ್ಟಿದ ಮೇಲೆ, ಎಲ್ಲರೂ ಸಾಯಲೇಬೇಕು; ಕೆಲವರು ಹಿಂಚು, ಕೆಲವರು ಮುಂಚು; ಆಕೆ ಅರಿಸಿನ ಕುಂಕುಮ ಇಟ್ಟುಕೊಂಡು, ಇರುವ ತನಕ ಎಲ್ಲರ ಕೈಯಲ್ಲೂ ಒಳ್ಳೆಯವಳೆನಿಸಿಕೊಂಡು, ಹೋದಳು. ಆ ಪುಣ್ಯ ಎಲ್ಲರಿಗೂ ಎಲ್ಲಿ ಬರುತ್ತೆ?"

"ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಹೋಗಬೇಕೇ? ಬಾಳಲಿಲ್ಲ, ಬದುಕಲಿಲ್ಲ!"

"ಇನ್ನೂ ಬದುಕಿದ್ದಿದ್ದರೆ, ಅವಳೇನೇನು ಕಷ್ಟ ನೋಡಬೇಕಾಗಿತ್ತೋ, ನೀವೇನೇನು ಕಷ್ಟ ನೋಡಬೇಕಾಗಿತ್ತೋ! ಯಾರು ಬಲ್ಲರು?"

"ಬದುಕುವುದು ಕಷ್ಟಪಡುವುದಕ್ಕೇ?"

"ಮತ್ತೇತಕ್ಕಮ್ಮ? ಸಂಸಾರದಲ್ಲಿ ಕಷ್ಟವಲ್ಲದೆ ಮತ್ತೇನಿದೆ!"

"ಎಷ್ಟೋ ಜನ ಸುಖವಾಗಿಲ್ಲವೇ?"

"ಇದ್ದಾರೆ: ಎಷ್ಟೆಷ್ಟು ಜನರ ಸುಖವನ್ನು ದೋಚಿಹಾಕಿಕೊಂಡು ಒಬ್ಬೊಬ್ಬರು ಅನುಭವಿಸುತ್ತಾರೆಯೋ ನಿಮಗೆ ಗೊತ್ತೇ? ಇದರ ಮೇಲೆ ಯಾವ ಹುತ್ತದಲ್ಲಿ ಎಂಥ ಹಾವೋ!"

"ತನ್ನ ಗಂಡನಿಗಾಗಿ ಏಕೆ ಜೀವ ತೆರಬೇಕಾಗಿತ್ತು? ಅವನು ಮಾಡಿದ ಪಾಪವೇನು? ಅವನು ಯಾರ ಸುಖವನ್ನು ಕಿತ್ತುಕೊಂಡಿದ್ದಾನೆ? ಯಾರಿಗೆ ಅನ್ಯಾಯ ಮಾಡಿದ್ದಾನೆ? ಅವನಿಗೆ ಇರುವುದು ಒಂದು ಮೇಷ್ಟರ ಕೆಲಸ. ಅದರಲ್ಲೇನು ವಂಚನೆಯೇ ಮೋಸವೇ, ಸುಳ್ಳೇ ತಟವಟವೇ, ಲಂಚವೇ ರುಷುವತ್ತೇ, ಏನೂ ಇಲ್ಲವಲ್ಲ! ಹಾಕಿದ ಹಿಟ್ಟು ಹುಯಿದ ಗಂಜಿ ಅಂತ ಸರ್ಕಾರದವರು ತಾವಾಗಿ ಕೊಟ್ಟ ಸಂಬಳವೆಷ್ಟೋ ಅಷ್ಟು. ಅದರಲ್ಲೇನು ಅವನು ಮಾಡಿದ್ದು ಕರ್ಮ?"

"ನೀವು ಹೇಳುವುದು ನಿಜ ಅಮ್ಮ; ಆದರೆ ಅವರು ಹೇಳುವ ಪಾಠ ಏನು ಗೊತ್ತೇ? ಪಾಠ ಹೇಳುವಾಗ ಮಾಡುವ ಕೆಲಸವೇನು ಗೊತ್ತೇ?"

"ನನಗೇನು ಗೊತ್ತು? ಏನೋ ಬಿ.ಎ. ಆದ ಮೇಲೆ ಕಲ್ಕತ್ತಕ್ಕೆ ಹೋಗಿ ಎರಡು ವರ್ಷ ಓದಿಕೊಂಡು ಬಂದ, ಇಲ್ಲಿ ಕೆಲಸಕ್ಕೆ ಸೇರಿದ!"

"ನಿಮಗೆ ಇನ್ನೇನು ಗೊತ್ತು ಪಾಪ! ಅವರು ಅಲ್ಲಿ ಓದಿದಾಗ, ಇಲ್ಲಿ ಪಾಠ ಹೇಳುವಾಗ, ನಿತ್ಯವೂ ಪ್ರಾಣಿಗಳನ್ನು ಕೊಲ್ಲಬೇಕು, ಕುಯ್ಯಬೇಕು, ಕತ್ತರಿಸಬೇಕು . . ."

"ರಾಮ ರಾಮ!"

"ಹೌದಮ್ಮ, ಕೇಳಿ ಬೇಕಾದರೆ! ಅವುಗಳ ಫಲವೆಲ್ಲಾ ಎಲ್ಲಿ ಹೋಗಬೇಕು?"

" ಹಾಗಾದರೆ ಆ ಪಾಠ ಇನ್ಯಾರೂ ಹೇಳುವುದೆ ಇಲ್ಲವೇ? ಅವರಿಗೆಲ್ಲಾ ಹೀಗೇ ಆಗುತ್ತದೆಯೇ? ಕಟುಕರು ನಿತ್ಯ ಹಸು ಕೊಲ್ಲುತ್ತಾರಲ್ಲ, ಅದನ್ನು ತಿನ್ನುವವರು ನಿತ್ಯ ತಿನ್ನುತ್ತಾರಲ್ಲ, ಅವರಿಗೆಲ್ಲಾ ಹೀಗೇ ಆಗುತ್ತದೆಯೇ?"

" ಅದು ಯಾರಿಗೆ ಒಗ್ಗುತ್ತದೆಯೋ ಅವರಿಗೆ ಒಗ್ಗುತ್ತದೆ. ಅಲ್ಲದೆ, ಯಾರು ಯಾರು, ಏನೇನು ಪಾಪದ ಫಲವನ್ನು, ಎಂದೆಂದು, ಯಾವ ಯಾವ ರೀತಿಯಲ್ಲಿ ಉಣ್ಣುತ್ತಾರೆಯೋ ನನಗೆ ನಿಮಗೆ ಕಾಣುತ್ತದೆಯೇ ತಾಯಿ?"

" ಅವನು ಮಾಡಿದ ಕರ್ಮಕ್ಕೆ ಅವಳೇಕೆ ಸಾಯಬೇಕು?"

" ಎಷ್ಟೋ ದಿನ ಸಂಜೆ ಮನೆಗೆ ಬಂದು, ಆತ ತಲೆ ಹಿಡಿಯುತ್ತದೆಂದು ಮಲಗಿಬಿಡುತ್ತಿದ್ದ; ಏನೋ ಆಯಾಸವೆಂದು ಹೊರಳುತ್ತಿದ್ದ—ಸರಿಯಾಗಿ ಅನ್ನ ತಿನ್ನುತ್ತಿರಲಿಲ್ಲ, ನಿದ್ರೆ ಮಾಡುತ್ತಿರಲಿಲ್ಲ; ಡಾಕ್ಟರನ್ನು ಕೇಳಿದರೆ 'ಏನೂ ಇಲ್ಲ, ಅವರಿಗೇನು ಆರೋಗ್ಯವಾಗಿದ್ದಾರೆ, ಗಟ್ಟಿಮುಟ್ಟಾಗಿದ್ದಾರೆ' ಎನ್ನುತ್ತಿದ್ದರು. ಹೌದೋ? ಆ ಹುಡುಗಿ ಮಾತ್ರ ಗಂಡನ ಸಂಕಟ ನೋಡಲಾರದೆ, 'ಅಯ್ಯೋ! ಇದು ನನಗಾದರೂ ಬರಬಾರದೆ? ಅವರು ಆರೋಗ್ಯವಾಗಬಾರದೇ?' ಎಂದುಕೊಂಡಳು. ಆ ಹುಡುಗಿ ಪತಿವ್ರತೆ, ಸಚ್ಚರಿತ್ರೆ; ದೇವರು ಅವಳ ಪ್ರಾರ್ಥನೆಯನ್ನು ನಡೆಸಿಕೊಟ್ಟ!"

" ಹೀಗೆ ಅಂತ ಕಂಡಿದ್ದರೆ ಅವನನ್ನು ಕಲ್ಕತ್ತೆಗೆ ಕಳುಹಿಸುತ್ತಲೂ ಇರಲಿಲ್ಲ, ಅವನಿಗಾಗಿ ಸಾವಿರಾರು ರೂಪಾಯಿ ಖರ್ಚುಮಾಡುತ್ತಲೂ ಇರಲಿಲ್ಲ; ಈ ಕೆಲಸವಲ್ಲದಿದ್ದರೆ ಮತ್ತೊಂದು ಕೆಲಸವಾಗುತ್ತಿತ್ತು!"

" ಮುಂದೆ ಆಗುವುದನ್ನು ಯಾರು ಕಾಣಬಲ್ಲರಮ್ಮ?"

" ಕಂಡವರೂ ಹೇಳುವುದಿಲ್ಲ!"

" ಕಣ್ಣಿಗೆ ಕಂಡರೂ, ಬಾಯಿಗೆ ಮಾತು ಬರಬೇಕಲ್ಲಮ್ಮ?"

" ಬಾಯಿಗೆ ಬರದೆ ಕೈಗೆ ಬರುತ್ತದೆಯೆ?"

" ನಿಜ, ಮಾತು ಬರುವುದು ಬಾಯಿಯಿಂದಲೇಯೆ, ಕೈಯಿಂದ

ಅಲ್ಲ; ಆದರೆ ಬಾಯಿ ಮಾತನಾಡಬಲ್ಲದೇ ತಾಯಿ? ಆಡಿಸುವವನು ಆಡಿಸಿದರೆ ತಾನೇ ಅದು ಆಡಬಲ್ಲದು? ಅದು ಬರಿಯ ತುತ್ತೂರಿ; ಊದುವವನು ಊದಿದರೆ ತಾನೇ ಅದು ಊದೀತು?"

"ಈ ಚಮತ್ಕಾರದ ಮಾತಿಗೇನು!"

"ಚಮತ್ಕಾರವಲ್ಲವಮ್ಮ, ಯಥಾರ್ಥ! ಭಗವತ್ಸಂಕಲ್ಪವನ್ನು ಯಾರು ಮೀರುವುದಕ್ಕಾದೀತು? ಇದರಮೇಲೆ, ಹೇಳಿದರೆ ತಾನೆ ಅದು ನಮ್ಮ ಕಿವಿಗೆ ಬಿದ್ದೀತೆ? ನಾವು ಕೇಳುತ್ತೇವೆಯೋ? ದೇವರಿಗೆ ಸಾವಿರಾರು ಬಾಯಿ; ಯಾವ ಬಾಯಿಯಿಂದ ಏನು ಆಡುತ್ತಾನೆಯೋ! ನಮಗೆ ಕೇಳುವುದಕ್ಕೆ ಕಿವಿ ಬೇಡವೆ? ಅರಿಯುವುದಕ್ಕೆ ಜ್ಞಾನ ಬೇಡವೇ? ನೀವು ಒಂದು ಸಾರಿ ನಿಮ್ಮೂರಿನಿಂದ ಬರುತ್ತಿರುವಾಗ ಚನ್ನಪಟ್ಟಣದಲ್ಲಿ ಒಬ್ಬರು ರೈಲಿಗೆ ಹತ್ತಿ, ಮಾತಿಗೆ ಮಾತು ಬಂದಾಗ, ಕಲ್ಕತ್ತೆಗೆ ಯಾಕೆ ಹೋಗಬೇಕು, ಕೊಡುವ ದೇವರು ಎಲ್ಲಿದ್ದರೂ ಕೊಡುತ್ತಾನೆ ಎನ್ನಲಿಲ್ಲವೇ? ನೀವೇಕೆ ಕೇಳಲಿಲ್ಲ? ಇದೆಲ್ಲಾ ಬ್ರಾಹ್ಮಣರಿಗೆ ಬಂದದ್ದಲ್ಲ, ಎಂದು ನಿಮ್ಮ ಪುರೋಹಿತರು ಎನ್ನಲಿಲ್ಲವೇ, ಅವರ ಮಾತನ್ನೇಕೆ ಲಕ್ಷ್ಯಮಾಡಲಿಲ್ಲ? ಗಾಡಿ ಹೊಡೆಯುವವನು ಹೇ ಹೇ ಎಂದು ಕೂಗಿಕೊಂಡು ಹೋಗುತ್ತಾನೆ. ಅದನ್ನು ಕಿವಿಯ ಮೇಲೆ ಹಾಕಿಕೊಳ್ಳದಿದ್ದರೆ ಗಾಡಿಗೆ ಸಿಕ್ಕಿಕೊಳ್ಳಬೇಕು............ಅಲ್ಲಿ ನೋಡಿ, ಮಗು ಅಳುತ್ತೆ; ಕರೆದುಕೊಳ್ಳಿ! ಪಾಪ, ನೆಲದ ಮೇಲೆ ಹಾಕಿಬಿಟ್ಟಿದ್ದೀರಲ್ಲ ಹಾಗೆ!"

"ಅತ್ತರೆ ಅಳಲಿ! ಯಾರಿಗೆ ಬೇಕು!"

"ಇದಕ್ಕೇ ಅದನ್ನು ನೀವು ಕೇಳಿ ಪಡೆದದ್ದು?"

"ಇದನ್ನೇ ನಾನು ಕೇಳಿದ್ದು? ನಾನು ಪಡೆದೆನೇ?"

"ಇನ್ಯಾರು ಕೇಳಿದ್ದು? ಮತ್ಯಾರು ಪಡೆದದ್ದು? ದೇವರು ಕೊಟ್ಟಿದ್ದನ್ನ ಚೆನ್ನಾಗಿ ನೋಡಿಕೊಳ್ಳಬೇಕಮ್ಮ! ಇಲ್ಲದಿದ್ದರೆ ಅದು ದಕ್ಕುವುದಿಲ್ಲ."

"ಹಾಗಾದರೆ ನನ್ನ ಮಗಳನ್ನು ನಾನು ನೋಡಿಕೊಳ್ಳಲಿಲ್ಲವೇ? ಅವಳೇಕೆ ದಕ್ಕಲಿಲ್ಲ?"

“ನೋಡಿಕೊಂಡಿರಿ; ಇಲ್ಲವೆನ್ನುವುದಕ್ಕಾಗುತ್ತದೆಯೇ? ಆದರೆ ಎಷ್ಟು ಆದರಿಸಬೇಕೋ ಅಷ್ಟು ಆದರಿಸಲಿಲ್ಲ; ಎಷ್ಟು ವಿಶ್ವಾಸ ತೋರಿಸಬೇಕೋ ಅಷ್ಟು ತೋರಿಸಲಿಲ್ಲ; ಆ ಹುಡುಗಿ ಎಷ್ಟುದಿನ ಕಣ್ಣೀರು ಹಾಕಲಿಲ್ಲ? ಎಷ್ಟುದಿನ ಇವಳು ಏಕೆ ಹುಟ್ಟಿದಳೋ ಎಂದು ನೀವು ಎನ್ನಲಿಲ್ಲ? ನಿಮ್ಮ ಮನೆಯ ಆಳು ತೋಟದಲ್ಲಿರುವ ಗಿಡಗಳನ್ನು ನೋಡಿಕೊಳ್ಳದೆ, ನೀರು ಹಾಕದೆ, ಅವುಗಳನ್ನು ಬಳಲಿಸಿದರೆ ನೀವು ಸುಮ್ಮನೆ ಇರುತ್ತೀರಾ?”

“ಗಿಡಗಳ ಮನೆ ಹಾಳಾಯಿತು!”

“ಸಂಸಾರವೂ ಒಂದು ತೋಟದ ಹಾಗೆ ತಾಯಿ! ಬಲಿತ ಮರಗಳು ಬೆಳೆದುಕೊಂಡು ಹೋಗುತ್ತವೆ; ಎಳೆಯ ಸಸಿಗಳನ್ನು ನೋಡಿಕೊಳ್ಳದೆ ಒಣಗಿಸಿದರೆ ಹೇಗೆ?”

“ಹಾಗಾದರೆ ಯಾರನ್ನೂ ಏನೂ ಅನ್ನಲೇಕೂಡದೇ?”

“ಯಾಕೆ ಅನ್ನಬೇಕಮ್ಮ? ಮತ್ತೊಬ್ಬರು ಅಂದರೆ, ಪ್ರತಿಯಾಗಿ ಅನ್ನುವುದುಂಟು; ಏನೂ ಇಲ್ಲದೆ ನಮ್ಮ ಯಜಮಾನಿಕೆ, ನಮ್ಮ ದೊಡ್ಡತನ, ನಮ್ಮ ದವಲತ್ತು ತೋರಿಸುವುದಕ್ಕೆ ಮತ್ತೊಬ್ಬರ ಮನಸ್ಸನ್ನು ನೋಯಿಸಬೇಕೇ? ತಿಳಿದವರು, ಹದವಾದವರು, ನೊಂದುಕೊಳ್ಳುವುದಿಲ್ಲ. ಮಿಕ್ಕವರು?........ಸಮಾಧಾನ ಮಾಡಿಕೊಳ್ಳಿ; ಮಗುವನ್ನು ಸಾಕಿ, ಇರುವವರನ್ನು ನೋಡಿಕೊಂಡು ಸಂತೋಷವಾಗಿರಿ—ತಗೊಳ್ಳಿ ಕುಂಕುಮ ಇಟ್ಟುಕೊಳ್ಳಿ; ಊರಿಗೆ ಹೋಗಿಬಿಟ್ಟು ಬನ್ನಿ!”

“ನನಗೆ ಕುಂಕುಮವೂ ಬೇಡ, ಏನೂ ಬೇಡ; ಒಂದು ಸಲ ಇಟ್ಟುಕೊಂಡು ಆಯಿತಲ್ಲ!”

“ಮುತ್ತೈದೆಯರು ಹಾಗೆನ್ನಬಾರದು; ತಗೊಳ್ಳಿ. ಆ ಪಾಪವನ್ನೂ ನನ್ನ ತಲೆಗೆ ಕಟ್ಟಬೇಡಿ! ನಮ್ಮನ್ನು ನಾವು ಸಮಾಧಾನ ಮಾಡಿಕೊಳ್ಳದಿದ್ದರೆ ಮತ್ತಾರು ಮಾಡಿಯಾರಮ್ಮ? ದೇವರು ಬಂದು ಸಮಾಧಾನ ಹೇಳಿದರೂ ಅದು ನಮ್ಮ ಮನಸ್ಸಿಗೆ ಇಳಿದರಲ್ಲವೇ? ನಮ್ಮ ಮನಸ್ಸು ತಾನೇ ಸಮಾಧಾನವಾಗಬೇಕಾದದ್ದು? ಕೊನೆಗೆ ಯಾರಿಗೆ ಯಾರು? ನಮಗೆ ನಾವೇ!”

" ಹೌದು ; ಕೇಳಿದ್ದನ್ನು ಕೊಡದೆ, ಏನೋ ತಲೆಗೆ ಕಟ್ಟಿ ಸಮಾಧಾನಮಾಡಿಕೋ ಎಂದರೆ ಹೇಗೆ ಸಮಾಧಾನವಾಗುತ್ತೆ? ಹಿಂದೆ ಯಾರೋ ಒಬ್ಬ ಮೂಗ ತನಗೆ ಹೆಂಡತಿ ಬೇಕು ಅಂತ ಕೇಳಿದ್ದಕ್ಕೆ ಅವನಿಗೆ ಮದುವೆ ಮಾಡಿಸಲಾರದೆ ' ಮದುವೆ ಮಾಡಿಕೊಳ್ಳುವುದು ಮಕ್ಕಳಾಗುವುದಕ್ಕೆ ತಾನೆ! ಇಗೋ ಇವು ನಿನ್ನ ಮಕ್ಕಳು. ಒಂದಲ್ಲ, ಎರಡಲ್ಲ, ಮೂರು ; ಇವನ್ನು ಸಾಕು ' ಎಂದು ಮೂರು ಗಿಡಗಳನ್ನು ನೆಟ್ಟು ಅವುಗಳಿಗೆ ಅವನ ಕೈಯಲ್ಲಿ ಬೆನ್ನುಮೂರಿಯ ನೀರು ಹೊಯಿಸಿದ ರಂತೆ—ಹಾಗಾಯಿತು! "

" ನಿಜ, ಅಮ್ಮ ; ನಾನೂ ಆ ಕಥೆಯನ್ನು ಕೇಳಿದ್ದೇನೆ. ಆದರೆ ನಾವು ಕೇಳಿ ಕೇಳಿದ್ದನ್ನೆಲ್ಲಾ ಕೊಟ್ಟುಬಿಡಲು, ಯಾರು ಅದನ್ನು ಸಿದ್ಧ ವಾಗಿ ಕೈಲಿ ಹಿಡಿದುಕೊಂಡು ಸೊಂಟ ಕಟ್ಟಿಕೊಂಡು ಅಲ್ಲೆಲ್ಲೋ ಆಜ್ಞಾಧಾರಕರಾಗಿ ನಿಂತುಕೊಂಡಿದ್ದಾರೆ ಅಂತ ಮಾಡಿಕೊಂಡಿದ್ದೀರಿ? ತಗೊಳ್ಳಿ, ಕುಂಕುಮ ಇಟ್ಟುಕೊಳ್ಳಿ !........"

೧೯೪೪. ಗೋಪಾಲ.



# ಅಚ್ಚಿನ ತಪ್ಪುಗಳು

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧ | ೩ | ನೂರಾರು | ನೂರು |
| ೯ | ೬ | ಎಲ್ಲವನ್ನು | ಎಲ್ಲವನ್ನೂ |
| ೧೩ | ೧೨ | ಹಾಕುತ್ತಿರೇನೋ | ಹಾಕುತ್ತೀರೇನೋ |
| ೨೮ | ೨೧ | ಬಂದು ಓಲೆಯ | ಒಂದು ಓಲೆಯ |
| ೩೯ | ೨೪ | ಹಬ್ಬವೇ | ಹಬ್ಬವೇ ? |
| ೪೬ | ೧೭ | ಸಾಭ್ಯಸ | ಸಾಭ್ಯಸ್ಥ |
| ೬೧ | ೮ | ಬಟ್ಟನ | ಭಟ್ಟನ |
| [illegible] | ೩ | ತಿಳಿಯಿತು | ತಿಳಿಯಿತು. |
| ೧೦೦ | ೨೭ | ನನ | ನನ್ನ |
| ೧೦೨ | ೮ | ವ್ಯಕ್ತವಾಯಿತು, | ವ್ಯಕ್ತವಾಯಿತು ; |
| ೧೧೫ | ೧೭ | ಹೆಂಗಸರನ್ನು | ಹೆಂಗಸನ್ನು |
| ೧೧೬ | ೨೦ | ಗಂಟು | ಗಂಟುಗಂಟಾಗಿ |
| ೧೧೬ | ೨೨ | ಗಂಟಾಗಿ ಅರಳುತ್ತಿದ್ದರೆ | ಅರಳುತ್ತಿದ್ದರೆ |
| ೧೨೦ | ೨೦ | ಅಯಾಸ ಪರಿಹಾರಕ್ಕೆ | ಆಯಾಸ ಪರಿಹಾರಕ್ಕೇ |
| ೧೨೧ | ೨೭ | ಹೊಳೆಯತ್ತಾ | ಹೊಳೆಯುತ್ತಾ |
| ೧೨೨ | ೨೬ | ಬಿದಿರ್ದ | ಬಿದ್ದಿರ |
| ೧೩೦ | ೧೪ | ಬೆಳಯುವುದಿಲ್ಲ | ಬೆಳೆಯುವುದಿಲ್ಲ |
| ೧೩೭ | ೨೦ | ಕತ್ತರಿಯ | ಕತ್ತರಿಯು |
| ೧೪೨ | ೨೧ | ಅಳಬೇಕು | ಆಳಬೇಕು |
| ೧೪೪ | ೧೮ | ದೊಡ್ಡೋ | ದೊಡ್ಡೋ |
| ೧೪೫ | ೪ | ಮ್ಯೆಲಿಗೆ | ಮ್ಯೆಲಿಗೆ |
| ೧೪೬ | ೧೦ | ಘಂಟೆ | ಘಂಟೆಗೆ |
| ೧೫೮ | ೨೫ | ಕುಳುಹಿಸಿ | ಕಳುಹಿಸಿ |
| ೧೬೦ | ೩ | ಲಪಟ್ಬಾಗಿ ಮಗಿವರೆ | ಪಟ್ಬಾಗಿ ಮಲಗಿದರೆ |
| ೧೬೯ | ೧ | ನಿತ ಕೊಡಿಸಿ ಅಂಮ್ಮನ್ನು | ಕೊಡಿಸಿ ಅಂತ ನಿಮ್ಮನ್ನು |
| ೧೭೦ | ೪ | ಅವಳ | ಅವಳು |